# SASANA-PADYA-MANJARI

OR

# Poetical Extracts from Inscriptions

---

# ಶಾಸನ ಪದ್ಯಮಂಜರಿ

---

*(A. D. 700 to 1465)*

---

COMPILED BY

Praktana-vimarsa-vichakshana, Rao Bahadur

**R. Narasimhacharya, M.A., M.R.A.S.,**

Honorary Correspondent of the Government of India,

Archaeological Department,

Late Director of Archaeological Researches in Mysore.

AUTHOR OF

Karnataka-Kavicharite, Volumes I-III, Nitimanjari

Parts I and II, Nagegadalu, &c.

BANGALORE CITY

PRINTED AT THE GURUVILAS PRINTING WORKS

1923



[PRICE Rs. 2.

Dedicated

By Gracious Permission

to

His Highness

Sir Sri Krishna Raja Odeyar Bahadur

G. C. S. I., G. B. E.,

Maharaja of Mysore.

---

ಈ ಪುಸ್ತಕವು

ಮೈಸೂರು ಸಂಸ್ಥಾನದ ಮಹಾಪ್ರಭುಗಳಾದ

ಶ್ರೀ ಕೃಷ್ಣರಾಜ ಒಡೆಯರ್ ಬಹಾದುರ್

ಜಿ. ಸಿ. ಎಸ್. ಐ., ಜಿ. ಬಿ. ಇ.

ಮಹಾ ಸ್ವಾಮಿಯವರಿಗೆ

ಅಪ್ಪಣೆಯನ್ನು ಪಡೆದು

ಅರ್ಪಿಸಲ್ಪಟ್ಟಿದೆ.

---

## ಶಾಸನಗಳಿರುವ ಪ್ರದೇಶಗಳ ವರ್ಣಾನುಕ್ರಮಣಿಕೆ

## Alphabetical list of the Places where the Inscriptions are found.

# ಶಾಸನಗಳಲ್ಲಿ ಹೇಳಿರುವ ರಾಜವಂಶಗಳು

# Dynasties of Kings mentioned in the Inscriptions.

---

### ಸಾಂತರರು



### ಪಾಂಡ್ಯರು



### ಸಿಂದರು



### ಕಾದಂಬರು



### ನಿಡುಗಲ್ಲ ರಾಜರು



### ವಿಜಯನಗರದ ರಾಜರು

# PREFACE

In my *Karnataka-Kavicharite* or *Lives of Kannada Poets* I have given extracts from those inscriptions of which the composers are known. But we have besides numerous Kannada inscriptions both in and outside Mysore which are excellent specimens of poetical composition though their authors are not known. These, too, well deserve the attention of the Kannadigas. They have only to be brought to their notice to be appreciated by them. Being however imbedded in bulky volumes such as the Epigraphia Carnatica or in the issues of learned journals such as the Epigraphia Indica, the Indian Antiquary, the Journal of the Bombay Branch of the Royal Asiatic Society and so forth, these records are not easily accessible to most people, and even if the volumes and issues can be procured, very few can afford to spend the time and labour involved in wading through them to get at the inscriptions. I have therefore put together in the present work extracts from some selected inscriptions in order to give to the Kannadigas a taste of the style and beauty of these compositions of their own countrymen, which cannot but arouse a feeling of pride in them.

The number of inscriptions selected is 283. With the exception of 24 which are in the Bombay Presidency, all of them are in Mysore. Details about their localities are given in 'The Alphebetical list of Places' at the beginning of the book. The inscriptions bear

consecutive numbers from 1 to 283 † and are in chronological order, ranging in date from about A.D. 700 to 1465. Each record has at the top a brief note giving the subject-matter and in most cases the name of the reigning sovereign. The number of stanzas given in the extracts ranges from 1 to 40, and the total number of stanzas extracted is 1456. The dynasties of rulers to which the inscriptions relate are the Ganga, the Nolamba, the Chalukya, the Rashtrakuta, the Chola, the Kalachurya, the Sevuna, the Kongalva, the Hoysala, the Santara, the Pandya, the Sinda, the Kadamba, and those of Nidugal and Vijayanagara. For details about the dynastics, their kings and the inscriptions relating to them reference is invited to 'Dynasties of Kings mentioned in the Inscriptions' given at the beginning.

The importance of the inscriptions is not merely confined to their literary merit. They likewise throw considerable light on the political, social and religious conditions of the times to which they relate. The historical information given about the kings and their officers is of great value. The references to certain customs and practices in vogue at the time of the records are full of interest. Thus we learn from number 6, of about 900, that a man named Sambhu entered fire in fulfilment of a promise made to a Chalukya prince of the name of Parahitaraja. No. 241, of about 1220, gives a pathetic account of how on the death of Ballala II a prince named Kuvara-Lakshma, deeming it a

---

† Some mistakes have been made in numbering: the Narendra inscription (p. 62) bears no number, numbers 130 (p. 121) and 145 (p. 133) are left out, and number 261 is printed twice (pp. 248-9).

shame to survive his lord, committed suicide along with his loving wife and his devoted battalion of a thousand choice warriors. No. 189, of 1181, refers to the grant to a temple of the property of those who died heirless. Twenty-four of the inscriptions are *nishidigals* or epitaphs recording the death by starvation of Jaina men and women, mostly monks and nuns; and seventeen are *viragals* or memorials of heroes who fell in battle. Again, No. 27 refers to the establishment of a hostel for students so far back as 1066, as also Nos. 112 and 164 of the 12th century. No. 4, of about 700, shows the antiquity of the *tripadi* metre in Kannada. Finally, most of the records bear testimony to the prowess, piety, generosity, patriotism and toleration of the princes and the people.

Being arranged in chronological order, these extracts are of considerable value from a linguistic point of view, as they afford glimpses of the development of the language and the changes it has gradually undergone in the course of time.

It was originally intended to give these extracts in the third volume of the *Karnataka-Kavicharite* along with extracts from works of which the authors are unknown. But their importance in several respects other than that of their literary merit induced me to publish them as a separate book.

Difficult words are explained in the notes at the end of the book. A few grammatical and philological notes have also been added where they were deemed necessary.

I have to express my deep gratitude to His Highness the Maharaja of Mysore for gracious permission to dedicate this work to him.

BANGALORE
*10th October, 1923.*

---

# ಅವತರಣಿಕೆ

ಕರ್ಣಾಟಕ ಕವಿಚರಿತೆಯಲ್ಲಿ ಇಂಥ ಕವಿಗಳಿಂದ ರಚಿತವಾದುವು ಎಂದು ತಿಳಿದು ಬಂದ ಕೆಲವು ಶಾಸನಗಳಿಂದ ಮಾತ್ರ ಸ್ವಲ್ಪ ಭಾಗಗಳನ್ನು ಅನುವಾದಮಾಡಿದ್ದೇನೆ. ಆದರೆ ಮೈಸೂರು ಸಂಸ್ಥಾನದಲ್ಲಿಯೂ ಇತರ ಪ್ರದೇಶಗಳಲ್ಲಿಯೂ ಕವಿಗಳು ಗೊತ್ತಿಲ್ಲ ದಿದ್ದರೂ ಉತ್ತಮ ಕಾವ್ಯಸರಣಿಯಲ್ಲಿ ರಚಿತವಾದ ಅನೇಕ ಕನ್ನಡ ಶಾಸನಗಳು ದೊರೆ ಯುತ್ತವೆ. ಇವುಗಳೂ ಕನ್ನಡಿಗರ ಅವಲೋಕನಕ್ಕೆ ಯೋಗ್ಯವಾದುವು; ಇವು ಗಳನ್ನು ಅವರ ದೃಷ್ಟಿಪಥಕ್ಕೆ ತಂದಕೊಡಲೆ ಅವರು ಓದಿ ಆನಂದಿಸುವರು ಎಂಬುದ ರಲ್ಲಿ ಸಂದೇಹವಿಲ್ಲ. ಆದರೆ ಈ ಶಾಸನಗಳು ಹೆಚ್ಚು ಬೆಲೆಯುಳ್ಳ ದೊಡ್ಡ ದೊಡ್ಡ ಸಂಪುಟಗಳಲ್ಲಿಯೂ ಮಾಸಿಕ ಅಥವಾ ತ್ರೈಮಾಸಿಕ ಪತ್ರಿಕೆಗಳಲ್ಲಿಯೂ ಅಡಗಿರುವುದ ರಿಂದ ಅನೇಕರಿಗೆ ಸುಲಭವಾಗಿ ಸಿಕ್ಕಲಾರವು; ಒಂದುವೇಳೆ ಈ ಸಂಪುಟಗಳನ್ನೂ ಪತ್ರಿಕೆಗಳನ್ನೂ ದೊರಕಿಸಿಕೊಂಡರೂ ಬೇಕಾದ ಶಾಸನಗಳನ್ನು ಹುಡುಕಿ ತೆಗೆವುದು ಶ್ರಮಸಾಧ್ಯವು. ಕನ್ನಡಿಗರಿಗೆ ಈ ಶ್ರಮವನ್ನು ತಕ್ಕಮಟ್ಟಿಗೆ ತಪ್ಪಿಸಿ ಈ ಕವಿತೆಯ ಶೈಲಿಯ ಮತ್ತು ಸೊಬಗಿನ ರಸವನ್ನು ಸ್ವಲ್ಪಮಟ್ಟಿಗಾದರೂ ಆಸ್ವಾದನಮಾಡಲು ಅವ ಕಾಶವುಂಟುಮಾಡಬೇಕೆಂಬ ಉದ್ದೇಶದಿಂದ ಕೆಲವು ಶಾಸನಗಳನ್ನು ಆರಿಸಿ ಅವುಗಳಿಂದ ಯೋಗ್ಯವಾದ ಭಾಗಗಳನ್ನು ಈ ಪುಸ್ತಕದಲ್ಲಿ ಸೇರಿಸಿದ್ದೇನೆ. ಇವು ಕನ್ನಡ ನಾಡಿ ನವರ ಕೃತಿಗಳಾದುದರಿಂದ ಇವುಗಳ ಉತ್ತಮಸರಣಿ ಕನ್ನಡಿಗರ ಹೃದಯದಲ್ಲಿ ಸ್ವಭಾವ ವಾಗಿ ಹೆಮ್ಮೆಯನ್ನು ಉಂಟುಮಾಡದೆ ಇರಲಾರದು.

ಈ ಪುಸ್ತಕಕ್ಕಾಗಿ ಆರಿಸಿದ ಶಾಸನಗಳ ಸಂಖ್ಯೆ 283. ಇವುಗಳಲ್ಲಿ, ಬಾಂಬೆ ಪ್ರಾಂತದಲ್ಲಿರುವ 24 ಶಾಸನಗಳನ್ನು ಬಿಟ್ಟರೆ, ಉಳಿದುವೆಲ್ಲಾ ಮೈಸೂರು ಸಂಸ್ಥಾನ ದಲ್ಲಿಯೇ ಇವೆ. ಒಟ್ಟು ಶಾಸನಗಳಿರುವ ಪ್ರದೇಶಗಳು 56: ಮೈಸೂರು ಸಂಸ್ಥಾನ ದಲ್ಲಿ 36, ಬಾಂಬೆ ಪ್ರಾಂತದಲ್ಲಿ 20. ಇವುಗಳ ವಿವರವು ಪುಸ್ತಕದ ಆದಿಭಾಗದಲ್ಲಿ ಕೊಟ್ಟಿರುವ ಪ್ರದೇಶಗಳ ಪಟ್ಟಿಯಿಂದ ವ್ಯಕ್ತವಾಗುತ್ತದೆ. ಶಾಸನಗಳಿಗೆ 1 ರಿಂದ 283ರ ವರೆಗೆ ಅನುಕ್ರಮವಾದ ಸಂಖ್ಯೆಗಳು ಕೊಟ್ಟಿವೆ †; ಅವು ಸುಮಾರು 700 ರಿಂದ 1465ರ ವರೆಗೆ ಕಾಲಕ್ರಮವಾದ ಅನುಪೂರ್ವಿಯಲ್ಲಿ ಮುದ್ರಿತವಾಗಿವೆ. ಒಂದೊಂದು ಶಾಸನದ ಆದಿಭಾಗದಲ್ಲಿಯೂ ಅದರಲ್ಲಿ ಉಕ್ತವಾದ ವಿಷಯವೂ ಇದ್ದಕಡೆ ಆಗ ಆಳುತ್ತಿದ್ದ

† ಸಂಖ್ಯೆ ಕೊಡುವುದರಲ್ಲಿ ಕೆಲವು ತಪ್ಪುಗಳು ಬಿದ್ದಿವೆ: ನರೇಂದ್ರದ ಶಾಸನಕ್ಕೆ (ಪುಟ 62) ಸಂಖ್ಯೆಯೇ ಇಲ್ಲ; ಸಂಖ್ಯೆಗಳು 130 (ಪುಟ 121) ಮತ್ತು 145 (ಪುಟ 133) ಬಿಟ್ಟುಹೋಗಿವೆ; 261 ಎರಡು ಸಲ ಬಿದ್ದಿದೆ (ಪುಟ 248-9).

ರಾಜನ ಹೆಸರೂ ಹೇಳಿವೆ. ಅನುವಾದಮಾಡಿರುವ ಭಾಗಗಳಲ್ಲಿ 1 ರಿಂದ 40 ರ ವರೆಗೆ ಪದ್ಯಗಳಿವೆ; ಒಟ್ಟು ಅನುವಾದಮಾಡಿರುವ ಪದ್ಯಗಳ ಸಂಖ್ಯೆ 1456. ಈ ಶಾಸನಗಳು— ಗಂಗ, ನೊಳಂಬ, ಚಾಳುಕ್ಯ, ರಾಷ್ಟ್ರಕೂಟ, ಚೋಳ, ಕಳಚುರ್ಯ, ಸೇವುಣ, ಕೊಂಗಾಳ್ವ, ಹೊಯ್ಸಳ, ಸಾಂತರ, ಪಾಂಡ್ಯ, ಸಿಂದ, ಕಾದಂಬ, ನಿಡುಗಲ್ಲು, ವಿಜಯನಗರ—ಎಂಬ 15 ರಾಜವಂಶಗಳಿಗೆ ಅನ್ವಯಿಸುತ್ತವೆ. ದೇವಗಿರಿಯ ಯಾದವ ವಂಶದ ರಾಜರಿಗೆ ಸೇವುಣರು ಎಂದು ಹೆಸರು. ಕೊಂಗಾಳ್ವರು ಕೊಡಗು ಅರಕಲ್ಗೂಡು ಈ ಪ್ರಾಂತಗಳಲ್ಲಿ ರಾಜ್ಯವಾಳಿದರು. ಸಾಂತರರಿಗೆ ನಗರದ ತಾಲ್ಲೂಕಿನಲ್ಲಿಯ ಹೊಂಬುಚ್ಚವು ರಾಜಧಾನಿಯಾಗಿದ್ದಿತು. ಪಾಂಡ್ಯರು ಚಿತ್ರದುರ್ಗಪ್ರಾಂತದಲ್ಲಿ ಆಳುತ್ತಿದ್ದರು; ಇವರ ರಾಜಧಾನಿ ಉಚ್ಚಂಗಿ. ಸಿಂದರ ರಾಜ್ಯಕ್ಕೆ ಸಿಂದವಾಡಿ ಎಂದು ಹೆಸರು; ಇವರು ಹೊನ್ನಾಳಿಯ ಪ್ರಾಂತದಲ್ಲಿ ದೊರೆಗಳಾಗಿದ್ದರು. ನಿಡುಗಲ್ಲ ರಾಜರು ಚೋಳವಂಶದವರು; ಇವರ ಪೂರ್ವದ ರಾಜಧಾನಿ ಹೆಂಜೆರು. ಇದು ಈಗ ಮಡಕಸಿರಾ ತಾಲ್ಲೂಕಿನಲ್ಲಿರುವ ಹೇಮಾವತಿ ಎಂಬ ಸ್ಥಳವು. ಈಚೆಗೆ ಪಾವುಗಡ ತಾಲ್ಲೂಕಿನಲ್ಲಿಯ ನಿಡುಗಲ್ಲು ಇವರ ರಾಜಧಾನಿಯಾಯಿತು. ಈ ವಂಶಗಳ ರಾಜರ ಮತ್ತು ಅವರಿಗೆ ಸಂಬಂಧಿಸಿದ ಶಾಸನಗಳ ವಿವರವನ್ನು ಆರಂಭದಲ್ಲಿ ಕೊಟ್ಟಿರುವ ರಾಜವಂಶಗಳ ಪಟ್ಟಿಯಿಂದ ತಿಳಿದುಕೊಳ್ಳಬಹುದು.

ಈ ಶಾಸನಗಳಿಗೆ ಕವಿತಾಶೈಲಿಯೊಂದರಿಂದಲೇ ಮಹತ್ವವುಂಟಾಗಿದೆ ಎಂದು ತಿಳಿಯಬಾರದು. ಇವು ಆ ಆ ಕಾಲದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿಗಳನ್ನು ಸ್ಪಷ್ಟವಾಗಿ ತಿಳಿಸುತ್ತವೆ. ಇವುಗಳಲ್ಲಿ ರಾಜರುಗಳ ವಿಷಯವಾಗಿಯೂ ಅವರಿಗೆ ಅಧೀನರಾದ ಅಧಿಕಾರಿಗಳ ವಿಷಯವಾಗಿಯೂ ಹೇಳಿರುವ ಚರಿತ್ರಸಂಬಂಧವಾದ ಅಂಶಗಳು ಬಹಳ ಮುಖ್ಯವಾದುವು. ಅಲ್ಲದೆ ಆ ಆ ಕಾಲದಲ್ಲಿ ಬಳಕೆಯಲ್ಲಿದ್ದಂತೆ ಇವುಗಳಿಂದ ತಿಳಿದು ಬರುವ ಕೆಲವು ಪದ್ಧತಿಗಳೂ ಆಚಾರಗಳೂ ನಮಗೆ ಕುತೂಹಲವನ್ನು ಉಂಟುಮಾಡತಕ್ಕುವುಗಳಾಗಿವೆ. ಈ ವಿಷಯವನ್ನು ಕೆಲವು ಉದಾಹರಣೆಗಳಿಂದ ಸ್ಪಷ್ಟಪಡಿಸುತ್ತೇನೆ. ಸುಮಾರು 900 ರಲ್ಲಿ ಹುಟ್ಟಿದ 6 ನೆಯ ಶಾಸನದಲ್ಲಿ ಶಂಭು ಎಂಬವನು ಚಾಳುಕ್ಯವಂಶದ ಪರಹಿತರಾಜನಿಗೆ ಭಾಷೆಕೊಟ್ಟಂತೆ ಅಗ್ನಿಪ್ರವೇಶ ಮಾಡಿ ಸತ್ತಂತೆ ಹೇಳಿದೆ. ಸುಮಾರು 1220 ರಲ್ಲಿ ಬರೆದ 241 ನೆಯ ಶಾಸನದಲ್ಲಿ 2 ನೆಯ ಬಲ್ಲಾಳನು ಸಾಯಲು ತನ್ನ ಸ್ವಾಮಿಯ ಮರಣಾನಂತರ ತಾನು ಬದುಕಿರುವುದು ನಾಚಿಕೆಗೇಡೆಂದು ಭಾವಿಸಿ ಆ ದೊರೆಯ ದಂಡನಾಥನಾದ ಕುವರಲಕ್ಷ್ಮನು ತನ್ನ ಸತಿಯೊಡನೆಯೂ ತನ್ನ ಕೈಯ ಕೆಳಗಿದ್ದ ಸಾವಿರಜನ ವೀರರೊಡನೆಯೂ ಸತ್ತನೆಂದು ಹೇಳಿದೆ. 1181 ರಲ್ಲಿ ಹುಟ್ಟಿದ 189 ನೆಯ ಶಾಸನದಲ್ಲಿ ಮಂತ್ರಿ ಕೇಶವರಾಜನು ಗವರೇಶ್ವರದೇವರಿಗೆ ಅಪುತ್ರಿಕಮೃತಕಧನವನ್ನು ಬಿಟ್ಟಂತೆ ಹೇಳಿದೆ. ಈ ಶಾಸನಗಳಲ್ಲಿ 24 ನಿಸಿದಿಗಲ್ಲುಗಳೂ 17 ವೀರಗಲ್ಲುಗಳೂ ಇವೆ. ಅನಶನವ್ರತದಿಂದ

ಸತ್ತ ಜೈನ ಸ್ತ್ರೀ ಪುರುಷರ, ಮುಖ್ಯವಾಗಿ ಸನ್ಯಾಸಿ ಸನ್ಯಾಸಿನಿಯರ, ಜ್ಞಾಪಕಾರ್ಥವಾಗಿ ನಟ್ಟ ಕಲ್ಲುಗಳಿಗೆ ನಿಸಿದಿಗಲ್ಲುಗಳೆಂದೂ ಯುದ್ಧದಲ್ಲಿ ಮಡಿದ ವೀರರ ಜ್ಞಾಪಕಾರ್ಥ ವಾಗಿ ನಟ್ಟ ಕಲ್ಲುಗಳಿಗೆ ವೀರಗಲ್ಲುಗಳೆಂದೂ ಹೆಸರು. ವಿದ್ಯಾರ್ಥಿಗಳ ಸೌಕರ್ಯಕ್ಕಾಗಿ ಭೋಜನಶಾಲೆಗಳ ಏರ್ಪಾಡು ಬಹಳ ಕಾಲಕ್ಕೆ ಹಿಂದೆಯೇ, ಎಂದರೆ 11, 12 ನೆಯ ಶತಮಾನಗಳಲ್ಲಿಯೇ ಇದ್ದಿತು ಎಂಬಂಶವು 17, 112, 164 ನೆಯ ಶಾಸನಗಳಿಂದ ತಿಳಿಯುತ್ತದೆ. ಸುಮಾರು 700 ರಲ್ಲಿ ಹುಟ್ಟಿದ 4 ನೆಯ ಶಾಸನದಿಂದ ಕನ್ನಡದಲ್ಲಿ ತ್ರಿಪದಿಯ ಪ್ರಾಚೀನತೆ ವ್ಯಕ್ತವಾಗುತ್ತದೆ. ಹೀಗೆ ಈ ಶಾಸನಗಳಿಂದ ವಿಮರ್ಶಾರ್ಹ ವಾದ ಹಲವು ವಿಷಯಗಳು ತಿಳಿದುಬರುತ್ತವೆ. ಇದಲ್ಲದೆ ಇವುಗಳಲ್ಲಿ ಹಲವು ರಾಜರ ಮತ್ತು ಪ್ರಜೆಗಳ ಶೌರ್ಯ, ದೈವಭಕ್ತಿ, ಔದಾರ್ಯ, ದೇಶವಾತ್ಸಲ್ಯ, ಧಾರ್ಮಿಕಸಮ ಬುದ್ಧಿ ಇವುಗಳನ್ನು ಘಂಟಾಘೋಷವಾಗಿ ಸಾರುತ್ತವೆ.

ಈ ಪುಸ್ತಕದಲ್ಲಿ ಅನುವಾದಮಾಡಿರುವ ಶಾಸನ ಭಾಗಗಳು ಕಾಲಕ್ರಮವಾದ ಆನುಪೂರ್ವಿಯಲ್ಲಿರುವುದರಿಂದ ಕಾಲಕ್ರಮದಲ್ಲಿ ಉಂಟಾದ ಭಾಷೆಯ ಬೆಳೆವಣಿಗೆ, ಮಾರ್ಪಾಡು ಇವುಗಳನ್ನು ತೋರಿಸುವುದರ ಮೂಲಕ ಭಾಷಾಚರಿತ್ರಜ್ಞಾನಕ್ಕೆ ಸಹ ಕಾರಿಗಳಾಗಿವೆ.

ಮೊದಲು ಈ ಶಾಸನಭಾಗಗಳನ್ನು ಕರ್ಣಾಟಕಕವಿಚರಿತೆಯ 3 ನೆಯ ಸಂಪುಟ ದಲ್ಲಿಯ ಕವಿಗಳು ಗೊತ್ತಿಲ್ಲದ ಗ್ರಂಥಗಳ ಭಾಗಗಳೊಡನೆ ಕೊಡಬೇಕೆಂದು ಎಣಿಸಿ ದ್ದೆನು; ಆದರೆ ಕವಿತಾಶೈಲಿಯೊಂದರಲ್ಲಿ ಮಾತ್ರವಲ್ಲದೆ ಹಿಂದೆ ತಿಳಿಸಿದಂತೆ ಇತರ ವಿಧಗಳಲ್ಲಿಯೂ ಇವುಗಳಿಗೆ ಇರುವ ಪ್ರಾಮುಖ್ಯವನ್ನು ನೋಡಿ ಪ್ರತ್ಯೇಕವಾಗಿ ಕೊಡು ವುದು ಯುಕ್ತವೆಂದು ತೋರಿ ಈ ಪುಸ್ತಕರೂಪವಾಗಿ ಮಾಡಿ ಕನ್ನಡಿಗರಿಗೆ ಕಾಣಿಕೆ ಯಾಗಿ ಒಪ್ಪಿಸಿದ್ದೇನೆ.

ಪುಸ್ತಕದ ಅಂತ್ಯಭಾಗದಲ್ಲಿ ಕ್ಲಿಷ್ಟಪದಗಳಿಗೆ ಅರ್ಥವೂ ಅವಶ್ಯವಾದ ಕಡೆ ವ್ಯಾಕರಣ, ಶಬ್ದತತ್ವ ಇವಕ್ಕೆ ಸಂಬಂಧಿಸಿದ ಟಿಪ್ಪಣವೂ ಕೊಟ್ಟಿವೆ.

ಈ ಪುಸ್ತಕವನ್ನು ತಮಗೆ ಅರ್ಪಿಸಲು ಅಪ್ಪಣೆಯನ್ನು ದಯೆಪಾಲಿಸಿದುದಕ್ಕಾಗಿ ಶ್ರೀಮನ್ಮಹಾರಾಜರವರಿಗೆ ಅತ್ಯಂತ ಕೃತಜ್ಞನಾಗಿದ್ದೇನೆ.

ಬೆಂಗಳೂರು
10-10-1923

---

॥ ಶ್ರೀಃ ॥

# ಶಾಸನ ಪದ್ಯ ಮಂಜರಿ



## 1 ಶ್ರವಣಬೆಳ್ಗೊಳ 27. ಸು. 700

**ಇದರಲ್ಲಿ ಮಾಸೇನರು ನೋಂತು ಸ್ವರ್ಗಕ್ಕೆ ಹೋದರೆಂದು ಹೇಳಿದೆ.**

ಮಾಸೇನರ್ ಪರಮಪ್ರಭಾವಋಷಿಯರ್ ಕಟ್ವಪ್ಪಿನಾವೆಟ್ಟದುೞ್ ।
ಶ್ರೀಸಂಘಂಗಳ ಪೇೞ್ದ ಸಿದ್ಧಸಮಯಂ ತಪ್ಪಾದೆ ನೋಂತಿಂಬಿನಿಂ ॥
ಪ್ರಾಸಾದಾಂತರಮಾನ್ ವಿಚಿತ್ರಕನಕಪ್ರಜ್ವಲ್ಯದಿಂ ಮಿಕ್ಕುದಾನ್ ।
ಸಾಸಿರ್ವರ್ ವರಪೂಜೆದಂಡುಯೆ ಅವರ್ ಸ್ವರ್ಗಾಗ್ರಮಾನೇಱಿದಾರ್ ॥1॥



## 2 ಶ್ರವಣಬೆಳ್ಗೊಳ 76. ಸು. 700

**ಇದರಲ್ಲಿ ಸಸಿಮತಿಗಂತಿಯರು ಬೆಳ್ಗೊಳದಲ್ಲಿ ಮುಡಿಪಿದಂತೆ ಹೇಳಿದೆ.**

ನೆಱೆದಾದ ಪ್ರತಶೀಲನೋಂಪಿಗುಣದಿಂ ಸ್ವಾಧ್ಯಾಯಸಂಪತ್ತಿನಿಂ ।
ಕಱೆಯಿಲ್ಲಲ್ತಪಧರ್ಮದಾ ಸಸಿಮತಿಶ್ರೀಗಂತಿಯರ್ ವಂದು ಮೇಲ್ ॥
ಅಱಿದಾಯುಷ್ಯಮನೆಂತು ನೋಡೆನಗೆ ತಾನಿಂತೆಂದು ಕಟ್ವಪ್ಪಿನುೞ್ ।
ತೊಱೆದಾರಾಧನೆನೋಂತು ತೀರ್ಥಗಿರಿಮೇಲ್ ಸ್ವರ್ಗಾಲಯಕ್ಕೇಱಿದಾರ್ ॥2॥



## 3 ಶ್ರವಣಬೆಳ್ಗೊಳ 88. ಸು. 700

**ಇದರಲ್ಲಿ ನಂದಿಸೇನಮುನಿ ಮುಡಿಪಿದಂತೆ ಹೇಳಿದೆ.**

ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆಱವೋಲ್ ಮಂಜುವೋಲ್ ತೋಱಿ ಬೇಗಂ ।
ಪಿರಿಗುಂ ಶ್ರೀರೂಪಲೀಲಾಧನವಿಭವಮಹಾರಾಶಿಗಳ್ ನಿಲ್ಲವಾರ್ಗಂ ॥
ಪರಮಾರ್ಥಂ ಮೆಚ್ಚೆನಾನೀಧರಣಿಯುಳಿರವಾನೆಂದು ಸನ್ಯಾಸನಂಗೆ ।
ಯ್ದುರುಸತ್ವರ್ ನಂದಿಸೇನಪ್ರವರಮುನಿವರರ್ ದೇವಲೋಕಕ್ಕೆ ಸಂದಾರ್ ॥3॥

4 ಬಾದಾಮಿಯ ಶಾಸನ

(ಇಂಡಿಯನ್ ಆಂಟಿಕ್ವರಿ X, 61). ಸು. 700

ಇದರಲ್ಲಿ ಕಲಿಯುಗವಿಪರೀತನ್ ಎಂಬ ಬಿರುದುಳ್ಳ ಕಪ್ಪೆಅರಭಟ್ಟನ ಸ್ತುತಿ ಇದೆ.

ಸಾಧುಗೆ ಸಾಧು ಮಾಧುರ್ಯ್ಯನ್ಗೆ ಮಾಧುರ್ಯ್ಯಂ । ಬಾಧಿಪ್ಪ ಕಲಿಗೆ ಕಲಿಯುಗ ।
ವಿಪರೀತನ್ ಮಾಧವನೀತನ್ ಪೆಱನಲ್ಲ ॥4॥

ಒಳ್ಳಿತ್ತ ಕಯ್ಯೊಳ್ಪರಾರ್ ಪೊಲ್ಲದುಮದಱಂತೆ । ಬಲ್ಲಿತ್ತು ಕಲಿಗೆ ವಿಪರೀತಾ ।
ಪುರಾಕೃತಮಿಲ್ಲಿ ಸಂಧಿಕ್ಕುಮದು ಬಂದು ॥5॥

ಕಟ್ಟಿದ ಸಿಂಘಮನ್ ಕಟ್ಟೋ ದೇನೆಮಗೆಂದು । ಬಿಟ್ಟವೋಲ್ ಕಲಿಗೆ ವಿಪರೀತಂ ।
ಗಹಿಶಕ್ಕರ್ಗ್ಗೆ ಕೆಟ್ಟರಾ ಮೇಣಾ ಸತ್ತ್ರವಿಚಾರಂ ॥6॥

---

೫ ಮುಳಬಾಗಿಲು 38. ಸು. 900

ಇದರಲ್ಲಿ ನೊಳಂಬರಾಜನಾದ ವೀರಮಹೇಂದ್ರನ ಪರೋಕ್ಷದಲ್ಲಿ ದೀವಬ್ಬರಸಿ ದೀವಬ್ಬೆಸಮುದ್ರವನ್ನೂ ದೇವಸ್ಥಾನಗಳನ್ನೂ ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ದೀವಬ್ಬೆಸಮುದ್ರ

ವಿದಿತಂ ಲೋಕಕ್ಕೆ ಮುನ್ನಂ ರಘುಕುಳದಹನೋಗ್ರೇಷುವಿಂ ಕಾಯ್ದು ತಿಣ್ಣಂ ।
ಕುದಿಗೊಂಡಱಿಕ್ಕತ್ತ ಗಸ್ತ್ಯಂ ಕುಡಿಯುತುಗುೞ್ದಸಿಂ ಕಟ್ಟುಪಟ್ಟಿರ್ದ್ದದಿಂತ ॥
ಪ್ಪುದು ಪೆಂಪಂ ತಾಳ್ದಿತೆಂದಂದಱಿಯರೆ ಲವಣಾಂಭೋಧಿಯಂ ಪೋಲಿಸಲ್ವೇ ।
ಡಿದುವೆತ್ತಾನೆತ್ತಲೆಂಬಿಂತತಿಬಹಳಜಳಂ ದೀವಳಬ್ಬಾಸಮುದ್ರಂ ॥7॥

ಪಡೆದಾಯಾಸಕ್ಕೆ ಪಕ್ಕಾಗಿರೆ ಗಡ ಪಿರಿದುಂ ಭ್ರಾಂತಿನಿಂ ಪೋಪುದೊಂದ ।
ಬ್ದದೊಳಿಂತೆಂತಾನುಪಯ್ಯುತ್ತಿರದಮರನದೀಕಾಂತೆಯಂ ಕಾಣ್ಬರೀ.. ॥
..ದೆಸರ್ ಪಯ್ಪಿಂತಿಪೇಂ ಸಂಭವಿಸಿತೊ ನಮುಗಪ್ಪುೞ್ಕಱಿಂ ಗಂಗೆ ತೆಂಕ ।
ಣ್ಗಿದಿರಂ ಬಂದಿರ್ದ್ದದೆಂಬಿಂತತಿಬಹಳಜಳಂ ದೀವಳಬ್ಬಾಸಮುದ್ರಂ ॥8॥

---

6 ಕೋಟೂರು ಶಾಸನ

(ಇಂಡಿಯನ್ ಆಂಟಿಕ್ವರಿ XX, 69). ಸು. 900

ಇದರಲ್ಲಿ ಶಂಭು ಎಂಬವನು ಚಾಳುಕ್ಯವಂಶದ ಪರಹಿತರಾಜನಿಗೆ ಭಾಷೆ ಕೊಟ್ಟಂತೆ ಅಗ್ನಿಪ್ರವೇಶಮಾಡಿ ಸತ್ತು ಸ್ವರ್ಗವನ್ನು ಪಡೆದನೆಂದು ಹೇಳಿದೆ.

ಪೊಗೞಲ್ಕಳುಂಬಮಪ್ಪೊ | ಳ್ಪುಗಳನೆ ತನಗವನೆ ಶಾಶ್ವತಂ ಮಾಡಿ ಧಗ |
ದ್ಧಗಿತಶಿಖಿ ಸೆಕೆಯ ಕೊಳೆ ನಗೆ | ಮೊಗದಿಂ ಶಂಭುವನೆ ಶಂಭು ನೆನೆಯುತ್ತಿರ್ದಂ||9||
ಮುನ್ನೆಗೞ್ದ ವೇಳೆವಡಿಚರು | ಮಿನ್ನಪ್ಪೊರುಮೀಗಡುಳ್ಳೊರುಂ ಬಗೆವೊಡವರ್ |
ನಿನ್ನನ್ನರೆ ನಿನ್ನನ್ನರೆ | ನಿನ್ನನ್ನರೆ ನಿನಗೆ ನೀನೆ ದೊರೆಯಯ್ಯಾ ಶಂಭೂ ||10||

---

## 7 ಸಂಖ್ಯೆ 41. 949

**ಇದರಲ್ಲಿ ರಾಷ್ಟ್ರಕೂಟರಾಜನಾದ 3 ನೆಯ ಕೃಷ್ಣರಾಜನಿಗೂ ಚೋಳರಾಜನಾದ ರಾಜಾದಿತ್ಯನಿಗೂ ನಡೆದ ಯುದ್ಧದಲ್ಲಿ ಚೋಳರಾಜನು ಮಡಿದ ಸಂಗತಿ ಹೇಳಿದೆ. ರಾಷ್ಟ್ರಕೂಟರ ಪಕ್ಷವಾಗಿ ಯುದ್ಧಮಾಡಿದ ಮಣಲೇರನ ಶೌರ್ಯವು ಕೆಳಗಣ ಪದ್ಯಗಳಲ್ಲಿ ವರ್ಣಿಸಿದೆ:—**

ಉಱಿದಿದಿರಾಂತ ಚೋೞಚತುರಂಗಬಲಂಗಳನಟ್ಟಿ ಮುಟ್ಟಿ ತ |
ಳ್ತಿಱಿವೆಡೆಗೊರ್ವರಪ್ಪೊಡಮಿದಿರ್ಚುವ ಗಂಡರನಾಂಪೆವೆಂದು ಪೊ ||
ಚ್ಚಱಿಸುವ ಬೀರರಂ ನೆಱೆಯೆ ಕಾಣೆಮೆ ಚೋೞನೆ ಸಕ್ಕಿಯಾಗೆ ತ |
ಳ್ತಿಱಿದುದನಾಮೆ ಕಂಡೆವೆನೆ ಮಚ್ಚಡೊರಾರಾ ಸಗರತ್ರಿನೇತ್ರನಂ ||11||
ನರಪತಿ ಚೆನ್ನೊಳಿರ್ದೊನಿದಿರಾಂತುದು ವೈರಿಸಮೂಹಮಿಲ್ಲ ಮ |
ಚ್ಚರಿಸುವರೆಲ್ಲರುಂ ಸೆರಗುವಾರ್ದಪೊರಿನ್ನಿರೆನೆಂದು ಸಿಂಗದಂ ||
ತಿರೆ ಹರಿಬೀರಲಕ್ಷ್ಮಿ ನೆರವಾಗಿರೆ ಚೋೞನ ಕೋಟೆಯೆಂಬ ಸಿಂ |
ಧುರದ ಶಿರೋಗ್ರಮಂ ಬಿರಿಯೆ ಪೊಯ್ದಿಱಿದಂ ಕದನೈಕಶೂದ್ರಕಂ ||12||

---

## 8 ಶ್ರವಣಬೆಳ್ಗೊಳ 139. ಸು. 950

**ಇದರಲ್ಲಿ ಬಾಯಿಕನ ಮಗಳೂ ಲೋಕವಿದ್ಯಾಧರನ ಹೆಂಡತಿಯೂ ಆದ ಸಾವಿಯಬ್ಬೆ ಸತ್ತಳೆಂದು ಹೇಳಿದೆ.**

**ಬಾಯಿಕ**

ಶ್ರೀಯುವತಿಗೆ ನಿಜವಿಜಯ|ಶ್ರೀಯುವತಿಯೆ ಸವತಿಯೆನಿಸೆ ರಣಮೂರ್ಖನೃಪಾ |
ಮ್ನಾಯದೊಳಾಯದ ಮೆಯ್ಗಲಿ|ಬಾಯಿಕನೆಂಬರ್ ನೆಗೞ್ತೆಯಂ ಪ್ರಕಟಿಸಿದರ್||13||

**ಸಾವಿಯಬ್ಬೆ**

ಅವರೊಡವುಟ್ಟಿದೊಳಱಿಪಿನ|ಶವರೆನೆ ಧರ್ಮದದಗುಂತಿಯೆನೆ ನೆಗೞ್ದಳ್ ಭೂ|
ಭುವನಕ್ಕೆ ಸಾವಿಯಬ್ಬೆಗ | ಮವನಿಜೆಗಂ ದೊರೆಯೆನಲ್ಕೆ ಪೆಂಡಿರುಮೊಳರೇ ||14||

ಶ್ರಾವಕಧರ್ಮದೊಳ್ ದೊರೆಯೆನಲ್ ಪೆಱರಿಲ್ಲೆನೆ ಸಂದ ರೇವತೀ |
ಶ್ರಾವಕಿ ತಾನೆ ಸಜ್ಜನಿಕೆಯೊಳ್ ಜನಕಾತ್ಮಜೆ ತಾನೆ ರೂಪಿನೊಳ್ ||
ದೇವಕಿ ತಾನೆ ಪೆಂಪಿನೊಳರುಂಧತಿ ತಾನೆ ಜಿನೇಂದ್ರಭಕ್ತಿಸ |
ದ್ಭಾವದೆ ಸಾವಿಯಬ್ಬೆ ಜಿನಶಾಸನದೇವತೆ ತಾನೆ ಕಾಣಿರೇ ||15||

---

## 9 ಬೇಲೂರು 123. 952

**ಇದರಲ್ಲಿ ಗಂಗರಾಜನಾದ ಬೂತುಗನ ಆಳಿಕೆಯಲ್ಲಿ ಮೋನಿಭಟಾರರಿಗೆ ಕಿರಿಯ ಮೋನಿ ಭಟಾರರು ನಿಸಿದಿಗೆಯನ್ನು ನಿಲಿಸಿದರೆಂದು ಹೇಳಿದೆ.**

### ಮೋನಿಭಟಾರ

ಪೇನಿಗಳಂ ಪೊಗೞದಿರಭ | ಮಾನಿಗಳಂ ಗುಣದ ಕಣಿಗಳಂ ವಸುಮತಿಯೊಳ್|
ದಾನಿಗಳನೂನಮಿಲ್ಲದ | ಮೋನಿಗಳಂ ಪೋಗಿ ಪೊಗೞ ಕೆಲ್ಲಂಗೆಱೆಯೊಳ್ ||16||

ತಾಂ ಗಡ ಕೊಳ್ಳೊನೆಂದು ಬಲಗರ್ವದ ಬಲ್ಲಪನಲ್ಲಿ ಪೋಗಿ ಕಾ |
ಯ್ವೊಂಗೆಡೆಯಾಗದಂತು ನುಡಿದಾರ್ಪಿನೆ ಮೆಚ್ಚಿಸಿ ಕೊಂಡರಿಂತು ಕೆ ||
ಲ್ಲಂಗೆಱೆಯಂ ಪಲರ್ ಪೊಗೞೆ ಮೋನಿಭಟಾರರೆನುತ್ತೆ ಲೋಕಮೆ |
ಲ್ಲಂ ಗೆಡೆಗೊಂಡು ಕೊಂಡುಕೊನೆದಪ್ಪುದು ಸಾಹಸಮೇನನೂನಮೋ ||17||

---

## 10 ಶ್ರವಣಬೆಳ್ಗೊಳ 59. 974

**ಇದರಲ್ಲಿ ಗಂಗರಾಜನಾದ ನೊಳಂಬಕುಲಾಂತಕಮಾರಸಿಂಹನು ಸನ್ಯಸನವಿಧಿಯಿಂದ ಸ್ವರ್ಗವನ್ನು ಪಡೆದಂತೆ ಹೇಳಿದೆ.**

### ಮಾರಸಿಂಹ

ಕಾಳನೊ ರಾವಣನೋ ಶಿಶು | ಪಾಳನೊ ತಾನೆನಿಸಿ ನೆಗೞ್ದ ನರಗನ ತಲೆ ತ |
ನ್ನಾಳಾಳ ಕೆಯ್ಗೆ ವಂದುದು | ಹೇಳಾಸಾಧ್ಯದೊಳೆ ಗಂಗಚೂಡಾಮಣಿಯಾ ||18||

ನುಡಿದನೆ ಕಾವುದನೇ ಎರ್ದೆ | ಗಿಡದಿರು ಜವನಿಟ್ಟ ರಕ್ಕೆ ನಿನಗೀವುದನೇಂ |
ನುಡಿದನೆ ಏ ಅದು ಕೆಯ್ಯದು|ನುಡಿದುದು ತಪ್ಪುಗುಮೆ ಗಂಗಚೂಡಾಮಣಿಯಾ||19||[1]

ತುಂಗಪರಾಕ್ರಮಂ ಪಲವುಕಾಲಮಗುರ್ವಿಸೆ ಸುತ್ತಿ ಮುತ್ತಿ ಬಿ |
ಟ್ಟಂ ಗಡ ಕಾಡುವಟ್ಟೆ ಕೊಳಲಾಱನೆ ಮುನ್ನಮೆನಿಪ್ಪ ಪೆಂಪಿನು ||

---

1. ಈ ಪದ್ಯವು ನಾಗವರ್ಮನ ಕಾವ್ಯಾವಲೋಕನದಲ್ಲಿಯೂ (ಪು. 9) ಕೇಶಿರಾಜನ ಶಬ್ದಮಣಿದರ್ಪಣದಲ್ಲಿಯೂ (ಪು. 68) ಅನುವಾದಮಾಡಲ್ಪಟ್ಟಿದೆ.

ಜ್ಞಂಗಿಯ ಕೋಟಿಯುಂ ಜಗಮುಸುಂಗೊಳೆ ಕೊಂಡ ನೆಗೞ್ತೆ ಮೂಱುಲೋ |
ಕಂಗಳೊಳಂ ಪೊಗೞ್ತೆಗೆಡೆಯಾದುದು ಗುತ್ತಿಯ ಗಂಗಭೂಪನಾ ||20||

ಒಳಿಯೆ ಕೋದು ಪಲ್ಲವರ ಪಂದಲೆಯೆಲ್ಲಮನೆಯ್ದೆ ದಟ್ಟಿಕಾ|
ಪಾಳಿಕರೂಱ್ ಸಾಱ್ ಪರಮಂಡಳಿಕರ್ಕಳನಮ್ಮ ನೀವುಮೀ ||
ಯೋಳಿಗೆ ನಿಮ್ಮ ಪಂದಲೆಗಳಂ ಬರಲೀಯದೆ ಕಂಡು ಬಾೞ್ವುದಾ |
ಳೋಳಿಯೊಳೆಂಜನಂ ನೆಗೞ್ದುದೊಟ್ಟಜಿ ಮಂಡಳಿಕತ್ರಿಣೇತ್ರನಾ ||21||

---

## 11 ತಿರುಮುಕೂಡಲು ನರಸೀಪುರ 69. ಸು. 980

**ಇದರಲ್ಲಿ ಗಂಗರಾಜನಾದ ಮಾರಸಿಂಹನ ಸಾಮಂತ ಗೋವಿಂದಮಯ್ಯನ ಸಂತತಿ ಹೇಳಿದೆ.**

ಪರಮಶ್ರೀಯುಂ ತಳೆದೊಗೆ | ದೆಱೆಯೊಂ ಪರಮೋಪಕಾರಿ ಧರ್ಮಜ್ಞಂ ಸುಂ |
ದರತೇಜನೆನಿಸಿ ನೆಗೞ್ದಂ | ಧರೆಯೊಳ್ ಗೋವಿಂದಮಯ್ಯನೆಂಬುರ್ವೀಶಂ ||22||

ಎನೆ ನೆಗೞ್ದ ಮಾಬಳಯ್ಯಂ | ಗನೇಕಗುಣರತ್ನರಾಶಿ ಮನುಮುನಿಚರಿತಂ |
ವಿನಯವಿಭೂಷಣನೊಳ್ಪಿಂ | ಗಿನಿಯಂ ಮೊದಲೆನಿಸಿ ಪುಟ್ಟಿದೊಂ ಚಾವುಂಡಂ ||23||

---

## 12 ಶ್ರವಣಬೆಳ್ಗೊಳ 133. 982

**ಇದರಲ್ಲಿ ರಾಷ್ಟ್ರಕೂಟರಾಜನಾದ ಇಂದ್ರರಾಜನು ಸನ್ಯಾಸನವಿಧಿಯಿಂದ ಮುಡಿಪಿದಂತೆ ಹೇಳಿದೆ.**

### ಇಂದ್ರರಾಜ

ಪರಭೂಮಿೞ್ಪರಭೀಕರಂ ಕರನಿಶಾತೋಗ್ರಾಸಿ ಶತ್ರುಕ್ಷಿತೀ |
ಶ್ವರವಿಧ್ವಂಸಪರಂ ಪರಾಕ್ರಮಗುಣಾಟೋಪಂ ವಿಪಕ್ಷಾವನೀ ||
ಶ್ವರಪಕ್ಷಕ್ಷಯಕಾರಣಂ ರಣಜಯೋದ್ಯೋಗಂ ದ್ವಿಷನ್ಮೇದಿನೀ |
ಶ್ವರಸಂಹಾರಹವಿರ್ಭುಜಂ ಭುಜಬಳಂ ಶ್ರೀರಾಜಮಾರ್ತಂಡನಾ ||24||

ಇಱಿಯಲ್ಕಣ್ಮುವರೀಯಲಾಱಿರರೆಬರಾ ಪೂರ್ಣ್ದೇವರಾರಾನುಮಾಂ |
ತಿಱಿಯಲ್ಕಣ್ಮರದಾವ ಗಂಡಗುಣಮಾವೌದಾರ್ಯಮೆಂದಳ್ಕದಾಂ ||
ತಿಱಿವಣ್ಮಂ ಪಿರಿದೀವ ಪೆಂಪುಮೆಸೆದೊಪ್ಪಿರ್ದಪ್ಪುವಾರ್ ಬಣ್ಣಿಸಲ್ |
ನೆಱಿವರ್ ಬೀರದ ಚಾಗದುನ್ನತಿಕೆಯಂ ಶ್ರೀರಾಜಮಾರ್ತಂಡನಾ ||25||

ಕಿಡದ ಜಸಕ್ಕೆ ತಾನೆ ಗುಱಿಯಾದ ಚಲಂ ನೆಱೆದರ್ಥಿಗರ್ಥಮಂ |
ಕುಡುವ ಚಲಂ ತೊದಳ್ನುಡಿಯದಿರ್ಪ ಚಲಂ ಪರವೆಣ್ಗೊಳೋತೊಡಂ ||
ಬಡದ ಚಲಂ ಶರಣ್ಗೆವರೆ ಕಾವ ಚಲಂ ಪರಸೈನ್ಯಮಂ ಪೆಱಂ |
ಗಡೆಗುಡದಟ್ಟಿ ಕೊಲ್ವ ಚಲಮಾಳ್ದ ಚಲಂ ಚಲದಂಕಕಾಱನಾ ||26||

ಇರು ಪೆಱದೇನನಿಂ ಪೊಗೞುತಿರ್ದಪುದೀವ ನೆಗೞ್ತೆ ಕಲ್ಪಭೂ |
ಮಿರುಹದಿನಗ್ಗಳಂ ನುಡಿ ಸುರಾಚಳದಿಂದಚಳಂ ಪರಾಕ್ರಮಂ ||
ಖರಕರತೇಜದಿಂ ಬಸಿದು ಚಾಗದ ನನ್ನಿಯ ಬೀರದಂದಮೀ |
ದೊರೆತೆನೆ ಬಣ್ಣಿಸಲ್ ನೆಱೆವರಾರಳವಂ ಚಲದಂಕಕಾಱನಾ ||27||

ದುಸ್ಥಿತಲೋಕಕಲ್ಪತರುವೆಂಬುದು ವೈರಿನರೇಂದ್ರಕುಂಭಿಕುಂ |
ಭಸ್ಥಳಪಾಟನಪ್ರವಣಕೇಸರಿಯೆಂಬುದು ಕಾಮಿನೀಜನೋ ||
ರಸ್ಥಳಹಾರಮೆಂಬುದು ಮಹಾಕವಿಚಿತ್ತಸರೋರುಹಾಕರಾ |
ವಸ್ಥಿತಹಂಸನೆಂಬುದು ಸಮಸ್ತಮಹೀಜನಮಿಂದ್ರರಾಜನಾ ||28||

ಪುಸಿವುದೆ ತಕ್ಕು ಕೊಟ್ಟೞಿಪಿ ಕೊಳ್ವುದೆ ಮಂತ್ರಣಮನ್ಯನಾರಿಗಾ |
ಟಿಸುವುದೆ ಚಿತ್ತಮಾಯದುದೆ ಬಿನ್ನಣಮಾಱುಮನೆಯ್ದೆ ಕೂರ್ತು ಬಂ ||
ಚಿಸುವುದೆ ಕಲ್ತ ಕಲ್ಪಿಯೆನೆ ಮತ್ತವರಂ ಪೆಸಗೊಂಡದೆಂತು ಪೋ |
ಲಿಸುವುದೊ ಪೇೞಿಮಾಗಡಿನ ರಾಜತನೂಜರೊಳಿಂದ್ರರಾಜನಂ ||29||

ನಿಖಿಳವಿನಮನ್ನರೇಶ್ವರ | ಮುಖಾಬ್ಜನೇತ್ರೋತ್ಪಳಾಳಿಕಾಳೋಳಿಶಿಳೀ |'
ಮುಖನಿಕರದಿನೆಸೆವುದು ಪದ | ನಖಕಮಳಾಕರವಿಳಾಸಮಹಿತರ ಜವನಾ ||30||

ಮನ್ನಿಸಿ ಪಿರಿದೀವಂ ತೊದ|ಳನ್ನುಡಿಯುಂ ತೊಡರ್ದು ಮಾಣಸಳಱಿಂದಮಿದೇ |
ಸುನ್ನತಿವಡೆದುದೊ ಚಾಗದ | ನನ್ನಿಯ ಬೀರದ ನೆಗೞ್ತೆ ಚಳದಗ್ಗಱಿಯಾ ||31||

ಶರದಮೃತಕಿರಣರುಚಿಯಿಂ | ಚರಾಚರವ್ಯಾಪ್ತಿಯಿಂ ಜಗಜ್ಜನನುತಿಯಿಂ |
ಕರಮೆಸೆದಿರ್ದಪುದೇನೀ | ಶ್ವರಮೂರ್ತಿಯ ಕೀರ್ತಿ ಕೀರ್ತಿನಾರಾಯಣನಾ ||32||

ನುಡಿವರ್ ಬೀರಮನೊಂದುಗಂಡು ಸೆಡೆವರಾ ಚಾಗಕ್ಕೆ ಮುಯ್ವಾಂಪರೀ |
ವೊಡೆ ಪಲ್ಗರ್ಚುವರಾಮೆ ಸೋಚಿಗಳೆಮೆಂದಿರ್ಪರ್ ಪರಸ್ತ್ರೀಯರೊಳ್ ||
ಗಡಣಂ ನನ್ನಿಗೆ ಬೀಗುವರ್ ನುಡಿ ತೊದಳ್ ದೋಸಕ್ಕೆ ಪಕ್ಕಾದ.. |
ಬಡಗಂಡರ್ ಕಲಿಕಾಲದೊಳ್ ಕಲಿಗಳೊಳ್ಗಂಡಂ ಪೆಱಂ ಗಂಡಸೇ ||33||

## 13 ಶ್ರೀರಂಗಪಟ್ಟಣ 140. 1012

ಇದರಲ್ಲಿ ಚೋಳರಾಜನಾದ ರಾಜರಾಜನ ದಂಡನಾಯಕ ಪಂಚವಮಹಾರಾಯನು ಬಲಮುರಿಕ್ಷೇತ್ರದ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

**ಪಂಚವಮಹಾರಾಯ.**

ಶ್ರೀರಮಣೀಯನೀತಿ ಜಯಮೂರ್ತಿ ಸುಲಕ್ಷಣಲಕ್ಷಿತಾಂಗನ|
ಬ್ಬಾರಿಕರೋಪಮಂ........ರಂ ಮುಳಿದಂದರಾತಿಸಂ ||
ಹಾರಲಯಾಗ್ನಿಯಂತಕನ ಕಾಯ್ಪುಪಮಾ........ |
ಮಾರಿಯ ಮೂರಿಯೆಂದಱಿಗೆ ಮುಮ್ಮುಡಿಚೋೞನ ಗಂಧವಾರಣಂ ||34||

---

## 14 ಷಿಕಾರಿಪುರ 125 1019

ಇದರಲ್ಲಿ ಚಾಳುಕ್ಯರಾಜನಾದ ಜಯಸಿಂಹನ ಸಾಮಂತ ಕುಂದಮರಸನು ಬಲಿಪುರದ ನಂದಿಕೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

**ತ್ರಿಮೂರ್ತಿಗಳು.**

ಶ್ರೀಪತಿ ಚಕ್ರಧಾರಿ ಗರುಡಾಸನನಂಬುರುಹಾಕ್ಷನದ್ರಿಜಾ |
ತಾಪತಿ ಶೂಲಧಾರಿ ವೃಷಭಾನನನಗ್ನ್ಯಧಿಕೇಕ್ಷಣಂ ವಚ ||
ಶ್ರೀಪತಿ ಪಾಶಧಾರಿ ಕಳಹಂಸಗನಷ್ಟಮಿತಾಕ್ಷನೆಂದಿವರ್ |
ತ್ರೈಪುರುಷರ್ ತ್ರಿಲೋಕಜನಪೂಜಿತರೀಗೆಮಗಿಷ್ಟಸಿದ್ಧಿಯಂ ||35||

**ಜಯಸಿಂಹ I.**

ಪಸರಿಸಿ ಪರ್ಬಿ ಗೊಂದಳಿಸಿ ನಿಂದ ತಮಸ್ತಮಮಂ ತೆರಳ್ಚಿ ಬಂ |
ದೊಸೆದಿನನೇಱುವಂತುದಯಪರ್ವತಮಂ ಕಲಿಕಾಲದೇಱಿಗೆ ಯಂ ||
ದೆಸೆಗಿಡೆ ತೂಳ್ದಿ ತಾಳ್ದಿ ಕೃತಲಕ್ಷ್ಮಿಯನೊಳ್ಪಿನ ತೆಳ್ಪುಗಳ್ ಜಗ |
ಕ್ಕೆಸೆದಿರೆ ಸಿಂಹವಿಷ್ಟರಮನೇಱಿದನಾಜಯಸಿಂಹವಲ್ಲಭಂ ||36||

---

## 15 ಬೇಲೂರು ಶಾಸನ

## (ಇಂಡಿಯನ್ ಆಂಟಿಕ್ವರಿ XVIII, 273). 1022

ಇದರಲ್ಲಿ ಚಾಳುಕ್ಯರಾಜನಾದ ಜಯಸಿಂಹನ ಆಳಿಕೆಯಲ್ಲಿ ಅವನ ಅಕ್ಕನಾದ ಅಕ್ಕಾದೇವಿ ಪೇರೂರು ಅಗ್ರಹಾರವನ್ನು ಸ್ಥಾಪಿಸಿ ಅಲ್ಲಿ ತ್ರಿಮೂರ್ತಿಗಳ ದೇವಸ್ಥಾನವನ್ನು ಕಟ್ಟಿಸಿದಂತೆ ಹೇಳಿದೆ.

### ಅಕ್ಕಾದೇವಿ.

ಶ್ರೀವನಿತೆಯೆನಿಸಿದಕ್ಕಾ | ದೇವಿಗೆ ವಾಗ್ದೇವಿಗಖಿಳಜನನುತಸೀತಾ |
ದೇವಿಗೆ ಮಾದೇವಿಗೆ ಭೂ | ದೇವಿಗೆ ಸಮಸೆಂಬ ನೃಪಸುತಾಸಮುದಯಮಂ ||37||

ಗುಣದ ಬೆಡಂಗಿಯೆನಲ್ ಸ|ದ್ಗುಣಮಂ ನೆಗೞ್ದೇಕವಾಕ್ಯೆಯೆನೆ ಸೂನೃತಮಂ |
ರಣಭೈರವಿಯೆನೆ ಶೌರ್ಯದ | ಗುಣಮನದೇನೆಂದು ಬಣ್ಣಿಪೆಂ ನೃಪಸುತೆಯಾ ||38||

ಅಪಿನಮ್ರಾರಿನೃಪಾಳಕಪ್ರಳಯಸಂಪಾದಕ್ಷಮೋಚ್ಚಂಡಭೈ |
ರಪಿ ತಾನಾಗಿಯುಮೆಯ್ದೆ ಶಾಂತತರರೂಪಾಸ್ಪೀತೆ ನಿರ್ಭರ್ತ್ಸನಾ ||
ರವಸಿಂಹಾಗ್ರಜೆಯಾಗಿಯುಂ ಮದಗಜೋದ್ವದ್ಯಾನೆಯೆಂದಂದು ಧಾ ? |
ತವಿಚಿತ್ರಂ ನೆಗೞ್ದೇಕವಾಕ್ಯೆಯ ಚರಿತ್ರಂ ಭೂರಿಭೂಚಕ್ರದೊಳ್ ||39||

---

## 16 ಕುಳೇನೂರ್ ಶಾಸನ.

### (ಎಪಿಗ್ರಾಫಿಯಾ ಇಂಡಿಕ XV, 329). 1028

**ಈ ಶಾಸನದಲ್ಲಿ ಚಾಳುಕ್ಯರಾಜನಾದ ಜಯಸಿಂಹನ ಆಳಿಕೆಯಲ್ಲಿ ಕುಂದರಾಜನ ಹೆಂಡತಿ ಕುಂದಲದೇವಿ ಕುಳೇನೂರ್ ದೇವಸ್ಥಾನಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಕುಂದರಾಜ

ಮಲೆಪರ ಪೊಂಗಡಂಗಿದುದು ಮನ್ನೆಯರುರ್ಕು ಕಱಿಲ್ದುದನ್ನಮಂ |
ಪಲಿಕರ ದರ್ಪಮೋಗಡಿಸಿತಾಂತು ಪಗುರ್ತರಿವರ್ಗಮಳ್ಕಿ ಬಾ ||
ೞ್ದಲೆಗಳನಿತ್ತು ಕಂಡು ಬೆಸಗೆಯ್ದಪರೀದೊರೆತುಗ್ರಮಪ್ಪ ತೋ |
ಳ್ವಲದ ಪೊಡರ್ಪುಮೊಟ್ಟಜೆಯುಮುನ್ನತಿಯುಂ ಸಲೆ ಕುಂದರಾಜನಾ ||40||

### ಕುಂದಲದೇವಿ

ಸರಸಿರುಹದಲರ ನಡುವಣ | ಸಿರಿಯವೊಲತ್ಯಂತಮಪ್ಪ ತೇಜದಿನಂತಃ |
ಪುರಮನಲಂಕರಿಪುದಱಿಂ | ಧರೆ ಸವತಿತಳಪ್ರಹಾರಿಯೆನೆ ಸಲೆ ನೆಗೞ್ದಳ್ ||41||

ಸರಸತಿಗೆ ರತಿಗೆ ರಂಭೆಗೆ | ಗಿರಿಜೆಗರುಂಧತಿಗೆ ರಘುಕುಲೇಶನ ಸತಿಗಂ |
ದೊರೆ ಪಾಸಟಿ ಮಿಗಿಲೆಂದೀ|ಧರೆ ಪೊಗೞ್ವುದು ನೆಗೞ್ದ ಸವತಿಗಜಕೇಸರಿಯಂ||42||

---

## 17 ಮಂಜರಾಬಾದ್ 45. ಸು. 1030

**ಇದರಲ್ಲಿ ವಾಮಶಿವದೇವನ ಮಗ ಚಾಮುನ ಸ್ತುತಿರೂಪವಾದ ಪದ್ಯಗಳಿವೆ.**

ಶ್ರೀಮಚ್ಛಶಾಂಕಧರಸ । ತ್ಕ್ರೋಮಳಪದಪದ್ಮಭೃಂಗನಸುರಿಪುಸಿಂಗಂ ।
ವಾಮಶಿವದೇವಪುತ್ರಂ । ಚಾಮಂ ಕಾದಂಬರಾಜ್ಯಮೂಳಸ್ತಂಭಂ ॥43॥

ಅಳವಱಿವು ನನ್ನಿ ಪೆಂಪ । ಸ್ಖಳಿತಗುಣಂ ಪತಿಹಿತಿಕ್ಕೆಯೆಂಬಿವು ತನ್ನೊಳ್ ।
ಬಳೆದು ಪುದಿದಿರೆ ಸುಪುತ್ರಃ । ಕುಳದೀಪಕ ಎನಿಸಿ ಚಾವನೆಗ್ಗಡೆ ನೆಗಱ್ದಂ ॥44॥

ಶಿಷ್ಟಜನವತ್ಸಳಂ ಧ । ರ್ಮಿಷ್ಟಂ ನಿಜಕುಳಪವಿತ್ರನಮಳಚರಿತ್ರಂ ।
ದುಷ್ಟಜನದೂರನೆಂದೀ । ಸೃಷ್ಟಿ ಸಲಲಾ ಪೊಗೞ್ಗೆ ನೆಗೞ್ಗೆ ಚಾವನೆ ಬಲ್ಲಂ ॥45॥

---

## 18 ಸೊರಬ 184. 1032

**ಈ ಶಾಸನದಲ್ಲಿ ಚಾಳುಕ್ಯರಾಜನಾದ 1 ನೆಯ ಜಯಸಿಂಹನ ಆಳಿಕೆಯಲ್ಲಿ ಮಹಾಸಾಮಂತಾಧಿಪತಿ ಆಲಯ್ಯನು ಕುಪ್ಪಗಡ್ಡೆಯಲ್ಲಿ ಮಂಡಲಿಕ ಕುಂದಮನೊಡನೆ ಕಾದಿ ಸಾಯಲು ಅವನ ಮಗ ಜಯಸಿಂಗನು ತಂದೆಯ ಹೆಸರಿನಲ್ಲಿ ಆಲೇಶ್ವರ ದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

**ಆ ಲ ಯ್ಯ**

ಬಳವದರಾತಿಸೇನೆ ಕಿಪೆ ವಾಜಿಬಳಂ ಪೆಱಿಂಗೆ ಹಸ್ತಿಸಂ ।
ಕುಳಮೞರ್ವಕ್ಕೆ ಬಕ್ಕೆ ತನಗಾಂತಭಕೋಗ್ರಪರೋಧಸಾಧನಂ ॥
ವಳಿಕೆ ಬಱಿಲ್ಲಿ ಸುಗಿ ಪಲರಂ ತವೆ ಕೊಂದು ಮಹಾಜಿರಂಗದೊಳ್ ।
ತೊಲಗದ ಗಂಡನಾಂತಿಱಿಯೆ ಘುಂಘುಕಮದ್ಭುತಮಾದುದೆತ್ತಲುಂ ॥46॥

**ಜ ಯ ಸಿಂ ಗ**

ಮುಳಿಸತ್ಯದ್ಭುತಮಾಯಮೆಂದುಮಚಳಂ ದಾನಂ ಬುಧಾಹ್ಲಾದಿ ಕೇ ।
ವಳಮುಲ್ಲುನ್ನತಸತ್ವಶೌಚಮಱಿಪಂ ಲೋಕೋತ್ತರಂ ಕೀರ್ತಿ ದಿ ॥
ಗ್ವಳಯಾಂತಂ ನುಡಿ ಮೇರುಶೈಲಲಲಿತಂ ಧರ್ಮಂ ಜಗನ್ಮುದ್ರ ಭೂ ।
ತಳವಂದ್ಯಂ ಚರಿತಂ ನಯಂ ಒಸನುತಂ ಶ್ರೀಸಿಂಹಭೂಪಾಳನಾ ॥47॥

---

## 19 ಸಾಗರ 109. 1042

**ಇದರಲ್ಲಿ ಚಾಳುಕ್ಯರಾಜನಾದ 1 ನೆಯ ಜಯಸಿಂಹನ ದಂಡನಾಯಕ ಗೋನರಸನು ಕೆರೆಗಳನ್ನೂ ದೇವಸ್ಥಾನಗಳನ್ನೂ ಕಟ್ಟಿಸಿ ಬಂದಗ್ರಹಾರವನ್ನು ಮಾಡಿ ಬ್ರಾಹ್ಮಣರಿಗೆ ಬಿಟ್ಟಂತೆ ಹೇಳಿದೆ.**

## ಗೋಣರಸ

ಹರನ ನಿಟಿಲಾಕ್ಷಿವಹ್ನಿ । ಸ್ಫುರಣಂ ಮುರಹರನ ಚಕ್ರಮಬ್ಜಜಪಾಶಂ ।
ಸುರರಾಜವಜ್ರಮೆನಿಪುದು । ಧುರದೊಳ್ ರಿಪುನೃಪರ್ಗೆ ಗೋಣಭೂಪನ ಕರವಾಳ್ ॥48॥

ಅರಿಭೂಪಾಳೋಗ್ರವೀರಪ್ರಮುಖಮನಿಱಿದಾಟಂದಪಂ ಕೊಂದಪಂ ಮ ।
ಚ್ಚರದಿಂ ಪೆಱಿಟ್ಟಿಪಂ ಮುಟ್ಟಿಪನತಿಭರದಿಂ ನೇರ್ದಪಂ ಸೀಳ್ದಪಂ ಕೋ ॥
ವರಚಕ್ರಾಕಾರದಿಂ ತಿಱ್ಱನೆ ತಿರಿಪಿದಪಂ ಸುತ್ತಿಪಂ ಮುತ್ತಿಪಂ ಸಂ ।
ಗರದೊಳ್ ಶ್ರೀಗೋಣಭೂಪಂ ಪ್ರಳಯಶಿಖಿಶಿಖಾಟೋಪಕೋಪಪ್ರತಾಪಂ ॥49॥

ಪಱಿದ ಶಿರಂಗಳಿಂ ಕೆದಱಿ ಬಿಱ್ದ ಗಜಂಗಳಿನಾಡುವಟ್ಟೆಯಿಂ ।
ಸುಱಿದರುಣಾಂಬುವಂ ನಲಿವ ರಾಮೆಯರಿಂ ಪೆಣದತ್ತ ಸಾರ್ವ ಪೆಂ ॥
ತೆಱೆಯುಪಿನಲ್ಲಿ ಮೂಂಸರಸಮಂ ಸಮೆದಾಡುವ ರಕ್ಕಸರ್ಗೆ ಪ ।
ಲ್ಟೆಱೆವ ಮರುಳ್ಗಳಿಂ ಸಮರಮಾಸುರಮಾದುದು ಗೋಣಭೂಪನಿಂ ॥50॥

ಅರಿಭೂಭೃದ್ಭ್ಯಾಳಕಾಳದಂಡನೊಮೊಮೋ ಕೊಂದಿಕ್ಕಿಪಂ ಮುಕ್ಕಿಪಂ ।
ನಿರುತಂ ಪೋರ್ದಪನೀಱ್ದು ಪೀರ್ದಪನೆಲೇ ಮದ್ರಕ್ತಮಂ ಕೂಡೆ ಕಿಂ ॥
ಕರರಪ್ಪಂ ಶರಣೆಂಬಮಾತನಸಿಳಾವಿಖ್ಯಾತನಂ ನಿಚ್ಚಮೆಂ ।
ದರಿವರ್ಗಂ ಕುದಿಯುತ್ತುಮಿರ್ದಪುದಿದಕ್ಕುಂ ಗೋಣನಾಡಂಬರಂ ॥51॥

ರಣದೊಳರಾತಿಭೂಭುಜಬಲಂಗಳನುಗ್ರಭುಜಾಸಿಯೊಳ್ ಖಣಿಲ್ ।
ಖಣಿಲೆನೆ ತಳ್ತು ಪೊಯ್ದು ಪಡಲಿಟ್ಟವೊಲಾಗಿರೆ ಮಾಡಿ ಸಂದ ಬ ॥
ಲ್ಕಣಿಗಳ ನೆತ್ತರಿಂ ನೆಣದಿನಗ್ಗರುಳಿಂದಮೆ ಭೂತಕೋಟಿಯಂ ।
ತಣಿಪಿ ನೆಗೞ್ತೆಯಂ ಪಡೆದನೀಧರೆಯೊಳ್ ಸಲೆ ಗೋಣಭೂಮಿಪಂ ॥52॥

ಧುರದೊಳ್ ಗೋಣನೃಗಭೂಪ ನಿನ್ನ ನಿಶಿತಾಸ್ತ್ರಾಘಾತದಿಂ ಸತ್ತ ಭೂ ।
ಪರ ಪೆಂಡಿರ್ ಬಸುಮಯ್ದೆ ನೀಳ್ವ ಶಿಖಿ ತನ್ನಂ ಮುಟ್ಟೆ ನೊಂದಿಂದು ನಿ ॥
ತ್ತರಿಸಲ್ ತಾನಣಮಾಱದೀಶ್ವರಜಟಾಜೂಟಾಟವೀಸಿಂಧುವೀ ।
ವರಮಂ ನೇಱಿಸಲಿರ್ದನಂತು ಶಶಿಗಂ ದೇವಂಗಮೇಸಮ್ಮದಂ ॥53॥

ತೊಡರ್ವ ವಿರೋಧಿಗಂಜದೆಯೆ ಮೀಱುವ ವೈರಿಗೆ ಮೂಱು ಕಣ್ಣೆ ಮಾ ।
ರ್ನುಡಿವವನೀಂ ಚತುರ್ಭುಜನೆ ಮಚ್ಚರಿಪಣ್ಣಲೆ ಬರ್ಮನೊಳ್ ಬರಂ ॥
ಪಿಡಿದನೆ ಮೀಱಿ ಬಾಳ್ಱೊಡವನೀಂ ಜವನೇ ಕಡಿಕೆಯ್ದು ಕಾದಲೆಂ ।
ದೊಡರಿಸುವಾತನೇಂ ಭುಜಗಮರ್ದನನೇ ಕಲಿಗೋಣಭೂಪನೊಳ್ ॥54॥

ಎಲೆ ಕೇಳ್ ಗೋನಮಹೀಪ ನಿನ್ನ ಯಶಮಂ ಶ್ರೀಕಾಂತೆಯಾಶಾಂತದೊಳ್ |
ನೆಲಸಿರ್ದುನ್ಮದದಂತಿದಂತಯುಗದೊಳ್ ತನ್ನಱ್ತೆಯಿಂ ಕಟ್ಟಿದು ||
ಯ್ಯಲಸಾನಂದದೊಳೇಱಿ ದಿಗ್ವನಿತೆಯರ್ ತೂಗಲ್ಕೆ ನಿನ್ನೊಳ್ಗುಣಂ |
ಗಳನಾಲೋಳಮದಾಳಿಮಂದ್ರಮಧುರಪ್ರಧ್ವಾನದಿಂ ಪಾಡಿದಳ್ ||55||

---

## 20 ಶಿಕಾರಿಪುರ 151. 1047

**ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಸಾಮಂತ ಚಾವುಂಡರಾಯನು ಬಳ್ಳಿಗಾವೆಯ ಗಂಡಭೇರುಂಡಸ್ತಂಭವನ್ನು ನಿಲ್ಲಿಸಿ ಭೇರುಂಡೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಚಾವುಂಡರಾಯ

ಇನಜನೆ ದಾನಿ ದಾನಿಗಳೊಳಾತನುಮುಂತೆ ಹಿರಣ್ಯದಾನಿ ವ |
ರ್ಣನೆಗೆ ಹಿರಣ್ಯದಾನಗುಣಮೊಂದುಮದೇಗುವುದೆಂದು ಮೆಚ್ಚದೊ ||
ರ್ಬನನೆ ಹಿರಣ್ಯದಾನಿ ಗಜದಾನಿ ತುರಂಗಮದಾನಿ ದಿವ್ಯವ |
ಸ್ತ್ರನಿಕರದಾನಿಯೆಂದು ಮಹಿ ಬಣ್ಣಿಪುದೀಜಗದೇಕದಾನಿಯಂ ||56||

ನೆಗಱ್ದವನೀಪಕವ್ರಜಕೆ ರಾಯನ ಕೊಟ್ಟ ಪೊದಱ್ದ ಪೊನ್ನ ರಾ |
ಶಿಗಳುಮನುನ್ಮದೇಭನಿವಹಂಗಳುಮಂ ಬಹುವರ್ಣವಾಜಿರಾ ||
ಜಿಗಳುಮನೆಯ್ದೆ ನೋಡಿ ಮನಮುಕ್ಕಿ ಗಱ್ಲ್ಲನೆ ನತ್ತು ಮಾಯ್ದು ಲೋ |
ಭಿಗಳ ಪವಣ್ಗೊಳಲ್ ಮನುಜರಿರ್ಕಜನಾದೊಡಮೇಂ ಸಮರ್ಥನೇ ||57||

ಅಱಿಯಂಗುರ್ಕುಡಿ ಬಲ್ಲಿದಂಗೆ ಘಟಸರ್ಪಂ ಗಂಡುದೋರ್ಪಂಗೆ ಮಾ |
ರಿ ರಣಾರಂಭಿಗೆ ಕಾಳಚಕ್ರಮುಱಿದಾಟರ್ಪಂಗಗುರ್ವಪ್ಪ ದ ||
ಳ್ಳುರಿ ಮಾರ್ಕೊಳ್ವ ಭಟಂಗೆ ತಾಂ ಬಱಿಸಿಡಿಲ್ ದೋರ್ದರ್ಪದಿಂದುರ್ಕಿ ಮ |
ಚ್ಚರಿಪಂಗಚ್ಚರಿಯಿಂ ಕೊಲಲ್ಕೆಱಿದ ಸಿಂಹಂ ಗಂಡಕಾಲಾನಲಂ ||58||

ಎಳೆಯೊಳ್ ಬಳೆದಡರ್ದು ದಿಶಾ | ವಳಿಯಂ ದಾಂಗುಡಿಮರಲ್ದು ಪಲ್ಲವಿಸಿ ನಭ |
ಸ್ಥಳದಿಂ ಮತ್ತತ್ತಲಿದೇಂ | ಬಳೆದುದೊ ಕೀರ್ತಿಲತೆ ಗಂಡಕಾಲಾನಲನಾ ||59||

---

## 21 ಮುಳ್ಗುಂದದ ಶಾಸನ

### (ಎಪಿಗ್ರಾಫಿಯಾ ಇಂಡಿಕ XVI, 54). 1053

ಈ ಶಾಸನದಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಸಂಧಿವಿಗ್ರಹಿ ಬೆಳ್ದೇವನ ಪ್ರಾರ್ಥನೆಯಿಂದ ಸಿಂದವಂಶದ ಕಂಚರಸನು ಮುಳ್ಗುಂದದ ಬಸ್ತಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಬೆಳ್ದೇವ

ವಿನಯಕ್ಕಾಧಾರಭೂತಂ ಪತಿಹಿತಚರಿತಕ್ಕಾಶ್ರಯಂ ಸದ್ವಿವೇಕ |
ಕ್ಕೆ ನಿವಾಸಂ ಶೌಚಸಂಪತ್ತಿಗೆ ಕುಳಭವನಂ ಸಂತತಾನೂನದಾನ ||
ಕ್ಕೆ ನಿಧಾನಂ ಮಾಂತನಕ್ಕಾಗರಮೆನೆನೆಗಱ್ದಂ ಸದ್ವಚೋಭೂಷಣಂ ಭೂ |
ವಿನುತಂ ಬೆಳ್ದೇವನುದ್ಯದ್ವಿಧುಸಿತಯಶೋವ್ಯಾಪ್ತದಿಕ್ಚಕ್ರವಾಳಂ ||60||

### ಕಂಚರಸ

ಸಿಂದಕುಳತಿಳಕನಬಳಾ | ನಂದನಕರರೂಪನನವಮಸಾಹಸನಿಳಯಂ |
ಸಿಂದನೃಪನಂದನಂ ಲಸ | ದಿಂದುಕರಪ್ರತಿಮಕೀರ್ತಿಕಾಂತಾಕಾಂತಂ ||61||

### ನರೇಂದ್ರಸೇನ

ಚಾಂದ್ರಂ ಕಾತಂತ್ರಂ ಜೈ | ನೇಂದ್ರಂ ಶಬ್ದಾನುಶಾಸನಂ ಪಾಣಿನಿ ಮ |
ತ್ತೈಂದ್ರಂ ನರೇಂದ್ರಸೇನಮು | ನೀಂದ್ರಂಗೇಕಾಕ್ಷರಂ ಪೆಱಂಗಿವು ಮೊಗ್ಗೇ ||62||

---

## ✓22 ಷಿಕಾರಿಪುರ 118. 1054

ಇದರಲ್ಲಿ ಚಾಳುಕ್ಯರಾಜನಾದ ಆಹವಮಲ್ಲನ (ತ್ರೈಲೋಕ್ಯಮಲ್ಲ) ಆಳಿಕೆಯಲ್ಲಿ ವಡ್ಡವ್ಯವಹಾರಿ ಸೋವಿಸೆಟ್ಟಿ ಬಳ್ಳಿಗಾವೆಯಲ್ಲಿ ಅಭಿನವಸೋಮೇಶ್ವರಲಿಂಗ ವನ್ನು ಪ್ರತಿಷ್ಠೆ ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ತ್ರಿಮೂರ್ತಿಗಳು

ಶ್ರೀವಾಣೀಗಿರಿಜಾಧಿಪರ್ ಗರುಡಹಂಸೋಕ್ಷಾಸನರ್ ವಾರ್ಧಿರಾ |
ಜೀವಾದ್ರೀಂದ್ರನಿವಾಸಿಗಳ್ ಮಧುಪರಕ್ತಾಂಭೋರುಹೇಂದುಪ್ರಭರ್ ||
ದೇವರ್ ಸತ್ವರಜಸ್ತಮೋಗುಣಯುತರ್ ದ್ವ್ಯಷ್ಟತ್ರಿನೇತ್ರೋತ್ಪಲರ್ |
ಗೋವಿಂದಾಬ್ಜಜಶಂಕರತ್ರಿಪುರುಷರ್ ಪಾಲಿಕ್ಕೆ ನಿಮ್ಮಂ ಚಿರಂ ||63||

ಆಹವಮಲ್ಲ

ಮೇರುಗಿರೀಂದ್ರದಂತೆ ವಿಬುಧಾಶ್ರಯನೀಶ್ವರನಂತುಮೇಶನಾ |
ಶಾರದನೀಂದ್ರನಂತಧಿಕದಾನನಹೀಶ್ವರನಂತೆ ವಿಶ್ವಭೂ ||
ಭಾರಭರಕ್ಷಮಂ ವಿಧುವಿನಂತೆ ಕಲಾಸ್ಪದನಬ್ಧಿಯಂತೆ ಲ |
ಕ್ಷ್ಮೀರಮಣೀಯಜನ್ಮನಿಲಯಂ ನೆಗೞ್ದಾಹವಮಲ್ಲವಲ್ಲಭಂ ||64||

ಪ್ರವಿಮಳಕೀರ್ತಿಯೊಳ್ ವಿಭವದೊಳ್ ಸುಚರಿತ್ರದೊಳಾರ್ಪಿನೊಳ್ ಮಹಾ |
ಹವಜಯದೊಳ್ ಗುಣೋನ್ನತಿಯೊಳಾಹವಮಲ್ಲನೊಳಾಂ ಸಮಾನಮಂ ||
ಬವನಿಪನೇಂ ಯಯಾತಿಯೊ ಭಗೀರಥನೋ ಪುರುಕುತ್ಸನೋ ಪುರೂ |
ರವನೊ ದಿಲೀಪನೋ ಭರತನೋ ನಳನೋ ನಹುಷಾವನೀಶನೋ ||65||

ಎಱಗದ ವೀರರಂಜದಟರಾ ಶರಣೆನ್ನದ ರಾಯರೆಂದುದಂ |
ತಿಱದಟಮೀಶ್ವರರಾ ಜವನ ಬಾರಿಗೆ ಪೋಗದ ಯುದ್ಧಲಾಲಸರಾ ||
ಮಱೆವುಗದಂಕಜೇಯರುಱಿದೋಡದ ದುರ್ಗದ ಗಂಡರಳ್ಕಿ ಬೆ |
ಳ್ಕುಱದ ಮಹಾಂಧರಿಲ್ಲಿಮು ಪರಾಕ್ರಮಮಾಹವಮಲ್ಲದೇವನಾ ||66||

ಕ್ಷಣದಿಂ ಮಾಳವನೋಡಿಮೆಯ್ದೆ ವಿಳಯಕ್ಕೆಯ್ದಿತ್ತು ಸಂದಿರ್ದ ಕೊಂ |
ಕಣಮೋಡಿಂ ಮಲೆಯೋಡಿಮಂಜಿ ಬೆಸಕೆಯ್ವುತ್ತೋವದಾಂತಾಪವಾಂ ||
ಗಣದೊಳ್ ಚೋಳಿಕನಣ್ಮಿ ಸತ್ತನಖಿಳದ್ವೀಪಾವನೀಪಾಳಕಾ |
ಗ್ರಣಿಗಳ್ ಕಪ್ಪಮನಿತ್ತರೇನದಟನೋ ತ್ರೈಳೋಕ್ಯಮಲ್ಲಾಧಿಪಂ ||67||

---

## 23 ಬಂಕಾಪುರದ ಶಾಸನ

### (ಎಪಿಗ್ರಾಫಿಯಾ ಇಂಡಿಕ XIII, 170). 1055

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಸಾಮಂತ ಕಾದಂಬಹರಿಕೇಸರಿ ಕೇತಿಸೆಟ್ಟಿಯ ಪ್ರಾರ್ಥನೆಯಿಂದ ಕದಂಬೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

**ಹರಿಕೇಸರಿಯ ಹೆಂಡತಿ ಲಚ್ಚಲದೇವಿ.**

ಭೂವನಿತಾವರಂ ಹರಿಗನಾನ್ನೃಪವೀರನುರಸ್ಥಳಕ್ಕೆ ಲ |
ಕ್ಷ್ಮೀವಧು ಪೀನಬಾಹುಯುಗಳಕ್ಕೆ ಜಯಾಂಗನೆ ತನ್ಮುಖಕ್ಕೆ ವಾಕ್ ||
ಶ್ರೀವಧುವಾಗಿ ರಂಜಿಸಿ ಮಹೋನ್ನತಿಯಂ ಪಡೆದುದ್ಧಕೀರ್ತಿಲೀ |
ಳಾಪತಿಯೆಂದು ಬಣ್ಣಿಪುದು ಲಚ್ಚಲದೇವಿಯನೀಜಗಜ್ಜನಂ ||68||

ವಿನಯದ ಮೇರೆ ಧರ್ಮದ ತವರ್ಮನೆ ಸತ್ಯದ ಜನ್ಮಭೂಮಿ ಮಾಂ |
ತನದಡಗುಂತಿ ಚಾಗದ ಮಹಾನಿಧಿ ಪೆಂಪಿನ ರತ್ನರಾಶಿ ಸ ||
ಜ್ಜನಿಕೆಯ ರಮ್ಯಹರ್ಮ್ಯಮೞಿವಿಂಗೆಱಿವಟ್ಟು ವಿದಗ್ಧಮುಗ್ಧೆ ಸ |
ಜ್ಜನನುತೆಯೆಂದು ಬಣ್ಣಿಪುದು ಲಚ್ಚಲದೇವಿಯನೀಜಗಜ್ಜನಂ ||69||

---

## ✓ 24 ಅರಸಿಯಕೆರೆ 186. ಸು. 1060

**ಇದರಲ್ಲಿ ಹೊಯ್ಸಳರಾಜನಾದ ವಿನಯಾದಿತ್ಯನ ಆಳಿಕೆಯಲ್ಲಿ ಧರ್ಮರಾಶಿಪ್ರತಿ ದೇಸವಣಿಯ ಶಿವದೇವಸ್ಥಾನವನ್ನು ಜೀರ್ಣೋದ್ಧಾರಮಾಡಿದಂತೆ ಹೇಳಿದೆ.**

### ವಿನಯಾದಿತ್ಯ

ಪರಮಶ್ರೀಸರ್ವಧರ್ಮಂ ನೆಗೞ್ದ ಪರಮಹೀಪಾಳಕರ್ ತನ್ನ ತೇಜ |
ಸ್ಫುರಿತಕ್ಕಂಜೆ ತನ್ನುಜ್ವಳಯಶಮವನೀಚಕ್ರಮಂ ಪರ್ವಿ ದಿಕ್ಕಂ ||
ಜರದಂತಾಘಾಟದಿಂ ಬಳ್ವಳನೆ ಬಳೆದಿರಲಾ ವೀರಲಕ್ಷ್ಮೀನಿವಾಸಂ |
ಧರಣೀಸಂಕೀರ್ತಿಯಿಂ ಪ್ರಜ್ವಳಿಸಿದ ವಿನಯಾದಿತ್ಯನಾದಿತ್ಯತೇಜಂ ||70||

### ಧರ್ಮರಾಶಿ

ನೆಱೆ ತಪದೊಂದು ಪೆಂಪು ಗುಣವಾಗರನೆಂಬುದಿದೊಂದು ಪೆಂಪು ಪೇ |
ರಱಿಕೆಯ ಕೀರ್ತಿಯಿಂ ಕೆಱೆಯ ಕಟ್ಟಿದ ಪೆಂಪು ಸುರೇಶಭಕ್ತಿಯಿಂ ||
ತಱಿಸಲವಿಂದೆ ದೇಗುಲಮನೆತ್ತಿದ ಪೆಂಪು ಸಮಸ್ತಧಾತ್ರಿಯೊಳ್ |
ಪೆಱರನದೇಕೆ ಪೇೞ್ವ ಪೊಗೞ್ವಪ್ಪೆ ಪೊಗೞ್ವಿಂ ಸಲೆ ಧರ್ಮರಾಶಿಯಂ ||71||

### ಬರ್ಮಗವುಂಡ

ಶ್ರೀಗಂ ವಿಶ್ರುತವಾಣಿ | ಶ್ರೀಗಂ ಹರಹಾಸಭಾಸಮೆನಿಸುವ ಕೀರ್ತಿ |
ಶ್ರೀಗಂ ವಿನೂತವಿಜಯ | ಶ್ರೀಗಂ ನೆಲೆಯೆನಿಸಿ ನೆಗೞ್ದ ಬರ್ಮಗವುಂಡಂ ||72||

---

## 25 ಸೂಡಿಯ ಶಾಸನ

## (ಎಪಿಗ್ರಾಫಿಯಾ ಇಂಡಿಕ XV, 87). 1060

**ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ದಂಡನಾಯಕ ನಾಗದೇವನು ನಾಗೇಶ್ವರದೇವಸ್ಥಾನಕ್ಕಾಗಿ ಸೋಮೇಶ್ವರಪಂಡಿತನಿಗೆ ಗ್ರಾಮವನ್ನು ಕೊಟ್ಟಂತೆ ಹೇಳಿದೆ.**

### ನಾಗದೇವ

ಜಳರಾಶಿಶ್ರೇಣಿಯೊಳ್ ಪಾಲ್ಗಡಲಮರಕುಜಶ್ರೇಣಿಯೊಳ್ ಪಾರಿಜಾತಂ |
ಕುಳಶೈಳಶ್ರೇಣಿಯೊಳ್ ಮಂದರಮಖಿಳನದೀಶ್ರೇಣಿಯೊಳ್ ಗಂಗೆಯೆಂತ ||
ಗ್ಗಳಮೆಂತಾರಾಧ್ಯಮಂತೀಚತುರುದಧಿತಟೀಸ್ಫೂಲಕಲ್ಲೋಲಮಾಲಾ |
ವಿಳಭಾಸ್ವದ್ಭೂರಿಭೂಗೋಳಕಜನಿತವಿಭುಶ್ರೇಣಿಯೊಳ್ ನಾಗದೇವಂ ||73||

ನಾನಾವಿಧಮಲ್ಲದಂತಿರೆ | ಮಾಡಿಸಿದಂ ದೇವನಿಲಯಮೆರಡುಂ ಕೆಲದೊಳ್ |
ಕೂಡೆ ಧವಳಾರವಮುಂ ಸುರ | ನೀಡಮುವೆಸೆ ಸೂಳೆಗೇರಿಯುಂ ಬುಧನಿಳಯಮುಂ ||74||

### ಸೋಮೇಶ್ವರಪಂಡಿತ

ಕ್ಷಿತಿಯೊಳ್ ದಿವ್ಯಪ್ರತೀಂದ್ರರ್ ಪಲರೊಳರವರ್ಗೊಂದುಳ್ಳೊಡೊಂದಿಲ್ಲದೇನೆಂ |
ಬ ತಪೋವಿಖ್ಯಾತಿಯೇನೆಂಬಮಳಿನಚರಿತಖ್ಯಾತಿಯೇನೆಂಬ ವಿದ್ಯಾ ||
ಚತುರತ್ವಖ್ಯಾತಿಯೇನೆಂಬಖಿಳಗುಣಗಣಖ್ಯಾತಿಯುಂಬೊಂದು ವೆಂಪೂ |
ರ್ಜಿತಮಾಯ್ತೆಂದಂದೆ ಸೋಮೇಶ್ವರಯತಿಪತಿಯಂ ಬಣ್ಣಿಸಲ್ ಬಲ್ಲನಾವೊಂ ||75||

### ಶಂಕ

ಕಣಿ ವಿದ್ಯಾವಿಭವಕ್ಕುದಾಹರಣೆಯುಘೋರೀಪಾರ್ಜನಕ್ಕೆಕ್ಕಲಾ |
ವಣಮುದ್ಯದ್ಗುಣರತ್ನರಾಜಿಗೆಱೆವಟ್ಟೌದಾರ್ಯಸಂಪತ್ತಿಗೇ ||
ಗಣಜೆಂದೀಗುಣಿ ಶಂಕನಂ ಪೊಗಳುಗುಂ ಝೂತ್ಕಾರಝುಂಝೂಸಮೀ |
ರಣಸಂಭೂತತರಂಗಸಂಘ್ಯತಪಯೋಧಿಪ್ರಾವೃತೋರ್ವೀತಳಂ ||76||

---

## 26 ನಗರ 47. 1062

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ವೀರಸಾಂತರನು ನೊಕ್ಕಿಯಬ್ಬೆಯ ಬಸ್ತಿಯನ್ನು ಮಾಡಿಸಲು ಅವನ ಹೆಂಡತಿ ಚಾಗಲದೇವಿ ಬಸ್ತಿಯ ಮುಂದಣ ಮಕರತೋರಣವನ್ನು ಮಾಡಿಸಿದಳೆಂದು ಹೇಳಿದೆ.

### ಚಾಗಲದೇವಿ

ಗುಣದೊಳ್ ರೂಪಿನೊಳೊಪ್ಪಿನೊಳ್ ಸೊಬಗಿನೊಳ್ ಶೃಂಗಾರದೊಳ್ ಸೌಮ್ಯಲ|
ಕ್ಷಣದೊಳ್ ಸ್ಥೈರ್ಯದೊಳೋಜೆಯೊಳ್ ವಿಭವದೊಳ್ ಶೀಲಂಗಳೊಳ್ ಭೃತ್ಯಪೋ||
ಷಣದೊಳ್ ಭೋಗದೊಳಾರ್ಪಿನೊಳ್ ವಿಭುತೆಯೊಳ್ ಕಾರುಣ್ಯದೊಳ್ ಪೋಲಿಸ |
ಲ್ಕೆಣೆಯಾರ್ ಗಲ್ಪಬೆಡಂಗಿಗೆಂದನುದಿನಂ ವಿದ್ವಜ್ಜನಂ ಬಣ್ಣಿಕುಂ ||77||

ಸಲುಗೆಗೆ ಸಾಮ್ಯಕ್ಕೆಕ್ಕೆಗೆ । ಪಲರಕ್ಕೆಮ ಸತಿಯರಹಿತರಂ ಗೆಲ್ವೆಡೆಯೊಳ್ ।
ಗೆಲುವ ಬೆಡಂಗಿಯೆ ಬೀರನ । ಬಲದ ಭುಜಾದಂಡದಲ್ಲಿ ಕೆಳದೊಳ್ ನಿಲ್ವಳ್ ॥78॥
ಪತಿಯಂ ವಂಚಿಸಿ ಸಲೆ ನಿಜ । ಕೃತಕದಿನರ್ಥಾವಳೋಕನಾಕ್ಷಿಗಳಿಂ ಭ್ರೂ ।
ಲತೆಯೊಳಮೊಳಪೊಯ್ವುದು । ಧೂರ್ತೆಯರ್ ಪೋಲ್ತುಪರೆ ಜಾಗಿಯಬ್ಬರಸಿಯರುಂ ॥79॥
ಅತಿಶಯಮಪ್ಪ ರೂಪಿನೊಳುದಾರತೆಯೊಳ್ ವಿನಯೋಪಚಾರದೊಳ್ ।
ಪತಿಗತಿಭಕ್ತಿಯೊಳ್ ವಿಪುಳಭೋಗದೊಳಿಂ ಪೆಱತೇನನೆಂಬೆ ಮಾಣ್ ॥
ರತಿಗನುಸಾರಿ ಪಾರ್ವತಿಗೆ ತೋಡು ಕುಜಾತೆಗೆ ಪಾಟಿ ನೋಡರುಂ ।
ಧತಿಗೆಣೆ ವಾಸವಾಂಗನೆಗೆ ಪಾಸಟಿ ಚಾಗಲದೇವಿ ಧಾತ್ರಿಯೊಳ್ ॥80॥

---

## 27 ಷಿಕಾರಿಪುರ 19. 1066

ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ಸರ್ವನ್ಯಾಂಕನು ಬೇಹೂರಲ್ಲಿ ಕೆರೆಗಳನ್ನು ಕಟ್ಟಿಸಿ ಮಲ್ಲಿಕಾರ್ಜುನದೇವರ ಮಠದ ವಿದ್ಯಾರ್ಥಿಗಳಾಹಾರ ದಾನದ ಸತ್ರಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಸರ್ವನ್ಯಾಂಕನ ಪಿತಾಮಹ ಕೊಂತದ ಬೀರ

ಕರಿಘಟೆಗಳೊಡ್ಡನೊಡೆಯಿಱಿ । ದರಿಬಳಮಂ ಗೆಲ್ದು ಚಕ್ರಿತ್ರೈಲಪನಂ ಸಂ ।
ಗರದೊಳ್ ಮೆಚ್ಚಿಸಿದದಟಂ । ಪರಬಳಮಲ್ಲಂ ಪ್ರತಾಪಿ ಕೊಂತದ ಬೀರಂ ॥81॥

### ಸರ್ವನ್ಯಾಂಕ

ಹರಚರಣಕಮಳಭೃಂಗಂ । ಧುರದೊಳ್ ಪೆಱಪಿಂಗನನ್ಯವನಿತಾಪುತ್ರಂ ।
ಸ್ಥಿರವಾಕ್ಯಂ ಬುಧಮಿತ್ರಂ । ಸುರತರುವೆರೆದವರ್ಗೆ ಬಿರುದಸರ್ವನ್ಯಾಂಕಂ ॥82॥

---

## 28 ಷಿಕಾರಿಪುರ 13. 1068

ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನ ಪಸಾಯಿತ ಲಕ್ಷ್ಮರಸನು ಬಳ್ಳಿಗಾವೆಯ ಮಲ್ಲಿಕಾಮೋದಶಾಂತಿನಾಥದೇವರ ಬಸದಿಗೆ ಶಿಲಾಕರ್ಮವನ್ನು ಮಾಡಿಸಿದಂತೆ ಹೇಳಿದೆ.

### ಭುವನೈಕಮಲ್ಲ ( ಸೋಮೇಶ್ವರ II )

ಜನುಮಂ ಧರ್ಮಕ್ಕೆ ಧರ್ಮಾನ್ವಯಮನಸದಳಂ ಸಾಧುವರ್ಗಕ್ಕೆ ವರ್ಗ ।
ತ್ರಯಮಂ ತನ್ನಂತರಂಗಕ್ಕೊಡರಿಸಿ ಧರೆಯುಂ ಕೂಡೆ ಸನ್ಮಾನದಾನ ॥

ವ್ಯಯದಿಂ ಸಂತೈಸೆ ಕಾಲಂ ಕೃತಯುಗಮಯಮಾಯ್ತೆಂಬಿನಂ ತನ್ನ ರಾಜ್ಯೋ |
ದಯದೊಳ್ ಲೋಕಕ್ಕೆ ರಾಗೋದಯಮೊದವಿದುದೇಂ ಧನ್ಯನೋ ಸಾರ್ವಭೌಮಂ||
ಪೆಸರಂ ಕೇಳ್ದಳ್ಕಿ ಬೆಳ್ಕುತ್ತಿರ್ದುದು ವರಧರಣೀಮಂಡಲಂ ಗಂಡುಗೆಟ್ಟಾ |
ಳ್ವಸನಂ ಪೂಣ್ದಿತ್ತು ಶೌರ್ಯ್ಯೋನ್ನತಿಗಗಿದಮುಪ್ಪನ್ಮಂಡಲಂ ಮೆಲ್ಪನಾವ ||
ರ್ಜಿಸಿದೊಂದಾಜ್ಞಾವಿಶೇಷಕ್ಕಳಿಸಿದುದು ಸುಪ್ಪನ್ಮಂಡಲಂ ಸಂತಮಿಂತಾ |
ದೆಸಕಂ ಕೆಯ್ಗಣ್ಮೆ ಸೋಮೇಶ್ವರನೃಪತಿ ಮಹೀಚಕ್ರಮಂ ನೆಟ್ಟನಾಳ್ದಂ ||84||

ಲಕ್ಷ್ಮರಸ

ಭುವನೈಕಮಲ್ಲದೇವನ | ಭವನದೊಳಂ ತಾನೆ ಮಾನಸಂ ತಾನೆ ಮಹಾ |
ವ್ಯವಸಾಯಿ ತಾನೆ ವಿಜಯ | ಪ್ರವರ್ದ್ಧಕಂ ತಾನೆ ಪಸಯಿತಂ ಲಕ್ಷ್ಮನೃಪಂ ||85||
ಅಣುಗಾಳ್ ಕಾರ್ಯ್ಯದ ಶೌರ್ಯ್ಯದಾಳ್ ವಿಜಯದಾಳ್ ಚಾಳುಕ್ಯರಾಜ್ಯಕ್ಕೆ ಕಾ |
ರಣಮಾದಾಳ್ ಜಯಿಲಾಳ್ತನಕ್ಕೆ ನೆಲೆಯಾದಾಳ್ ಕಟ್ಟಾಯದಾಳ್ ಮಿಕ್ಕ ಮ ||
ನ್ನಣೆಯಾಳ್ ಮೊಂನನದಾಳ್ ನೆಗೞ್ತೆವಡೆದಾಳ್ ವಿಕ್ರಾಂತದಾಳ್ ಮೇಳದಾಳ್ |
ರಣದಾಳಾಳ್ದನ ನಚ್ಚುವಾಸೆಯೊಳಂ ವಿರ್ಪ್ಪನದಾಳ್ ಲಕ್ಷ್ಮಣಂ ||86||
ಬಲವಲೆವ ಮಲೆವ ಕೆಲೆವದ | ಟಲೆವ ನೆಲಂಬಲೆವ ಮಲೆಪರೆಲ್ಲಂ ಮುಱಿದಂ |
ಮಲೆಯದ ಕೆಲೆಯದ ಬಲಯದ | ಮಲೆಪರನಿನುಸಕೆ ಬೆನಸಿದಂ ಲಕ್ಷ್ಮನೃಪಂ||87||
ಆಳ್ವಲಮುಳ್ಳೊಡಶ್ವಬಲಮಿಲ್ಲ ಭಟಾಶ್ವಬಲಂಗಳುಳ್ಳೊಡಂ |
ತೋಳ್ವಲಮಿಲ್ಲ ಭೃತ್ಯಹಯದೋರ್ಬ್ಬಲಮುಳ್ಳೊಡಮೇರ್ವಲಂಗಳಿ ||
ಲ್ಲಾಳ್ವಿಸಗೆಯ್ವುದೇಕೆ ಬಲವರ್ ಮಲೆಪರ್ ಮಲೆಯೆಂಬುದೇನದಂ |
ಬೇಳ್ವೊಲಮಾಗೆ ಮುಂ ತಱಿದನಲ್ಲನೆ ಲಕ್ಷ್ಮಣನೆಂಬ ರಾವಣಂ ||88||
ಕಪಿ ದುರ್ಗ್ಗಂ ಚಾತುರಂಗಂ ಬನನೆ ದಳವೃಳಂ ದಾಱೆ ಸೂಱೆಗೊಳಿಸಿಪ್ಪಾ |
ಹವದೊಳ್ ಚಾಳುಕ್ಯರಾಮಂ ಬೆಸಸ ರಿಪುಬಳಕ್ಕೆನ್ನನಿಂಪ್ಪಾರಿಯನ್ನಂ ||
ಭವನನ್ನಂ ಭದ್ರನನ್ನಂ ಸಿಮಿಲ ಬಳಗದನ್ನಂ ಜ್ವಲಜ್ಜ್ವಾಲಿಯನ್ನಂ |
ಜವನನ್ನಂ ಮಾರಿಯನ್ನಂ ಸಮರಸಮಯದೊಳ್ ಲಕ್ಷ್ಮಣಂ ರಾಮನನ್ನಂ ||89||
ಕುದುರೆಯ ಮೇಲೆ ಬಲ್ ಪರಶು ಶೂಲಿಗೆ ತೀರಿಕೆ ಭಿಂಡಿವಾಳಮ |
ತ್ತಿದ ಕರವಾಳಮಾಟಿಸುವ ಕರ್ಕಶ ಪಾಱುವ ಚಕ್ರಮೆಂದೊಡಂ ||
ತೊಡಱುವರೆಂತು ಪಾಯಿಸುವರೆಂತು ತಱುಂಬುವರೆಂತು ನಿಲ್ವರೆಂ |
ತೊದವುವರೆಂತು ಲಕ್ಷ್ಮಣನೊಳಾಂತು ಬಿರ್ದ್ದಂಕುವರನ್ಯಭೂಭುಜರ್ ||90||

ಈಯಲ್ ಬಂದೊಡೆ ಕಲ್ಪವೃಕ್ಷಮಿದಿರಂ ಬಂದಾಂತ ವಿದ್ವಿಷ್ಟರಂ |
ಸೋಯಲ್ ಬಂದೊಡಕಾಲಮೃತ್ಯು ಶರಣಾಯಾತಾವನೀಪಾಲರಂ ||
ಕಾಯಲ್ ಬಂದೊಡೆ ವಜ್ರಶೈಲಕೃತದುರ್ಗಂ ಲೌಲ್ಯಭಾವಂ ಪರ |
ಸ್ತ್ರೀಯೊಳ್ ಬಂದೊಡೆ ರಾವಣಾತ್ಮಜಚಮೂವಿದ್ರಾವಣಂ ಲಕ್ಷ್ಮಣಂ ||91||

ಬಿಸುಪಳಿದರ್ಕನುರ್ಕುಡಿಗುಮಿಂದುವ ಕಾಂತಿ ಕಲಿಲ್ದು ಮಾಗಸಂ |
ಕುಸಿಗುಮಿಳಾತಳಂ ತಳರ್ಗುಮಂಬುಧಿ ಬತ್ತುಗುಮಿಲ್ಲಿ ಲಕ್ಷ್ಮಣಂ ||
ಪುಸಿದೊಡಮಾರ್ಗೆ ಟೆಪ್ಪರಮನೊಡ್ಡಿದೊಡಂ ಮನಮೊಲ್ದು ಕೂಡಿ ಥಿ |
ದ್ರಿಸಿದೊಡಮನ್ಯನಾರಿಗೆ ಮರುಳ್ದೊಡಮಾಹವದೊಳ್ ಮರಲ್ದೊಡಂ ||92||

ಶತ್ರುಘ್ನಂ ಹರಿಶೌರ್ಯನಂಗದಭುಜಂ ಸುಗ್ರೀವನಾತ್ಮೇಶಸೌ |
ಮಿತ್ರಂ ರಾಮನಪಾಮರಂ ನರವರಂ ದುರ್ಯೋಧನಂ ಭೀಮಗಾ ||
ತ್ರತ್ರಂ ಭೀಷ್ಮಯುಧಿಷ್ಠಿರಂ ಗುರುಕೃಪಂ ಸತ್ಕರ್ಣನೆಂದಂದೆ ದಲ್ |
ಚಿತ್ರಂ ಭಾವಿಸೆ ಲಕ್ಷ್ಮಭೂಪಚರಿತಂ ರಾಮಾಯಣಂ ಭಾರತಂ ||93||

ಕಲಿತನಮಿಲ್ಲ ಚಾಗಿಗೆ ವದಾನ್ಯತೆ ಮೆಯ್ಗಲಿಗಿಲ್ಲ ಚಾಗಿ ಮೆ |
ಯ್ಗಲಿಯೆನಿಪಂಗೆ ಶೌಚಗುಣಮಿಲ್ಲ ಕರಂ ಕಲಿ ಚಾಗಿ ಶೌಚಿಗಂ ||
ನಿಲೆ ನುಡಿವೋಜೆಯಿಲ್ಲ ಕಲಿ ಚಾಗಿ ಮಹಾಶುಚಿ ಸತ್ಯವಾದಿ ಮಂ |
ಡಲಿಕರೊಳೀತನೆಂದು ಪೊಗಟ್ಗುಂ ಬುಧಮಂಡಲಿ ಲಕ್ಷ್ಮಭೂಪನಂ ||94||

---

## 29 ಷಿಕಾರಿಪುರ 110. ಸು. 1070

ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನ ಸಾಮಂತ ಉದಯಾದಿತ್ಯನು ದತ್ತಿಯನ್ನು ಬಿಟ್ಟಂತೆ ತೋರುತ್ತದೆ.

### ತ್ರೈಲೋಕ್ಯಮಲ್ಲ

ಶರಣೆಂದುಂ ಭೀತಿಯಿಂ ಕೆಯ್ಮುಗಿದುಮಿರದೊಡಮ್ಮಮ್ಮ ದೋರ್ವಿಕ್ರಮಾಡಂ |
ಬರದಿಂ ತ್ರೈಲೋಕ್ಯಮಲ್ಲಂ ಮಸಗಿ ಮುಳಿದು ಮೇಲೆತ್ತಿದಂ ದಾಳಿಯಿಟ್ಟಂ ||
ಪರಿಯಿಟ್ಟಂ ಮುತ್ತಿದಂ ತೊಟ್ತುಳಿದುಳಿದನಡಂಗೊತ್ತಿದಂ ತುತ್ತಿದಂ ಬೇ |
ರ್ವರಸಂ ತಂತೆತ್ತಿ ಕಿಟ್ತಿತ್ತಿದನಹಿತರನೆಂಬಂತಿದಂ ಕೇಳಲಕ್ಕುಂ ||95||

ಭುವನೈಕಮಲ್ಲ

ಕಱಿವ ನೆಣಂ ಪೊರ್ದಱ್ವ ಬಿಸುನೆತ್ತರ ಧಾರೆ ಸಿಡಿಲ್ವ ಮುತ್ತು ಪಾ |
ಱುವ ರದನಾಳಿ ಸೋರ್ವ ಕರುಳುಣ್ಮುವ ಖಂಡಮೆೞಲ್ವ ಮಸ್ತಕಂ ||
ತವುವ ಬಲಂ ಕೞಲ್ವ ನಖಮೇಱುವ ಸುಯ್ ಸುರಿವೇಱು ತೋಱೆ ನು |
ರ್ಗವೆ ರಿಪುದಂತಿಗಳ್ ಪರಿಯೆ ಗಂಧಗಜಂ ಭುವನೈಕಮಲ್ಲನಾ ||96||

---

30 ಶಿಕಾರಿಪುರ 129. 1071

**ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನು ದಂಡನಾಯಕ ಉದಯಾದಿತ್ಯನ ಬಿನ್ನಪದಿಂದ ಬಳ್ಳಿಗಾವೆಯ ಹರಿಹರಾದಿತ್ಯದೇವರಿಗೆ ಬಿದಿರಿಂಗೆರೆಯೆಂಬ ಗ್ರಾಮವನ್ನು ಬಿಟ್ಟಂತೆ ಹೇಳಿದೆ.**

**ಗುಣಗಳ್ಳಮುನಿ**

ಶ್ರೀಮನ್ಮುಕ್ತಿವಧೂಲೀ | ಲಾಮಂಗಳತಿಳಕನೆಸೆದನದ್ವಯಮಹಿಮೋ |
ದ್ದಾಮಂ ಸಂಪೂರ್ಣಂ ವಿ | ದ್ಯಾಮೂರ್ತಿ ಜಿತಾತ್ಮನಕ್ಷರಂ ಗುಣಗಳ್ಳಂ ||97||
ಅಚಳನ ದೆಸೆಯಿಂದುದಯಿಸು | ವ ಚರಾಚರಮಚಳನಿಂದೆ ಪೊಱಗಣಮಲ್ತೆಂ |
ದಚಳಿತಚಿತ್ತದಿನಿರ್ಪಂ | ಪ್ರಚಂಡನದ್ವೈತಿ ನಿರುಪಮಂ ಗುಣಗಳ್ಳಂ ||98||
ಜ್ಞಾನಮೆ ನಾಂ ನಿನಗೊಡಲೆಸೆ | ವಾನಂದಂ ತೋರ್ಪುವೆಲ್ಲಮೆನ್ನ ನೆೞಲ್ ಮ |
ತ್ತೇನುಂ ಬೇಱಿಲ್ಲೆಂಬನಿ | ಳಾನುತನದ್ವೈತಶೇಖರಂ ಗುಣಗಳ್ಳಂ ||99||
ಮುಕ್ತಿಶ್ರೀಸತಿಗನು | ರಕ್ತಂ ಸಂಸಾರವಿ |
ರಕ್ತಂ ನಿರ್ವಿಷಯನಿರಪೇಕ್ಷಂ ಶುಚಿ ಜೀವ |
ನ್ಮುಕ್ತಂ ನಿರ್ವಾಣಿ ಗುಣಗಳ್ಳಂ ||100||
ಅಱಿವಣ್ಮು ವೈರಾಗ್ಯಂ | ತಱಿಸಲವಭ್ಯಾಸಂ|
ನೆಱೆ ಭಕ್ತಿ ಶಾಂತಿ ಧೃತಿ ತುಷ್ಟಿಯೆಂಬಿವ |
ರ್ಕೆಱೆವಟ್ಟಾಗಿರ್ದಂ ಗುಣಗಳ್ಳಂ ||101||
ದೊರೆಕೊಂಡೀದೇಹದೊಳ್ ಮೋಹಮನೆಲೆ ಗುಣಗಳ್ಳಾರ್ಯ ನೀಂ ಮಾಣ್ದು ಬೆಂಕೊಂ |
ಡರಿಷಡ್ವರ್ಗಂಗಳಂ ಭೇದಮನಿಱಿದಳಿಪಂ ಬಿಟ್ಟು ಕರ್ಮಂಗಳೆಲ್ಲಂ ||
ಬೆರಸಾನೆಂದಿರ್ಪಹಂಕಾರಮನವಯವದಿಂ ಸುಟ್ಟು ಸಾನಂದದಿಂದಂ |
ಪರಿಪೂರ್ಣಜ್ಯೋತಿ ನೀನಾಗಿರೆ ಬಿಡುವಳೆ ಪೇೞ್ ಮುಕ್ತಿ ನಿನ್ನಂ ಮುನೀಂದ್ರಾ ||102||

---

## 31 ಸೊರಬ 299. 1073

ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನ ಮಹಾಪ್ರಧಾನ ಉದಯಾದಿತ್ಯದಂಡ ನಾಯಕನ ಆಜ್ಞಾನುಸಾರವಾಗಿ ದಾಸಗಾವುಂಡನು ಗಂಗೇಶ್ವರದ ಸ್ವಯಂಭು ದೇವರ್ಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಉದಯಾದಿತ್ಯ

ಜಗಮೇಕಚ್ಛತ್ರಮಾಯ್ತುರ್ಕಿದ ಧರಣಿಧರದ್ರೋಹರಱ್ಕಾಡಿದರ್ ಭೂ |
ಸಗರಂ ಸಿಂದೂರಮುದ್ರಾಂಕಿತಮೆನಿಸಿದುದನ್ಯಾವನೀಪಾಳಕರ್ ಕೆ ||
ಯ್ಮುಗಿದಿತ್ತುಂ ತೆತ್ತುಮಾಜ್ಞಾವಶಗತರೆನಿಸಿರ್ದರ್ ಸಮಂತೆತ್ತಲುಂ ಚ |
ಕ್ರಿಗೆ ತನ್ನಿಂದೆಂದೊಡೇಂ ವೀರನೊ ನೆಗೞ್ದುದಯಾದಿತ್ಯದಂಡಾಧಿನಾಥಂ ||103||

ಇದಿರೊಳ್ ರಾವಣಿ ನಿಂದು ಮಾರ್ಮಲೆದೊಡಂ ಗೆಲ್ಗುಂ ಜಗಂ ಬೇಡಿ ಬಂ |
ದಿದಿರೊಳ್ ನಿಂದೊಡಮೀಗುಮಿಂತಿವೆರಡರ್ಕಂದಿನ್ನ ಮಿತ್ತ್ರಂ (?) ಕೞು ||
ತ್ತಿದಿರಾಗಿಂ ಕವಿತಂದು ಬೇಡಿಮಿಱಿಗುಂ ಪ್ರಾಣ್ದೀಗುಮೆಂದಂದು ಬಾ |
ಪ್ಪುದಯಾದಿತ್ಯನೊಳಣ್ಮಿ ಸಾರ್ಪಿನೆಪಕಂ ಮೆಯ್ವೆತ್ತು ಕಣ್ಗೊಪ್ಪುಗುಂ ||104||

---

## 32 ಸೀರಲ್ಗಿಯ ಶಾಸನ

### (ಎಪಿಗ್ರಾಫಿಯಾ ಇಂಡಿಕ XVI, 70). 1074-75.

ಇದರಲ್ಲಿ ಚಾಳುಕ್ಯರಾಜನಾದ ಭುವನೈಕಮಲ್ಲನ ಆಳಿಕೆಯಲ್ಲಿ ಕಾದಂಬಶಾಂತಿವರ್ಮನು ಪೊಂಬಳ್ಳಿಯ ರಾಮೇಶ್ವರದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟನೆಂದು ಹೇಳಿದೆ.

### ಕಾದಂಬಶಾಂತಿವರ್ಮ

ಬಳವದ್ವಿದ್ವಿಷ್ಟಭೂಪಾಳಕರೆಱಗಿ ಶರಣ್ಬೊಕ್ಕು ದುರ್ವಾರಬಾಹಾ |
ಬಳಮಂ ಮಾಣ್ದೆಂದುದಂ ಕೊಟ್ಟಳುಕಿ ಬಳುಕಿ ಭೃತ್ಯತ್ವಮಂ ಪೊರ್ದಾರೆಂದಂ ||
ದೆಲೆಲೇ ಮೀಱಲ್ ಕಡಂಗಲ್ ತೊಡರಲೆಡೆಱಿಪೊಟ್ಟಯ್ಸಲುಕ್ಕಳ್ ಪಳಂಚಲ್ |
ಪೊಳೆಪಿಂ ಮಾಱಾಂತು ಕಾದಲ್ ನೆಱೆವರೆ ಧುರದೊಳ್ ದೇವ ಕಾದಂಬರುದ್ರಾ ||105||

ಬಳವತ್ಕ್ರೋಧಾಗ್ನಿಯಿಂದಾಂತಹಿತರನೆಲೆಲೇ ಕೊಲ್ವುದಂತೀರ್ಕೆ ಬಾಹಾ |
ಬಳದಿಂದಮ್ಮಮ್ಮ ದಿಕ್ಪಾಳರನಳುಕಿಸಲದ್ರೀಂದ್ರಮಂ ಚಾಳಿಸಲ್ ಭೂ ||
ತಳಮುಂತುಂ ಕಂಪಿಸಲ್ ದಿಗ್ಗಜಮನಗಱಿಸಲ್ ವಾರ್ಧಿಯಂ ಶೋಷಿಸಲ್ಕೇಂ |
ಜಳಮೋ ಪೇೞ್ ಸಾಲನೇ ತತ್ಕ್ಷಣದೊಳೆ ಮುಳಿದಂದೋಹೊ ಕಾದಂಬರುದ್ರಂ ||

ಕಡುಪಿಂದಂ ದೇವ ನಿನ್ನೊಳ್ ಬಿಡದೆಡಱುವವಂಗುಂಟೆ ಶೂಲಂ ಕಪಾಲಂ ।
ಕೊಡೆ ಖಟ್ವಾಂಗಂ ಪಿನಾಕಂ ಪೊಳೆವ ನೊಸಲ ಕಣ್ ಹಸ್ತಿಚರ್ಮಂ ಶಿರೋಧ್ವ ॥
.... ಭೀಳಭೂತಾವಳಿ ಕಱಿಗೊರಲರ್ಧಾಂಗದೊಳ್ ಗೌರಿ ಪೆಂಪಂ ।
ಪಡೆದರ್ಧೇಂದುಪ್ರಭಾಭಾಸುರವಿಕಟಜಟಾಜೂಟಕೋಟೀವಿಟಂಕಂ ॥107॥

---

## 33 ನಗರ 35. 1077

**ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಆಳಿಕೆಯಲ್ಲಿ ನನ್ನಿಸಾಂತರದೇವನು ಪಂಚಕೂಟಬಸ್ತಿಗೆ ಗ್ರಾಮಗಳನ್ನು ಬಿಟ್ಟಂತೆ ಹೇಳಿದೆ.**

### ನನ್ನಿಸಾಂತರ (ಗೋವಿಂದರ)

ಚರಣವಿನಮ್ರನಾಗೆ ತೊದಳೇಂ ಬಿದಿ ಮುನ್ನೆ ಲಲಾಟಪಟ್ಟದೊಳ್ ।
ಬರೆದ ದುರಕ್ಷರಾವಳಿಗಳಂ ತೊಳೆದಪ್ಪವು ತಾಮೆ ನಿನ್ನ ಸ ॥
ಚ್ಚರಣರಜಂಗಳೆಂದೊಡುಱಿದರ್ ನಿನಗಾರ್ ದೊರೆ ದೇವ ಮಂಡಳೇ ।
ಶ್ವರಕಳಭೈಕಕೇಸರಿ ನರೇಂದ್ರಶಿಖಾಮಣಿ ನನ್ನಿಸಾಂತರಾ ॥108॥

ಪ್ರತಿಬಿಂಬಂ ರೂಪಿನೊಳ್ ಪೋಲ್ಕೆಮ ಗುಣದೊಳದಾರ್ ಪೋಲ್ತಪರ್ ನಿನ್ನ ನೆಂಬೀ ।
ಸ್ತುತಿಯಂ ನಿಶ್ಚೈಸಿ ಗೋವಿಂದರ ಬೆಸೆಯದಿರೆಂತೆಂಬ ನಿನ್ನಂತೆ ನೋಡು ॥
ನ್ನತಿಯೊಳ್ ಹೇಮಾಚಳಂ ಕ್ಷಾಂತಿಯೊಳವನಿತಳಂ ಮೇರೆಯೊಳ್ ವಾರ್ಧಿ ಶೌಚ ।
ವ್ರತದೊಳ್ ಸಿಂಧೂದ್ಭವಂ ಸತ್ಯದೊಳಿನತನಯಂ ಶೌರ್ಯದೊಳ್ ಭೀಮಸೇನಂ ॥109॥

ದೇವ ಸಮುದ್ರಮುದ್ರಿತವಸುಂಧರೆಯೊಳ್ ನೃಪರಾದರೆಲ್ಲರಂ ।
ಭಾವಿಸಿ ಕಂಡೆನಾಂತ ರಿಪುಸಂತತಿಯಂ ನೆಲೆಗೆಟ್ಟು ಪೋಪಿನಂ ॥
ಸೋವ ಬುಧಾಳಿಗಾರ್ತು ಪಿರಿದೀವ ಶರಣ್ಬುಗೆ ಕಾವ ಸದ್ಗುಣ ।
ಕ್ಕಾವನೊ ನಿನ್ನವೊಲ್ ನೆಱೆದ ಮಂಡಳಿಕಂ ಕಲಿ ನನ್ನಿಸಾಂತರಾ ॥110॥

ಪಿರಿದೆತ್ತಂ ಮೇರುಗಂ ಸಾಗರಮೆ ಜಗದೊಳಾಮೇರುಗಂ ಸಾಗರಕ್ಕಂ ।
ಧರಣೀಚಕ್ರಂ ಕರಂ ಭಾವಿಸುವೊಡೆ ಪಿರಿದಾಮೇರುಗಂ ಸಾಗರಕ್ಕಂ ॥
ಧರಣೀಚಕ್ರಕ್ಕಮಾಶಾಳಿಯೆ ಕಡುಪಿರಿದಾಮೇರುಗಂ ಸಾಗರಕ್ಕಂ ।
ಧರಣೀಚಕ್ರಕ್ಕಮಾಶಾಳಿಗಮೆಲೆ ಪಿರಿಯಂ ಸಾಂತರಾದಿತ್ಯದೇವಂ ॥111॥

### ಬೀರಸಾಂತರ

ಧುರದೊಳಸಿಲತೆಯನುರ್ಚಿದೊ | ಡರಿನೃಪಯುವತಿಯುರ ಮುಗುಳ ಕಂಕಣ ದಾ ಕೀಲ್ |
ತರತರದಿನುರ್ಚಿದುವು ನಿಜ | ಕರಖಡ್ಗಮವರ್ಕೆ ಕೀಲೆ ಸಾಂತರನೃಪತೀ ||112||

### ಭುಜಬಳಸಾಂತರ

ಭುಜಬಳಸಾಂತರನೃಪತಿಯ | ಭುಜಬಳದಳವುಂ ಪ್ರತಾಪಮುಂ ಶೂರತೆಯುಂ |
ವಿಜಿಗೀಷುವೃತ್ತಿಯುಂ ನಿಜ | ವಿಜಯಮುಮೀಲೋಕದೊಳಗೆ ಭುಂಭುಕನುನಿಕುಂ ||

### ಮಾಧವ

ಮಾಧವನ ಜಯಶ್ರೀಗಾ | ಮಾಧವನ ಭುಜಾವಲೇಪಮಂ ಬಣ್ಣಿಸಲಾ |
ಮಾಧವನುಂ ತ್ರಿಭುವನದೊಳು | ಮಾಧವನುಂ ನೆಱೆಯರುಱಿದವರ್ ನೆಱೆದಪರೇ||

---

## 34 ಷಿಕಾರಿಪುರ 124. 1077

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನು ದಂಡನಾಯಕ ಬರ್ಮದೇವನ ಪ್ರಾರ್ಥನಾನುಸಾರವಾಗಿ ಬಳ್ಳಿಗಾವೆಯ ಜಿನಾಲಯ ಬಸದಿಗೆ ಮನೆವನೆಯೆಂಬ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

### ವಿಕ್ರಮಾದಿತ್ಯ

ಅಲಗಂ ಚೋಳಾವನೀಶಂಗಣಸನಣಿಯರಂ ಲಾಳಭೂಪಂಗೆ ಬಾಹಾ |
ಬಲದಿಂದಂ ತೋಱಿ ಮೀಱುತ್ತಡಸಿದುಭಯಚಕ್ರೇಶಸಾಮಂತಭೂಭೃ ||
ತ್ಕುಲಮಂ ತನ್ನೇಱಿದುಗ್ರೇಭದಿನುಱಿಮುಱಿ ಬೆಂಕೊಂಡು ಚಾಳುಕ್ಯರಾಜ್ಯೋ |
ಜ್ವಲಲಕ್ಷ್ಮೀನಾಥನಾಳ್ದಂ ಭುವನಜನನುತಂ ವಿಕ್ರಮಾದಿತ್ಯದೇವಂ ||115||
ನರಸಿಂಹಾಕಾರದಿಂ ದಾನವಪತಿಯುರಮಂ ಸೀಳ್ದನಣ್ಮಣ್ಮ ರುದ್ರಂ |
ಬೆರಸಾಕೈಲಾಸಮಂ ತೂಗಿದನಳವಳವಾರ್ತರ್ತಿಯಿಂ ಚರ್ಮಮಂ ನೆ ||
ಟ್ಟರೆದಿಂದ್ರಂಗಿತ್ತನಾರ್ಪಾರ್ಪಖಿಳಧರೆ ಗತಕ್ಷತ್ರಮಪ್ಪಂತೆ ಧಾತ್ರೀ |
ಶರನಿರ್ಪತ್ತೊಂದು ಸೂಱ್ ಕೊಂದನ ಚಲಮೆ ಚಲಂ ವಿಕ್ರಮಾದಿತ್ಯ ನಿನ್ನಾ ||116||
ಪುದುವೋಕನ್ಯರ್ಗ ಮಾನೊರ್ಬನೆ ತಳೆಯಲಿದಂ ಸಾಲ್ವೆನೆಂದಾಮಹಾಕೂ |
ರ್ಮದ ಬೆನ್ನಿಂದಾಭುಜಂಗಾಧಿಪನ ಪೆಡೆಗಳಿಂದಾದಿಶಾಕುಂಜರಸ್ಕಂ ||
ಧದಿನಾಭೂಭೃದ್ದರೀಮೂಲದಿನಖಿಲಧರಾಭಾರಮಂ ತಂದು ವಿಕ್ರಾಂ |
ತದ ಬಳ್ಪಿಂ ತನ್ನ ತೋಳೊಳ್ ಪದುಳಮಿರಿಸಿದಂ ವಿಕ್ರಮಾದಿತ್ಯದೇವಂ ||117||

## ಬರ್ಮದೇವ

ಧರೆಗೆಲ್ಲಂ ತನ್ನ ಬಾಹಾಬಲದ ನೆಱವು ತನ್ನಣ್ಮು ತನ್ನುಗ್ರತೇಜ |
ಸ್ಫುರಿತಂ ತನ್ನಾ ಪುರ್ ತನ್ನೊನ್ನುಡಿಯ ನಿಲವು ತನ್ನೂರ್ಜಿತಖ್ಯಾತಿಯೊಳ್ಪು ||
ಚ್ಚರಿಯಾಗುತ್ತಿರ್ಪಿನಂ ರಂಜಿಸಿ ಸಕಲಗುಣಾನರ್ಘ್ಯರತ್ನಕ್ಕೆ ರತ್ನಾ |
ಕರನಾದಂ ದಂಡನಾಥಾಗ್ರಣಿ ಸಕಲಜಗನ್ಮಂಡನಂ ಬರ್ಮದೇವಂ ||118||

ಜನಕೆಲ್ಲಂ ತಾನೆ ಕಣ್ಣುಂ ಗತಿಯುಮೆನಿಸಿ ತನ್ನಿಂ ರಿಪುಕ್ಷತ್ರನಕ್ಷ |
ತ್ರನಿಕಾಯಂ ನಿಲ್ಲದೆಲ್ಲಂ ಮಸುಳೆ ಕಲಿಮಿಳದ್ಧ್ವಾಂತಮುಱ್ಕಾಡೆ ವಿಶ್ವಾ |
ವನಿಯುಂ ಮಿಕ್ಕೇಱೆ ಯಿಂದಂ ಬೆಳಪೆಸಕಮನಾಂತಿರ್ದಪಂ ವಿಕ್ರಮಾದಿ |
ತ್ಯನ ತೇಜಶ್ಚಕ್ರಮಿರ್ಪಂತೆವೊಲನವಧಿಸತ್ಪ್ರೋದಯಂ ಬರ್ಮದೇವಂ ||119||

ಹರಿಯಿಂ ಚಾಳಿತಮಾದುದಂಕದಜಳೇಂದ್ರಂ ದೈತ್ಯನಿಂ ಸಾರ್ದುದು |
ರ್ವಿ ರಸಾಗರ್ಭಮನಾಲಯಾನಿಲನ ಪೊಯ್ಲಿಂ ಪಾಱಿತಾಶಾಗಜೋ ||
ತ್ಕರಮೆಂದಂದಿವರಲ್ಲಿ ಧೀರಗುಣಮೆಲ್ಲಿತ್ತೆಂದಿವಂ ನಕ್ಕು ಧಿ |
ಕ್ಕರಿಪಂ ನಿಶ್ಚಲಮಾದ ಧೈರ್ಯಗುಣದೊಳ್ಪಿಂ ಬರ್ಮದಂಡಾಧಿಪಂ ||120||

ಕುಡುವೆಡೆಗಾದುದೇಂ ಮಡಗಲಾದುದೆ ವಿತ್ತಮರಾತಿಯಂ ಪಡ |
ಲ್ವಡಿಪೆಡೆಗಾದುದೇಂ ಬಱಿದೆ ಪೊತ್ತಿರಲಾದುದೆ ಕೆಯ್ದು ಸತ್ವಮಂ ||
ನುಡಿವೆಡೆಗಾದುದೇಂ ಪುಸಿಯಲಾದುದೆ ನಾಲಗೆಯೆಂದು ಕೀರ್ತಿ ದಾಂ |
ಗುಡಿವಿಡೆ ಬರ್ಮದೇವನನಿತುಂ ಕ್ಷಣದುನ್ನತಿಯಂ ನೆಗಱ್ಚಿದಂ ||121||

## ಸಿಂಗ

ವಿನಯದ ಸೀಮೆ ಧರ್ಮದ ತವರ್ಮನೆ ಸತ್ಯದ ಜನ್ಮಭೂಮಿ ಮಾಂ |
ತನದೆಱೆವಟ್ಟು ಪೆಂಪಿನದಗುಂತಿ ವಿವೇಕದ ಬೀಡುದಾಣಮಾ ||
ರ್ಪಿನ ಕಣಿಯೆಂದು ಬಣ್ಣಿಪುದು ಭೂವಳಯಂ ಪ್ರತಿಕಂಠಸಿಂಗನಂ |
ಜಿನಪತಿಪಾದಪಂಕರುಹಭೃಂಗನನುದ್ಘಗುಣಪ್ರಸಂಗನಂ ||122||

ಬರೆಪದ ಬಲ್ಮೆ ಬಾಜನೆಯ ಬಿನ್ನಣಮೊಪ್ಪುವ ಲೆಕ್ಕದೋಜೆ ಶಂ |
ಕರಸುತನೊಳ್ ಸರಸ್ವತಿಯೊಳಂಬುರುಹಾಸನನೊಳ್ ವಿಚಾರಿಸಲ್ ||
ದೊರೆ ಸರಿ ಪಾಟಿಯೆಂದು ನಿಖಿಳೋರ್ವರೆ ಬಣ್ಣಿಸುತಿರ್ಪುದೆಂದೊಡೇಂ |
ಸಿರಿಯನೊ ಸಿಂಗನುಜ್ವಲಯಶೋವಿಭವಂ ಪ್ರತಿಪನ್ನಮಂದರಂ ||123||

ಶುಚಿ ಸುರಸಿಂಧುಜಂ ಸುರಸರಿದ್ಭವನಿಂದನಿಲಪ್ರಿಯಾತ್ಮಜಂ |
ಶುಚಿ ಗಗನಾಪಗಾತನಯನಿಂ ಪವಮಾನತನೂಜನಿಂ ಶುಕಂ ||
ಶುಚಿ ನೆಗಱ್ದ ನದೀಸುತನಿನಾಕಪಿರಾಜನಿನಾಶುಕರ್ಷಿಯಿಂ |
ಶುಚಿಯೆನೆ ಸಂದನೇದೊರೆತೊ ಶೌಚಗುಣಂ ಪ್ರತಿಕಂಠಸಿಂಗನಾ ||124||

ಪರಹಿತಮುಂ ಕಡಂಗಿ ನೆಱೆ ಮಾಡಲೆ ಕಲ್ತನಶೇಷಸದ್ಬುಧೋ |
ತ್ಕರಮನೊಱಲ್ದು ಮನ್ನಿಸಲೆ ಕಲ್ತನೆಡರ್ ಪಿರಿದೆಂಬ ಶಿಷ್ಟರಂ ||
ಪೊರೆಯಲೆ ಕಲ್ತನುತ್ತಮಗುಣಾಧಿಕರೊಳ್ ದೊರೆಯಪ್ಪೆನೆಂದು ಮ |
ಚ್ಚರಿಸಲೆ ಕಲ್ತನಿಂತುಟಿದು ಕಲ್ತ ಗುಣಂ ಪ್ರತಿಕಂಠಸಿಂಗನಾ ||125||

---

## 35 ಷಿಕಾರಿಪುರ 107. ಸು. 1078

**ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಬಳ್ಳಿಗಾವೆಯ ಕೇದಾರೇಶ್ವರ ದೇವರಿಗೆ ಬಪ್ಪ ದಂಡನಾಯಕನು ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿಕ್ರಮಾದಿತ್ಯ

ಬಳವದ್ವಿದ್ವಿಷ್ಟಭೂಪಾಳಕತಿಮಿರಚಯಂ ಪಿಂಗೆ ಚಾಳುಕ್ಯಭೂಭೃ |
ತ್ಕುಳಪಂಕೇಜಾತಷಂಡಕ್ಕಮರ್ದೆಸೆಯೆ ವಿಕಾಸಂ ತ್ರಿಲೋಕಂಗಳೆಲ್ಲಂ ||
ಬೆಳಗಲ್ ತ್ರೈಲೋಕ್ಯಮಲ್ಲಪ್ರಿಯಸುತನಧಿಕಂ ವಿಕ್ರಮಾದಿತ್ಯದೇವಂ |
ವಿಳಸದ್ವಸ್ತುಪ್ರಶಸ್ತೋದಯಗಿರಿಸಿಖಸಿಂಹಾಸನಾಸೀನನಾದಂ ||126||

ಚತುರಂತಾಖಂಡಭೂಮಂಡಲಪತಿ ಚತುರಾಶಾಂತಸಂಕ್ರಾಂತತೇಜಂ |
ಚತುರಾಶಾಪಾಲಶೀಲಪ್ರತಿನಿಧಿ ಚತುರಂಭೋಧಿಗಾಂಭೀರ್ಯಧುರ್ಯಂ ||
ಚತುರಾಸ್ಯೋದ್ಯತ್ಕಳಾಳೀನಿಧಿ ಚತುರುಪಧಾಶುದ್ಧಬುದ್ಧಿಪ್ರಭಾವಂ |
ಚತುರಂಗಾನೀಕಭಾರಪ್ರಚಳಿತದಿಗಿಭಂ ವಿಕ್ರಮಾದಿತ್ಯದೇವಂ ||127||

---

## 36 ಅರಕಲ್ಗೂಡು 99. 1079

**ಇದರಲ್ಲಿ ಕೊಂಗಾಳ್ವರಾಜನಾದ ಆದಟರಾದಿತ್ಯನು ಬಸದಿಯನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

ಜಗದಾಶ್ಚರ್ಯಮಿದತ್ಯಪೂರ್ವಮಿದಱಿಂದಕ್ಕಬ್ಜಜಂ ಕೂಡ ಬ |
ಟ್ಟಿಗೆಯುಂ ತಿಟ್ಟಮಿಡಲ್ಕಿದೇಂ ನೆಱೆದನೇ ಪೇಱೆಂಬ ಕೊಂಗಾಳ್ವ ಜೈ ||

ನಗೃಹಂ ನಾಪೆ ಜಿಡಂಗುವೆತ್ತ್ರದಟರಾದಿತ್ಯಾವನೀನಾಥಕೀ |
ರ್ತಿಗಡರ್ಪಿರ್ಪರ್ವೊಲಿಂತು ತೋರ್ಪುದೆನೆ ಮತ್ತೇವಣ್ಣಿಪಂ ಬಣ್ಣಿಪಂ ||128||

ಜಗದೊಳ್ ತಾಸೀಪ ದಾನಂ ನೆಗೞ್ದಟರಾದಿತ್ಯಚೈತ್ಯಾಲಯಕ್ಕೆ |
ಯ್ದೆ ಗುಣಾಂಭೋರಾಶಿ ಪೇರಾಗ್ರಣಿ ಪಿಜಯಘುಜೋದ್ಘಾಸಿ ದಿವ್ಯಾರ್ಜನಕ್ಕಂ ||
ದು ಗಡಂ ಸದ್ಭಕ್ತಿಯಿಂದಂ ತಳಿಗೞಿಸಿಯ ಪಣ್ಣಾಲ್ಲಿ ನಾಲ್ವತ್ತೆರಟ್ಬಂ |
ಡುಗಬೀಜಕ್ಕಿತ್ತನತ್ಯುತ್ಸವದಿನದಟರಾದಿತ್ಯನಾದಿತ್ಯತೇಜಂ ||129||

ಇನಿತಂ ಸಿದ್ಧಾಂತದೇವರ್ಗನುನಯದೞ್ದಾಚಂದ್ರತಾರಂ ಸಲುತ್ತಿಂ ? |
ತೆನೆ ಧಾರಾಪೂರ್ವಕಂ ಕೊಟ್ಟದನುದಧಿಜಸ್ಫೂರ್ಜಕಲ್ಲೋಳಲೀಳಾ ||
ವನಿಚಕ್ರಕ್ಕೆಯ್ದೆ ಪರ್ವತ್ತದನಿದಸದನೇನೆಂದಪ್ಪೆ ದಾನದೊಳ್ಪಾ |
ವನುಪಂ ಪಿಕ್ಕಿರ್ಪಿನಂ ಮಾಡಿಸಿದನೆನೆಯೆ ಸದ್ಧರ್ಮ ಕೊಂಗಾಳ್ವಭೂಪಂ ||130||

---

## 37 ಶಿಕಾರಿಪುರ 297. 1080

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ತಮ್ಮ ವೀರನೊಳಂಬಜಯಸಿಂಹನ ದಂಡನಾಯಕ ಬಲದೇವನು ಕೆಲವು ಸುಂಕಗಳನ್ನು ಬಿಟ್ಟು ಕೊಟ್ಟಂತೆ ಹೇಳಿದೆ.

### ವೀರನೊಳಂಬ ಜಯಸಿಂಹ

ಪೊಗೆಯುತ್ತಿರ್ದಪ್ಪುದಿನ್ನುಂ ದಹಳಿ ಪಿಮಸಗಾರಣ್ಯಮಂ ಲಾಳಸಿನ್ನುಂ |
ಪುಗಲೆಂದಿರ್ದಪ್ಪಸಿನ್ನುಂ ನೆಲಸದೆ ತಿವುಳಂ ಲಂಕೆಯಿಂ ತಂಕಲೋಡಲ್ ||
ಬಗೆಯುತ್ತಿರ್ದಪ್ಪಸಿನ್ನುಂ ಪುಳಿದಪನೆಸುತಂ ಕೊಂಕಣಂ ಸಂಕೆಯಿಂ ಗುಂ |
ದುಗೊಳುತ್ತಿರ್ದಪ್ಪನೇಂ ಬಲ್ಲಿದನೊ ಜಕಿತಪಿದ್ವಿಟ್ಕದಂಬಂ ನೊಳಂಬಂ ||131||

### ಬಲದೇವ

ಅರಿದಾಗೇಂ ಬಲ್ಲತೆಂಬಲ್ಲಿಗಪ್ಪದಳಪೀಕಾರ್ಯಪೆಂಬಲ್ಲಿಗಂ ಸಂ |
ಗರಮಣ್ಮಿಟ್ಟಂದುದೆಂಬಲ್ಲಿಗಮರ್ದಗಡರುಂ ಪೇಡಿಗೆಂಬಲ್ಲಿಗಂ ಜೇ ||
ಟ್ಪರ ತಂಡಕ್ಕೀಪೆನೆಂಬಲ್ಲಿಗಮತಿಶುಚಿಯೆಂಬಲ್ಲಿಗಂ ಬಲ್ಲಿಗಂ ಬಾ |
ಪ್ಪುಱೆ ಪಾರ್ಥೇಂದ್ರೇಜ್ಯಭೀಮಾಂತಕಬಲಿಮನು ತಾನೆಂದೊಡಿಂ ಧನ್ಯನಾವಂ ||

ಒಡವುಟ್ಟಿರ್ದುದು ಕರಪಾ | ರ್ಪೊಡವಳೆದುದು ಜೈನಧರ್ಮಮೊಡನಾಡಿದುದೊ |
ಳ್ಪೊಡನೆ ಸಲೆ ಪೊಕ್ಕುವುಂತೇ | ನೆಡೆಯೊಳ್ ಕಲ್ತನೆ ಗುಣಂಗಳಂ ಬಲದೇವಂ ||133||

ಆರಯ್ವೊಡೆ ಕಲಿಕಾಲದೊ | ಳಾರುಂ ಬಲದೇವನೊರೆಗೆ ಪಂದಪರೆ ಗುಣೋ |
ದಾರತೆಯೊಳಱಿವಿನೊಳ್ ಪಾ|ಕ್ಸಾರತೆಯೊಳ್ ದಾನಧರ್ಮದೊಳ್ ಪರಹಿತದೊಳ್||

---

## 38 ಬಿಜಾಪುರದ ಶಾಸನ

( ಇಂಡಿಯನ್ ಆಂಟಿಕ್ವರಿ X, 127). ಸು. 1080

**ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಶ್ರಿತನಾದ ತ್ರ್ಯಂಬಕನ ಸ್ತುತಿಯಿದೆ.**

ತಮದೊಡ್ಡಿಂದಂ ಕಱಂಗಿರ್ದಿರುಳನಮೃತಧಾಮಂ ಕರಸ್ತೋಮದಿಂದ |
ಕ್ರಮಳಂಮಾಡುವಂತಿರೀಗಳ್ ಕೃತಯುಗಚರಿತಂ ತ್ರ್ಯಂಬಕಂ ಸತ್ಯಸೌಜ |
ನ್ಯಮಹಾಂಭೋರಾಶಿ ದೋಷಾಕರಕಲಿಯುಗಮಂ ನಿರ್ಮಳಂಮಾಡಿದಂ ಧಾ |
ತ್ರಿ ಮನಂಗೊಳ್ವಂತು ಗಂಗಾಸಲಿಲಶುಚಿಯಶೋರಾಶಿಪೀಯೂಷದಿಂದಂ ||135||

ಅರಿದಪ್ಪೀಕಲಿಕಾಲದೊಂದು ಪಸುಪಿಂದಂ ನೋಡ ಸೌಜನ್ಯವ |
ಲ್ಲರಿ ಮುಂ ಬಂಜಣಬಾಡಿ ಪಾಡಱಿಯಲೆಂದಿರ್ದಿರ್ದಗಳೀಗಳ್ ನಯಂ ||
ಜೊರೆದೆತ್ತಂ ತಳಿರ್ತ್ತೋಗಿ ಚೈತ್ರಲತೆವೋಲ್ ಚೆಲ್ವಾಗೆ ತಾಳ್ದಿತ್ತು ಬಿ |
ತ್ತರಮಂ ತ್ರ್ಯಂಬಕಸದ್ಗುಣಾಮೃತಪಯಸ್ಸಂಸೇಕದಿಂ ಲೋಕದೊಳ್ ||136||

ಸರದೊಳ್ ಸರಸೀಸಿಗಳಂ | ಬರದೊಳ್ ನಕ್ಷತ್ರಪಙ್ಕ್ತಿಗಳ್ ಪೂರ್ಣಕಳಾ |
ಧರನೊಳ್ ಕಳೆಗಳ್ ಬೆಳಪಂ|ತಿರೆ ಬೆಳಗಿದುಪವಿಳಾಸಗಳ್ ತ್ರ್ಯಂಬಕನೊಳ್||137||

---

## 39 ಲಕ್ಷ್ಮೇಶ್ವರದ ಶಾಸನ

(ಎಪಿಗ್ರಾಫಿಯಾ ಇಂಡಿಕ XVI, 59). 1081

**ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಸಾಮಂತ ದೋಣನು ಪುರಿಗೆರೆಯ (ಲಕ್ಷ್ಮೇಶ್ವರ) ಬಸ್ತಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ವಿಕ್ರಮಾದಿತ್ಯ

ಧರೆಯುಂ ವಾರಾಶಿಪರ್ಯಂತಮನಪಯುಪದಿಂ ದುರ್ವಿನೀತಾವನೀಪಾ |
ಳರ ಬೇರಂ ಕಿೞ್ತು ನೀರೊಳ್ ಗಲಗಲನಲೆದೀಡಾಡಿ ಮುನ್ನಿಂತು ಚಕ್ರೇ ||
ಶ್ವರರಾರ್ ನಿಷ್ಕಂಟಕಂಮಾಡಿದರೆನೆ ಮಹಿ ನಿಷ್ಕಂಟಕಂಮಾಡಿ ಚಕ್ರೇ |
ಶ್ವರರತ್ನಂ ಸಂತತಂ ಪಾಳಿಸಿದನತಿಬಳಂ ವಿಕ್ರಮಾದಿತ್ಯದೇವಂ ||138||

## ಎರೆಗವಿಭು

ಎಳೆಯೊಳ್ ಸಾದೃಕ್ಷಮಪ್ಪಂದೆಱೆಗವಿಭುಗೆ ಬಣ್ಣಿಂಗೆ ಗುಣ್ಪಿಂಗೆ ತಿಣ್ಪಿಂ |
ಗೆಳೆ ಪಾರಾವಾರಮುಂದ್ರಾಚಳಮುವಸುರಸಿಂ ರಾಮುಸಿಂ ಕೃಷ್ಣನಿಂ ಸಂ ||
ಚಳಮುಂ ವಿಶ್ಲಿಷ್ಟಗಂಭೀರಮುಮುಗುರುವುಮಾಗಿರ್ದುವಾರಯ್ಯೆ ಬೇಱೊಂ |
ದೆಳೆ ಬೇಱೊಂದಪ್ಪ ಬೇಱೊಂದಸಿಮಿಷನಗಮೆತ್ತಾನುಮುಂಟಪ್ಪೊಡಕ್ಕುಂ ||139||

ಪರಿಕಿಪೊಡೆ ಹಸ್ತಿಮಶಕಾಂ | ತರಮೆಸಿಪುದು ತನ್ನ ಗುಣದ ಸೆಗಟ್ಟಿರ ಗುಣದಂ |
ತರಮೆನೆ ಗುಣೇಷು ಕೋ ಮತ್ಸರ ಎಂಬ ಬುಧೋಕ್ತಮೆಱೆಗವಿಭುಗೆ ಸದುಕ್ತಂ||140||

ಸದಮಲಕೀರ್ತಿವಲ್ಲರಿ ದಿಶಾಂತರಮಂ ತೆಱಪಿಲ್ಲದಂತು ಪ |
ರ್ವುದುದು ಪರಾಕ್ರಮಂ ಕಳಸಮೆಟ್ಟುದು ಬಣ್ಣಿಪಮಾನಬಾಹ್ಯಮಾ ||
ದುದು ಚರಿತಂ ಶಿಖಾಪದಮನೆಯ್ದಿದುದಾರ್ಜಿನಸೂನು ಮತ್ತೆ ಪು |
ಟ್ಟಿದನೆಸಿಸಂತುಟಾಯ್ತೆಱೆಗನುನ್ನತಿಯಂ ಪೊಗೞಲಾ ಸಮರ್ಥರಾರ ||141||

## ಎರೆಗನ ತಮ್ಮ ದ್ರೋಣ

ಕಲಿತನದೊಳ್ ಕುರುಕುಲಸಂಕುಲಮಥನನ ತಮ್ಮನಸುಪಮಾನಾಕೃತಿಯೊಳ್ |
ಬಲದೇವನ ತಮ್ಮಂ ಭುಜ | ಬಲದೊಳ್ ಯಮಸುತನ ತಮ್ಮನೆಱೆಗನ ತಮ್ಮಂ ||
ಎಱಗನಡಿಮೊದಲೊಳಂನೃಪ | ರೆಱಗಿದೊಡದನಱಿಯೆನೆಱಗದಿರ .. ಬೂಡಾ |
ಗೆಱಗಿಸುಗುಂ ಗೃಧ್ರಾದಿಗ | ಳೆಱಗಲಾ ಪತಿಕಾರ್ಯಭರಧುರೀಣಂ ದ್ರೋಣಂ ||143||

ಕ್ಷೀಣಮುದಾರದೊಳ್ ಕೊಱತೆ ಸಜ್ಜನವೃತ್ತಿಯೊಳೆಗ್ಗು ಶೀಲದೊಳ್ |
ಕಾಣಲೆ ಬಾರದೆಂದೊಡೆ ಪೆಱರಾ ಸಮನಪ್ಪರೆ ಮರ್ತ್ಯಲೋಕದೊಳ್ ||
ದ್ರೋಣನೊಳಂಗನಾಕುಸುಮಬಾಣನೊಳಿಷ್ಟವಿಶಿಷ್ಟಸಂಕುಲ |
ತ್ರಾಣನೊಳಬ್ಜಸಂಭವನಮಾನಸಮಸ್ತಕಲಾಪ್ರವೀಣನೊಳ್ ||144||

## ನಯಸೇನಸೂರಿ

ಸರಸತಿಯಂ ಮನೋಮುದದೆ ತಾಳ್ದಿದನೆನ್ನನವಜ್ಞೆಗೆಯ್ದನಾ |
ಸಿರೆನವಳೆರ್ಕೆ ಚಿಃ ಸವತಿಯೊಳ್ ಪುದುವಾೞ್ದುದು ಕಷ್ಟಮೆಂದು ಸಿ ||
ಷ್ಠುರವಚನಂಗಳಂ ನುಡಿದು ದಿಕ್ಕರಿಯುಂ ಪಂಡೇಱೆ ಕೀರ್ತಿ ತಾಂ |
ಪುರುಡಿಸಿ ದೂಱಿಪಳ್ ವರತಪೋನಿಧಿಯಂ ನಯಸೇನಸೂರಿಯಂ ||145||

### ರಾಜ

ಮನುಮುನಿಮಾರ್ಗನೆಂದು ಜಿನಪೂಜೆಯೊಳಾಗನೆಂದು ದಾಸಿಯಿಂ।
ದನುಪಮತೇಜನೆಂದು ಶುಚಿಯೆಂದು ದಯಾಪರನೆಂದು ಸಿಜ್ಜಲಂ ॥
ಮನವೊಸೆದಿಕ್ಕಿಇಂ ಬಡದೆ ಬಣ್ಣಿಸುಗುಂ ಒಗನೆಯ್ದೆ ಕೂಡೆ ರಾ।
ಜನನಿನತೇಜನಂ ಪಸುಗೆಗೋಜನನಾಶ್ರಿತಕಲ್ಪಭೂಜನಂ ॥146॥

## 40 ನಗರ 40. 1037

ಇದರಲ್ಲಿ ವಿಕ್ರಮಸಾಂತರನು ತನ್ನ ತಾಯಿ ಚಟ್ಟಲದೇವಿ ಮಾಡಿಸಿದ ಪಂಚಕೂಟಬಸ್ತಿಗೆ ಗ್ರಾಮಗಳನ್ನು ಬಿಟ್ಟನೆಂದು ಹೇಳಿದೆ.

### ಚಟ್ಟಲದೇವಿ

ಜೇರಿನಹೀಂದ್ರನಂ ನಡುಮಸಾಗಸಮಂ ಕುಡಿಯಿಂ ಮಹಾಗ್ರಮಂ।
ತಾರನಗಂಗಳಂ ಕವಲ್ಗನೊಳ್ಳಿಲೆಯಿಂ ದೆಸೆಯಂ ಮುಗುಳ್ಗಳಿಂ ॥
ತಾರಕೆಯಂ ಸಿತಾಬ್ಜಮನೆ ಪುಷ್ಪದೆ ಪೋಲ್ವುದು ಪಣ್ಣಿನಿಂದುವಂ।
ನೀರೆಱೆದಂತೆ ದುಗ್ಧಮನೆ ಚಟ್ಟಲದೇವಿಯ ಸದ್ಯಶೋದ್ರುಮಂ ॥147॥

### ವಿಕ್ರಮಸಾಂತರ (ಒಡ್ಡುಗ)

ಅದಿರದೆ ಬರ್ಪ ಜಪ್ಪರಿಪ ಕಪ್ಪುರಿಪಾರ್ದಲಗೊತ್ತಿ ಶಸ್ತ್ರಮಂ।
ಬಿದಿರ್ದು ಮರಲ್ ಮರಲ್ಚಿನುತೆ ಕುತ್ತುವ ಕುತ್ತಿದೊಡಾಂತು ಕಟ್ಟಿದಾ ॥
ಪದದೊಳೆ ಸುತ್ತಿ ಮುತ್ತಿದಪ್ಪೊಲೇಱಿನೆ ತೋಱುವ ಗೇಣ ಬನ್ನಣ।
ಕ್ಕೊದವುವ ಬಿನ್ನಣಂ ನೆಗೞಿಲೊಡ್ಡುಗ ನೀನರಸಂಕಕಾಱನೈ ॥148॥

ಪರಿದುದರಾಗ್ನಿಯಂ ಮಱೆದು ತಿಂದ ಪೆಣಂಗಳಿನಾದಜೀರ್ಣದಿಂ।
ಮರುಳಬಳಾಳಿ ವೈದ್ಯಮರುಳಂ ಬೆಸಗೊಂಡೊಡೆ ದಂತಿ ಮರ್ದಿನಲಾ ॥
ಕರಿಯನೆ ನುಂಗಿ ಸೂಡುಕೊಳೆ ವೈದ್ಯಮರುಳ್ ನಗೆ ವೀರಲಕ್ಷ್ಮಿ ನೋ।
ಡುಬಹರ ನಿನ್ನಿನಾಯ್ತಿದೆನೆ ವಿಕ್ರಮಸಾಂತರನಾದನೊಡ್ಡುಗಂ ॥149॥

### ಫಲಸ್ತುತಿ

ಇದನಾಚಂದ್ರಾರ್ಕಂಬರ। ಮುದಿತೋಚಿತಮಾಗೆ ಕಾದವಂ ಪರಮಸುಖಾ।
ಸ್ಪದನಕ್ಕುಂ ಪಾಪದಿನಿಱಿ। ದ ದುರಾತ್ಮಂ ನರಕಗತಿಗೆ ಗಳಗಳನಿೞಿಗುಂ ॥150॥

## 41 ಚೆನ್ನರಾಯಪಟ್ಟಣ 148. 1093

ಇದರಲ್ಲಿ ಹೊಯ್ಸಳರಾಜನಾದ ಎರೆಯಂಗನು ಗೋಪನಂದಿಪಂಡಿತನಿಗೆ ಕೆಲವು ಗ್ರಾಮಗಳನ್ನು ಕೊಟ್ಟಂತೆ ಹೇಳಿದೆ.

### ವಿನಯಾದಿತ್ಯ

ಎರೆದ ಮನುಜಂಗೆ ಸುರಭೂ | ಮಿರುಹಂ ಶರಣೆಂದವಂಗೆ ಕುಳಿಶಾಗಾರಂ |
ಪರವನಿತೆಗನಿಳಿತನಯಂ | ಧುರದೊಳ್ ಪ್ರೊಣರ್ದಂಗೆ ಮೃತ್ಯು ವಿನಯಾದಿತ್ಯಂ ||151||

ರಕ್ಕಸಪೊಯ್ಸಳನೆಂಬಾ | ಅಕ್ಕರವಂ ಬರೆದು ಪಟಮನೆತ್ತಿದೊಡಿದಿರೊಳ್ |
ಲಕ್ಕದ ಸಮಲೆಕ್ಕದೆ ಮಱು | ವಕ್ಕಂ ನಿಂದವುವೆ ಸಮರಸಂಘಟ್ಟನದೊಳ್ ||152||

### ಎರೆಯಂಗ

ಅನುಪಮಕೀರ್ತಿ ಮೂಱನೆಯ ಮಾರುತಿ ನಾಲ್ಕನೆಯುಗ್ರವಹ್ನಿಯ |
ಯ್ದನೆಯ ಸಮುದ್ರಮಾಱನೆಯ ಪೂಗಣೆಯೇೞನೆಯುರ್ವರೇಶನೆಂ ||
ಟನೆಯ ಕುಳಾದ್ರಿಯೊಂಬತನೆಯುದ್ಧಸಮೇತ..ಹಸ್ತಿ ಪ |
ತ್ತನೆಯ ನಿಧಾನಮೂರ್ತಿಯೆನೆ ಪೋಲ್ವವರಾರೆಱೆಯಂಗದೇವನಂ ||153||

ಮುರರಿಪುವ ಪಿಡಿವ ಚಕ್ರದ | ಪರಿಗಂ ಕೇಸರಿಗಮಾಫಣಿಧ್ವಂಸಿಯ ವಿ |
ಸ್ಫುರಿತನಖಹತಿಗಮೆಱೆಗನ | ಕರವಾಳ್ಗಂ ಮಿಱೆ ಬರ್ದುಕಲಾರ್ಪರುಮೊಳರೇ ||

ಇರ್ಮಡಿ ದಧೀಚಿಮುನಿಗೆ ಪ | ದಿರ್ಮಡಿ ಗುತ್ತಂಗೆ ಚಾರುದತ್ತಂಗತ್ತಲ್ |
ನೂರ್ಮಡಿ ರವಿಸೂನುಗೆ ಸಾಸಿರ್ಮಡಿ ಪೇೞ್ ದಾನಗುಣದಿನೆಱೆಯಂಗನೃಪಂ||155||

### ಗೋಪನಂದಿಪಂಡಿತ

ಮಱೆಯದೆ ಸಾಂಖ್ಯ ಪಟ್ಟಿಮಿರು ಭೌತಿಕ ಪೊಂಗಿ ಕಡಂಗಿ ಬಾಗದಿರಾ |
ತೊಲತೊಲಗತ್ತ ಬೌದ್ಧ ತಲೆದೋಱದೆ ವೈಷ್ಣವ ನೀನಡಂಗು ವಾ ||
ಗ್ಘರದ ಪೊಡರ್ಪು ಬೇಡ ಗಡ ಚಾರ್ವಾಕ ಚಾರ್ವಾಕ ನಿಮ್ಮ ದರ್ಪಮಂ |
ಸಲಿಪನೆ ಗೋಪನಂದಿಮುನಿಪುಂಗವನೆಂಬ ಮದಾಂಧಸಿಂಧುರಂ ||156||

ತಗೆಯಲಾ ಜೈಮಿನಿ ತಿಪ್ಪಿಕೊಂಡು ಪರಿಯಲಾ ವೈಶೇಷಿಕಂ ಪೋಗದಂ |
ಡಿಗೆಯೊತ್ತಲಾ ಸುಗತಂ ಕಡಂಗಿ ಬೞಿಗೋಯಲ್ಕಕ್ಷಪಾದಂ ಪಿತ ||
ಲ್ಪುಗೆ ಲೋಕಾಯತನೆಯ್ದೆ ಸಾಂಖ್ಯನಡಸಲ್ಕಮ್ಮಮ್ಮ ಷಟ್ತರ್ಕವಾ |
ಧಿಗಳೊಳ್ ತೊಳ್ದಿತು ಗೋಪನಂದಿದಿಗಿಭಪ್ರೋದ್ಯಾಪಿಗಂಧದ್ವಿಪಂ ||157||

ಪನಸೇನನೆನಿಪ ಪೆಸಱಿಂ ಪ್ರಸನ್ನ ಸ | ನ್ಮಾನದಾನಿಯ ಗುಣವ್ರತಂಗಳಂ |
ದಾನಶಕ್ತಿಯಭಿಮಾನಶಕ್ತಿ ವಿ | ಜ್ಞಾನಶಕ್ತಿ ಸಲೆ ಗೋಪನಂದಿಯಾ ||158||

---

## 42 ಮಂಜರಾಬಾದ್ 18. 1095

ಇದರಲ್ಲಿ ಕದಂಬರಾಜನಾದ ದಯಸಿಂಹನ ತಾಯಿ ಮೋಚಲದೇವಿ ಹಾರುವಬೆಲುಹೂರಲ್ಲಿ ಕೆರೆಯನ್ನು ಕಟ್ಟಿಸಿ ದೇವಸ್ಥಾನವನ್ನು ಮಾಡಿಸಿ ಭೂಮಿಯನ್ನು ಬಿಟ್ಟಳೆಂದು ಹೇಳಿದೆ.

### ದಯಸಿಂಹ

ಶ್ರೀಮತ್ಕದಂಬವಂಶಶಿ | ಖಾಮಣಿ ದಯಸಿಂಹದೇವನನುಪಮಗುಣದ |
ದ್ಧಾಮತೆಯಂ ನೆಱೆ ಪೊಗೞ|ಲ್ಕೀಮಾತ್ರಜನಱಿಯನೆಂದೊಡಱಿದವರಳವೇ ||159||

ಧುರದೊಳ್ ಬಂದುಱಿದೊಡ್ಡಿದಂದರಿಬಳವ್ರಾತಕ್ಕೆ ಕೆಯ್ಯಾಂತು ನಿಂ |
ದೆರೆದರ್ಥಿಪ್ರಕರಕ್ಕೆ ನಾರವನಿತಾಸೀಕಕ್ಕೆ ಗಂಭೀರಸಾ ||
ಗರನಪ್ಪೀದಯಸಿಂಹನಾಂತಿಱಿಯಲೀಯಲ್ ಸಾರಿಸಲ್ ಬಲ್ಲನಾ |
ಹರಿಪುತ್ರಂ ಹರಿಪುತ್ರನಾಹರಿಸುತಂ ತಾನೆಂದೊಡೇವಣ್ಣಿಪೆಂ ||160||

ಮಿಸುಗುವ ತಾರಕಾದ್ರಿರುಚಿಯಿಂ ದುಗ್ಧಾರ್ಣವಫೇನರೋಚಿಯಿಂ |
ದೆಸೆಗಳನಾವಗಂ ಬೆಳಗುತಿರ್ಪ ಹಿಮಾಕರಬಿಂಬದಿಂ ವಿರಾ ||
ಜಿಸುವಮರೇಂದ್ರದಂತಿಯ ತನುಚ್ಛವಿಯಿಂ ಮಿಗಿಲಾಗಿ ಪರ್ವಿ ರಂ |
ಜಿಸುವುದು ಕೀರ್ತಿ ಧಾತ್ರಿಯೊಳಗುಜ್ವಳಬಿಂ ದಯಸಿಂಹಭೂಪನಾ ||161||

### ಮೋಚಲದೇವಿ

ಅತಿಚತುರೋಕ್ತಿಯೊಳೆ ಸರ|ಸ್ವತಿಗಂ ಮಿಗಿಲೆನಿಸಿ ಭುವನದೊಳ್ ಧರ್ಮಗುಣ |
ಪ್ರತತಿಗೆ ನೆಲೆಯಾಗಿ ಮಹಾ | ಸತಿ ಮೋಚಲದೇವಿ ಸಂತತಂ ಸೊಗಯಿಸುಗುಂ ||162||

---

## 43 ಶಿಕಾರಿಪುರ 114. 1096

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ದಂಡನಾಯಕ ಸರ್ವದೇವನು ಬಳ್ಳಿಗಾವೆಯಲ್ಲಿ ಸರ್ವೇಶ್ವರದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಸರ್ವದೇವನ ಸಹೋದರ ಚಾಮುಂಡರಾಯ

ಹರಿಯಿಂದಂ ಮಂದರಂ ಮಂದರಮಥನದಿನಂಭೋಧಿಯಂಭೋಧಿಯಿಂದಂ |
ಧರೆ ಬನ್ನಂಬೆತ್ತುದಾಮಂದರಗಿರಿ ಸಮಯೋ ತಿಣ್ಣಿನೊಳ್ ವಾರ್ಧಿಯೆತ್ತಂ ||
ದೊರೆಯೋ ಪೇೞಿ ಗಾಣ್ಪಿನೊಳ್ ಧಾರಿಣಿ ಸಮಸಮೆನಲ್ ಒರ್ಪುದೇಜಣ್ಪಿನೊಳ್ ಮಂ|
ದರಶೈಲಕ್ಕಂ ಸಮಕ್ಕುರ್ವರೆಗಧಿಕಗುಣಂ ನೋಡೆ ಚಾವುಂಡರಾಯಂ ||163||

### ಸರ್ವದೇವ

ಧರೆ ಕಂಪಂಗೊಳ್ಳ ಮಾಶಾಕರಿ ಪೆಡಱುಗುಮಂಭೋಜಜಂ ಬೆರ್ಚುಗುಂ ಸಾ|
ಗರಮೆತ್ತಂ ಮೇರೆಯಂ ದಾಂಟುಗುಮನುಪಮದೋಸ್ಸಾಹಸಂ ಸರ್ವದೇವಂ ||
ಧುರದೊಳ್ ಪಿಂಮೆಟ್ಟಿದಂದುಂ ಪರವನಿತೆಗೆ ಸೋಲ್ತಂದುಮಿತ್ತರ್ಥಿಗಿಲ್ಲೆಂ |
ದೆರಡಂ ಮಾತಾಡಿದಂದುಂ ಭಯವಶದೆ ಶರಣ್ಬೊಕ್ಕರಂ ಕಾಯದಂದುಂ ||164||

ನುಡಿ ಕನಕಾದ್ರಿಯೊಳ್ ಕಡಿಸಿದಕ್ಕರಮಣ್ಮು ಮದೇಭದೈಯೊಳ್ |
ಮಡಗಿದ ಬಯ್ಕೆ ದಾನಮುಮರಾವನಿಜಾತದ ಜೌವನಂ ಧನಂ ||
ಬಡವನ ಬಯ್ತ ವಸ್ತು ಕಲುಷಂ ಪ್ರಳಯಾನಳನೇೞಿಗೆಯಿಂದಮಂ |
ದೊಡೆ ಬಲಿಕರ್ಣನೆಂದಪೆ ಮಹೋನ್ನತಿಯಂ ಭುವಿ ಸರ್ವದೇವನಾ ||165||

### ಸರ್ವೇಶ್ವರದೇವಾಲಯ

ಇದು ಲೋಕೋತ್ತರಮೆಂಬಿನಂ ನೆಗೞ್ದ ಪಲ್ಲಗ್ರಾಮದೊಳ್ ಮೇರು ತಾ |
ನಿದು ಕೈಲಾಸಮಿದೆಂಬಿನಂ ಧರೆಗಮಾಕಾಶಕ್ಕಮೂಡಿಟ್ಟಸಿಂ ||
ತಿದನಂಭೋಜಜನೆಂಬಿನಂ ಜನಸುತಂ ಶ್ರೀಸರ್ವದೇವಂ ಮನೋ |
ಮುದದಿಂ ಮಾಡಿಸಿದಂ ವಿಚಿತ್ರತರಮಂ ಸರ್ವೇಶ್ವರಾವಾಸಮಂ ||166||

---

## 44 ಸಾಗರ 80. 1096

ಇವರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ತ್ರಿಭುವಮಲ್ಲಸಾಂತರನ ಪಡೆವಳ ಸಿಂಗಣನು ಕೆರೆಯನ್ನೂ ದೇವಸ್ಥಾನವನ್ನೂ ಕಟ್ಟಿಸಿದಂತೆ ಹೇಳಿದೆ.

### ಸಿಂಗಗೌಡ

ವಿದಿತಗುಣಾಢ್ಯನೆಂಬುದು ಬುಧಸ್ತುತನೆಂಬುದು ಸತ್ಯವಾಕ್ಯನೆಂ |
ಬುದು ಸುಚರಿತ್ರನೆಂಬುದು ಯಶೋಂಚಿತನೆಂಬುದು ಸುಂದರಾಂಗನೆಂ ||

ಬುದು ಮನುಮಾರ್ಗನೆಂಬುದು ದಯಾಪರನೆಂಬುದು ಶಿಷ್ಟರತ್ನನೆಂ |
ಬುದು ಪೆಱತೆಂಬುದೇಂ ನೆಗೞ್ದ ಧಾರಿಣಿಯೊಳ್ ನಲೆ ಸಿಂಗಗೌಂಡನಂ ||167||

### ಅರ್ಜುನಗೌಡ

ವಿನಯದ ಜನ್ಮಭೂಮಿಯಭಿಮಾನದ ಮಂದಿರಮಾಪಿನಬ್ಧಿ ಪೆಂ |
ಪಿನ ಕಣಿ ಶಿಷ್ಟವರ್ಗದ ತವರ್ಮನೆಯಾಶ್ರಿತಕಲ್ಪಭೂಜಮೊ ||
ಳ್ಪಿನ ಮೊದಲೂರ್ಜಿತಾಮಳಯಶೋನಿಧಿಯಿಷ್ಟನಿಧಾನಮೆಂದು ಕೂ |
ರ್ತನುನಯದಿಂದೆ ಬಣ್ಣಿಸುವುದರ್ಜುನಗೌಂಡನನೀಧರಾತಳಂ ||168||

### ಎರೆಗ

ಅರಿನರಪರರುಣಾಜಳದಿಂ | ದರಿಭಟಕರಕಮಳಮುಕುಳಿತಾಂಜಳಿಪುಟದಿಂ |
ದನವರತಾನತ್ರತೆಯಿಂ | ಕರಮೆಸೆದುದು ಪಸೆಪನೆಱೆಗನಾಹವರಂಗಂ ||169||

---

## 45 ಬೇಲೂರು 200. 1099

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಕೈಯ ಕೆಳಗೆ ಹೊಯ್ಸಳರಾಜನಾದ ತ್ರಿಭುವನಮಲ್ಲ ಹೊಯ್ಸಳದೇವನು ಗಂಗವಾಡಿಯನ್ನು ಆಳುತ್ತಿರಲು ಕೋಬಿಗೌಡನು ಕೋಬೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಮನಮೊಸೆದು ಕೋಬಿಗಾಂಕಂ | ಗನುನಯದಿಂ ಮಾಱಿಕ್ಕಿ ಮಹಿಮೆಯುಂ ಮದನಘನಾ |
ಘನಪಟಳಪವನನಗಜಾ | ನನಪೀಕ್ಷ್ಣಾಲಂ ನಟೋತ್ಕರಂ ನಿಟಿಲಾಕ್ಷಂ ||170||

---

## 46 ಶಿಕಾರಿಪುರ 311. ಸು 1100

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಸೋಮನೃಪನ ಕುಮಾರಿಯರು ಒಂದು ಜಿನಾಲಯವನ್ನು ಕಟ್ಟಿಸಿದಂತೆ ಹೇಳಿದೆ.

### ಜೂಜ

ತೊಡರೆ ತೊಡಂಕು ಮಚ್ಚರಿಸೆ ಗಂಟಲ ಸಿಲ್ಕಿದ ಗಾಳಮುರ್ಕೆ ಮಾ |
ರ್ಸಡಿದೊಡೆ ಜಿಹ್ವೆಯಂ ಪಿಡಿದು ಕೀೞ್ವ ಸೊಡರ್ಪಿನ ಪಾಶಮೆಂದೊಡೆಂ ||
ತೆಱಱುವರೆಂತು ಮಚ್ಚರಿಪರೆಂತು ಕರಂ ಕಡ ಕೆಯ್ವು ದರ್ಪಮಂ |
ನುಡಿಪಪರಲ್ಲಿ ಬಾಪ್ಪು ಮುಳಿದಂಬದ ಜೂಜನೊಳನ್ಯಭೂಭುಜರ್ ||171||

ಬಿಡದೆಡಱಿ ಸೆಣಸಿ ಜುನ್ನಂ । ನುಡಿವೀಮನ್ನೆಯರ ಬೆನ್ನ ಬಾರಂ ಮಿಡಿಯಿಂ ।
ಪೆಡತಲೆವರಮಾಳ್ಕೊತ್ತುವ । ಕಡುಗಲಿ ಶಶಿವಿಶದಕೀರ್ತಿ ಬೂಜಕುಮಾರಂ ||172||

---

## 47 ಅರಸಿಯಕೆರೆ 102 ಎ. ಸು. 1100

**ಇದರಲ್ಲಿ ಹೊಯ್ಸಳರಾಜನಾದ ಎರೆಯಂಗನ ಮಹಿಷಿ ಮಹಾದೇವಿ ಮುತ್ತನಪೊಸವೂರ ಕೆರೆಯನ್ನು ಕಟ್ಟಿಸಿದಂತೆ ಹೇಳಿದೆ.**

### ವಿನಯಾದಿತ್ಯ

ಸ್ವಸ್ತಿ ಸಮಸ್ತಮಂಡಳಿಕಮಂಡನನಾನತಭೂಪಮೌಳಿವಿ ।
ನ್ಯಸ್ತಪದಂ ಶರತ್ತುಹಿನದೀಧಿತಿಬಿಂಬವಿಡಂಬಕೀರ್ತಿಕಾಂ ॥
ತಿಸ್ತಬಕಾವಳಂಬಿತಯಶಂ ಮನುಮಾರ್ಗನನೂನದಾನಿ ಲೋ ।
ಕಸ್ತುತನೆಂಬಿನಂ ನೆಗೞ್ದನೀಧರೆಯೊಳ್ ವಿನಯಾಯ್ತಪೊಯ್ಸಳಂ ||173||

### ಎರೆಯಂಗ

ತತ್ತನಯಂ ಸಕಳಮಹೀ । ಪೋತ್ತಮನನವರತದಾನಿ ವೈರಿನೃಪಾಳೋ ।
ನ್ಮತ್ತಗಜಸಿಂಹನಬಳಾ । ಜತ್ತಕನೆಱೆಯಂಗಪೊಯ್ಸಳಂ ಭೂಪನುತಂ ||174||
ಅಣ್ಣಮೊಱೆಗೊಳಿಸಿ ಜೋಳಿಕ|ರಣ್ಣಲೆಯಂ ತಳರನುಡಿಸಿ ನನ್ನಿಗೆಯಂ ಮೂ|
ವಣ್ಣಂಬರಿಸಿದನುರ್ವರೆ । ಬಣ್ಣಿಸಲೆಱೆಯಂಗನೃಪತಿ ಚಕ್ರಿಯ ಬೆಸದಿಂ ||175||
ಆಳಾಪಮೇನೊ ಹಿಮಕು । ತ್ಕೀಳದ ಸೇತುವಿನ ನಡುವಣವನಿಪಜಯಮಂ ।
ಕೀಱಿಟ್ಟೆಱೆದನೆಱೆಗನೃ । ಪಾಳಂ ಚಾಳುಕ್ಯಚಕ್ರವರ್ತಿಯ ಬೆಸದಿಂ ||176||
ಭೋರೆನೆ ನನ್ನಿಗೆಯೆರ್ದೆಯೊಳ|ಗೋರಂತುರಿವಗ್ನಿಸಾಕ್ಷಿಯೊಳ್ ಕೆಯ್ಕೊಂಡಂ ।
ಧಾರಾಪೂರ್ವಕಮಾಗಿರೆ । ವೀರಶ್ರೀಯಂ ಪ್ರತಾಪಿ ಪೊಯ್ಸಳಭೂಪಂ ||177||

### ಎರೆಯಂಗನ ಮಹಿಷಿ ಮಹಾದೇವಿ

ಆತನ ವಧು ಪತಿಹಿತಗುಣ । ಸೀತೆ ಬುಧವ್ರಾತಕಲ್ಪವಲ್ಲರಿ ಭುವನ ।
ಖ್ಯಾತೆ ಜನವಿನುತವಿನಯಾ । ನ್ವಿತೆ ಮಹಾದೇವಿ ಲಕ್ಷ್ಮಿದೇವಿಯೆ ಜಗದೊಳ್ ||

### ಮಹಾದೇವಿಯ ಪಿತಾಮಹ ತೇಜರಾಯ

ಓಡದವರಿಲ್ಲ ಭೂಪರ್ । ಬೇಡದ ಜನಮಿಲ್ಲ ಪೊಗೞದವರಿಲ್ಲಣಮ ।
ೞ್ಕಾಡದ ಪರಧರೆಯಿಲ್ಲೆನ । ಲಾಡಂಬರಮಾಯ್ತು ತೇಜರಾಯನ ತೇಜಂ ||179||

### ತೇಜರಾಯನ ಮಗ ಪಾಂಡ್ಯ

ತತ್ಪುತ್ರನಖಿಳಗುಣಸಂ | ಪತ್ಪದನರಿರಾಜವಿಜಯಹರಣಂ ನಿಜವಂ |
ಶೋತ್ಪಲಚಂದ್ರಂ ರಿಪುಕುಳ | ಹೃತ್ಪುಟವಿಘಟನಪಟುಪ್ರಚಂಡಂ ಪಾಂಡ್ಯಂ ||180||
ಭುವನೈಕಮಲ್ಲನಂ ಭೂ | ಭುವನಮುಮುಂಗೊಳೆ ಮರಳ್ಚಿ ರಾಜ್ಯಮನಧಿಕೋ |
ತ್ಸವದಿಂ ತ್ರಿಭುವನಮಲ್ಲಂ|ಗವಯವದಿಂ ಕೊಂಡು ಕೊಟ್ಟ ಗಂಡಂ ಪಾಂಡ್ಯಂ||181||
ನೆಣದ ಬಳಂಜೆ ಕೋಳ್ಮಿದುಳ ತಿಂತಿಣಿ ಮೂಳೆಯ ತೋರವೆಟ್ಟು ಬ |
ಳ್ವೆಣಗಳಗುಂತಿ ನೆತ್ತರ ಕಡಲ್ ಪರಿವಟ್ಟೆ ಕರೋಟಿಮಾಲೆ ಸಂ ||
ದಣಿಸುವ ಭೂತಕೋಟಿಗಳಿನೊಪ್ಪಿರೆ ಪೆರ್ಚಿದರೀಂದ್ರಸಂಗರಾಂ |
ಗಣಮದು ತಾನೆ ಪೇೞದೆ ವಿರಾಜಿಪ ಪಾಂಡ್ಯನ ಗಂಡಗರ್ವಮಂ ||182||

### ಮಹಾದೇವಿಯ ಮಾತಾಮಹ ಕರ್ಕಡರಾಯ

ಸೊರ್ಕಿದ ಮದಾಂಧಭೂಪರ | ನಿಕ್ಕಡಿಸಿ ತನ್ನ ಕೀರ್ತಿಯಂ ದಿಗ್ವಧುಗಳ್ |
ತೞೆಕ್ಕೈಸುವಿನೆಗಮೆಸೆದಂ | ಕರ್ಕಡಮಾರಾಯನುದಿತವಿಜಯಾದೇಯಂ ||183||
ತೊಂಡಿನೊಳೆ ಮಲೆಮಹೀಪರ|ಮಂಡಳಮಂ ಸೂರೆಗೊಂಡು ಮಾರ್ಕೊಂಡವರಂ|
ಖಂಡಿಸಿದನಮಮ ದುಟ್ಟರ | ಗಂಡನ ಗಂಡಂಗೆ ಮಲೆವ ಮಂಡಳಮೊಳವೇ ||184||

---

## ✓48 ಶ್ರವಣಬೆಳ್ಗೊಳ 69. ಸು. 1100

ಇದರಲ್ಲಿ ಕೊಂಡಕುಂದನಿಂದ ಬಾಲಚಂದ್ರನವರೆಗೆ ಕೆಲವರು
ಜೈನಗುರುಗಳ ಪರಂಪರೆ ಹೇಳಿದೆ.

### ಗೌಳದೇವ

ಧಾರಿಣಿಯೊಳ್ ಮನಸಿಜಸಂ | ಹಾರಿಗಳಂ ನೆನೆಯಲುಗ್ರಪಾಪಂ ಕಿಡುಗುಂ |
ಸೂರಿಗಳನಮಳಗುಣಸಂ | ಧಾರಿಗಳಂ ಗೌಳದೇವಮಳಧಾರಿಗಳಂ ||185||

---

## 49 ಲಕ್ಷ್ಮೇಶ್ವರದ ಶಾಸನ

## (ಎಪಿಗ್ರಾಫಿಯಾ ಇಂಡಿಕ XVI, 31). 1102

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ (VI) ಆಳಿಕೆಯಲ್ಲಿ ಮಾಧವದಣ್ಣಾಯಕನು
ಪುರಿಗೆರೆಯ ಸೋಮೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ಮಾಧವ

ಅಭಿಮಾನಮೇರು ವಿತರಣ । ವಿಭೂಷಣಂ ಧರ್ಮಧರ್ಮರಾಜತನೂಜಂ ।
ವಿಭವೈಕದಿವಿಜರಾಜಂ । ಪ್ರಭುಮಂತ್ರೋತ್ಸಾಹಶಕ್ತಿಗುಣಸಂಪನ್ನಂ ॥186॥

ಕದನದೊಳಾಂತರಂ ತುಱಿದು ಕೊಲ್ವೆಡೆಯೊಳ್ ಲಯಕಾಲಕಾಲನೆಂ ।
ಬುದು ಬಡಪಟ್ಟು ಬೇಡಿದವರ್ಗೀವೊಡೆ ಜಂಗಮಕಲ್ಪವೃಕ್ಷಮೆಂ ॥
ಬುದು ಶರಣೆಂದು ಬಂದೆಳಸೆ ಕಾವೆಡೆಯೊಳ್ ದೃಢವಜ್ರಗೇಹಮೆಂ ।
ಬುದು ಮನದಱ್ಕಱಿಂ ವಿಬುಧಮಂಡಲಿ ಮಾಧವದಂಡನಾಥನಂ ॥187॥

ಮತ್ತಿನ ನಿರಸ್ತಗುಣರನ । ಸುತ್ತಮರಂ ಪಡೆದುದರ್ಕೆ ಧಾತ್ರಂ ಪ್ರಾಯ ।
ಕ್ಷಿತ್ತಂಗೆಯ್ದಂ ಪಡೆದು ಬು । ಧೋತ್ತಮಸಂ ಮನುಚರಿತ್ರನಂ ಮಾಧವನಂ ॥188॥

ಫಲಸ್ತುತಿ

ಇದನಾಚಂದ್ರಾರ್ಕಂಬರ । ಮುದಿತೋದಿತಮಾಗೆ ಕಾದವರ್ ಪರಮಸುಖಾ ।
ಸ್ಪದರಪ್ಪರ್ ಪಾಪದಿನಱಿ । ದ ದುರಾತ್ಮರ್ ನರಕಗತಿಗೆ ಗಳಗಳನಿೞಿವರ್ ॥189॥

---

## 50 ತೀರ್ಥಹಳ್ಳಿ 192. 1103

ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ತ್ರಿಭುವನಮಲ್ಲಸಾಂತರನು ಆನಂದೂರಲ್ಲಿ ಬಸ್ತಿಯನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ತ್ರಿಭುವನಮಲ್ಲಸಾಂತರ (ತೈಲ)

ಕನಕಾದ್ರೀಂದ್ರಕ್ಕಮಂಭೋನಿಧಿಗಮುವಸಿಗಂ ಪೆಂಪಿನೊಳ್ ಗುಣ್ಪಿನೊಳ್ ತಿ ।
ಣ್ಪಿನೊಳೆಂತುಂ ತಾನೆ ಪೋ ಪಾಸಟಿ ಸರಿ ಸಮನೆಂದಂದದಾವಂ ಸಮಸ್ಕಂ ॥
ಧನದಾವಂ ಪೋಲ್ವನಾವಂ ಪಡಿಯೆನಿಸುವವಂ ರಾಜಸರ್ವಜ್ಞನೊಳ್ ತೈ ।
ಲನೊಳರ್ಥಿಸ್ತೋಮಚಿಂತಾಮಣಿಯೊಳಖಿಳಭೂಭಾಗದೊಳ್ ನೋಱಿಪ್ಪೊಡೆಂತುಂ॥

ಅದಟನಿದಿರಾಂತ ಭೂಪರ । ನದಟಲೆದೆರೆದರ್ಥಿನಿಕರಮಂ ತಣಿಪಿ ಜಗ ।
ದ್ವಿದಿತಯಶಂ ನೆಗೞ್ದಂ ಭೂ । ಪದಿಳೀಪಂ ವೈರಿವೀರಕಾಳಂ ತೈಳಂ ॥191॥

ಚಾಗದದಗುಂತಿ ಯಾಚಕ । ರಾಗಿಸಿದುದು ಪಲಬರರಸರಂ ಪೇರದದೊಂ ।
ದೋಗಡಿಸದೇೞ್ಗೆ ವನಚರ । ರಾಗಿಸಿದುದು ಪಲಬರಹಿತರಂ ತೈಲುಗನಾ ॥192॥

---

## 51 ಷಿಕಾರಿಪುರ 131. 1104.

**ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಈಶ್ವರಯ್ಯನು ಬಳ್ಳಿಗಾವೆಯ ನಾರಸಿಂಹದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿಕ್ರಮಾದಿತ್ಯ

ಸ್ವಸ್ತಿಶ್ರೀವನಿತಾರ್ಪಿತ । ವಿಸ್ತೀರ್ಣೋರಸ್ಥಳಂ ರಿಪುವ್ರಜಮಸ್ತ ।
ನ್ಯಸ್ತಚರಣಂ ಸಮಸ್ತಜ । ನಸ್ತುತಸಿತಕೀರ್ತಿ ವಿಕ್ರಮಾದಿತ್ಯನೃಪಂ ॥193॥

ಅರಿರಾಯಜಗದಳಂ ದಿ । ಕ್ಕರಿದಂತವಿಲಗ್ನಕೀರ್ತಿ ಮೂರ್ತೀಭೂತ ।
ಸ್ಮರನೇಕಚ್ಛತ್ರೀಕೃತ । ಧರಾತಳಂ ಸೋಮವಂಶಚೂಡಾರತ್ನಂ ॥194॥

### ಗೋವಿಂದರಾಜ

ಶ್ರೀವನಿತಾಕುಚಸಂಶ್ರಿತ । ಪೀವರವಕ್ಷಸ್ಥಳಂ ಲಸದ್ಗುಣಮಣಿಮಾ ।
ಲಾವಿಲಸಿತನೇನೆಸೆದನೊ । ಗೋವಿಂದಂ ಮದವದಹಿತದನುಜಃಮುಕುಂದಂ ॥195॥

ಶರಣೆಮಗೆಂದು ಬಂದೊಡಱಿಯೆಂ ಮಱೆದಾಂಕೊಡೆ ಭಾಳದೊಳ್ ಪೊದ ।
ಱ್ದರಿವುರಿಗಣ್ಣನುಗ್ರಫಣಿಕುಂಡಲಮಂ ಕಿವಿಯೊಳ್ ಕರಾಬ್ಜದೊಳ್ ॥
ಸುರುಚಿರಶೂಲಮಂ ಮಿಱುಪ ದಾಡೆಗಳಂ ನಿಜವಕ್ತ್ರದೊಳ್ ವಿಭೀ ।
ಕರಮೆನೆ ತೋಱುಗುಂ ಸಮರರಂಗದೊಳೀ ರಣರಂಗಭೈರವಂ ॥196॥

### ಈಶ್ವರಯ್ಯ

ವಾರಾಶಿಪರಿವೃತಾಖಿಳ । ಧಾರಿಣಿಯೊಳ್ ಪೋಲ್ವೊಡಮ್ಮ ಪೋಲ್ಕೆಮ ಪುರುಷಾ ।
ಕಾರದೊಳೆ ಪುರುಷಕಾರದೊ । ಳಾರುಂ ನೆಗಱ್ದೀಶ್ವರಾರ್ಯನಂ ಪೋಲ್ತಪರೇ ॥197॥

---

## 52 ಕರುಗುದುರಿಯ ಶಾಸನ

## (ಇಂಡಿಯನ್ ಆಂಟಿಕ್ವರಿ X, 251). 1108

**ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲನ ಸಾಮಂತ ಕಾದಂಬರಾಜನಾದ 2 ನೆಯ ತೈಲಪನು ಕರುಗುದುರಿಯ ದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ತೈಲಪ

ನುಡಿ ಸತ್ಯಂ ಸಚ್ಚರಿತ್ರಂ ನಡೆ ಗುಣಮಖಿಲಾನಂದಮುದ್ವೃತ್ತಪ್ರತಾಪಂ ।
ತೊಡರ್ವಾರಾತಿಭೂಪಾಳಕಬಳನಿಜಯಶ್ರೀನಪಕ್ರೀಡೆ ಚಿತ್ತಂ ॥

ಮೃಡಪಾದಾಂಭೋಜಭಕ್ತಿಪ್ರಬಳತೆ ಶರಣಾರ್ಥಿವ್ರಜಾಧೀನಮೆಂತುಂ ।
ಪಡೆದರ್ಥಂ ಕೂಡೆ ಲೋಕೋತ್ತರವಿಶದಯಶಂ ತೈಲಭೂಪಾಲದೇವಂ ||198||

---

## 53 ಮುತ್ತಗೆಯ ಶಾಸನ

(ಎಪಿಗ್ರಾಫಿಯ ಇಂಡಿಕ XV, 27). 1110

**ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ದಂಡನಾಥ ಗೋವಿಂದರಾಜನು ಮುರ್ತಗೆಯಲ್ಲಿ ರಾಮೇಶ್ವರದೇವಸ್ಥಾನವನ್ನು ಕಟ್ಟಿಸಿ ಅದಕ್ಕೆ ಅವನೂ ಅವನ ಮಗ ವಿಷ್ಣುದೇವನೂ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ತೈಲಪ

ರಾಜಾಧಿರಾಜನಮಳಿನ । ತೇಜಂ ರಾಜವತಿಯೆನಿಸಿದೀವಸುಮತಿಯಂ ।
ಭ್ರಾಜಿಷ್ಣು ತೈಲರಾಜಂ । ರಾಜನ್ವತಿಯೆನಿಸಿದಂ ಪರಾಕ್ರಮದಿಂದಂ ||199||

ತನ್ನಾಣೆ ತನ್ನಗೋಸಣೆ । ತನ್ನಜಸಂ ತನ್ನ ಪೆಸರೆ ನೆಗಱ್ದಿಸೆವಿನೆಗಂ ।
ಮುನ್ನೀರೆ ಮೇರೆಯೆನೆ ಶೌ । ರ್ಯೋನ್ನತನಾಳ್ದಂ ಧರಿತ್ರಿಯಂ ತೈಲನೃಪಂ ||200||

### ಗೋವಿಂದ

ರಿಪುಸರ್ಪಗರುಡನಹಿತ । ದ್ವಿಪಕೇಸರಿ ಸುಭಟಜನನುತಂ ವೀರಶ್ರೀ ।
ಲಪನಾಬ್ಜದ್ಯುಮಣಿ ಪರಂ । ತಪನಸದೃಶನಸಮಸಾಹಸಂ ಗೋವಿಂದಂ ||201||

### ಫಲಸ್ತುತಿ

ಪರಮಾರ್ಥಮಿದೀಧರ್ಮಮ । ನೆರಡಿಲ್ಲದೆ ಪರಮಭಕ್ತಿಯಿಂ ಕಾವ ಮಹಾ ।
ಪುರುಷಂ ಕವಿಲೆಗಳಂ ಸಾ । ಸಿರಮಂ ಸಲೆ ದಾನಮಿತ್ತ ಫಲಮಂ ಪಡೆಗುಂ ||202||

ತಲೆ ಪೋಪೊಡಮೆತ್ತಾನುಂ । ನೆಲವಾೞ್ ಪೋಪೊಡಮೊಡರ್ಚಿದೀಧರ್ಮದೊಳೊಂ ।
ದೆಲೆಯನೊಡೆದಡಕೆಯುಂ ಬೇ । ಡಲಾಗದಿದನೞಿದ ಪಾಪಿ ಪಸುಗಳನೞಿದಂ ||203||

ತೆಱೆಯಂ ಕಿಱುದೆಱೆಯಂ ಪೊಲೆ । ದೆಱೆಯಂ ಮಾನ್ಯಕ್ಕೆ ಬಂದ ತೆಱೆಯಂ ದೇವರ್ ।
ತಿಱವೇೞ್ಕುಮೆಂಬ ಪಾತಕ।ನಱುದಿಂಗಳೊಳೞಿಗುಮವನಧೋಗತಿಗಿೞಿಗುಂ||204||

---

## ✓ 54 ಇಟ್ಟಗಿಯ ಶಾಸನ

(ಎಪಿಗ್ರಾಫಿಯಾ ಇಂಡಿಕ XIII, 41). 1112

ಇದರಲ್ಲಿ ಚಾಳುಕ್ಯರಾಜನಾದ ತ್ರಿಭುವನಮಲ್ಲವಿಕ್ರಮಾದಿತ್ಯನ ದಂಡನಾಯಕ ಮಹಾದೇವನು ಇಟ್ಟಗಿಯಲ್ಲಿ ದೇವಸ್ಥಾನಗಳನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ವಿಷ್ಣುಸ್ತುತಿ

ಶ್ರೀರಾಮಾರಮಣೀಯನೇತ್ರಶಫರಕ್ರೀಡಾಸ್ಪದಂ ಕಾಯಕಾಂ ।
ತ್ಯಾರೂಢಪ್ರಚುರಾಂಬು ಕೌಸ್ತುಭಗಭಸ್ತಿವ್ಯಕ್ತಕಿಂಜಲ್ಕವಿ ॥
ಸ್ತಾರಂ ಲೋಚನಪುಂಡರೀಕಜಠರಸ್ವರ್ಣಾಬ್ಜರಮ್ಯಂ ಸಮ ।
ಸ್ತಾರಾಧ್ಯಂ ಕಮಲಾಕರಂಬೊಲೆಸೆದಂ ಲಕ್ಷ್ಮೀಮನೋವಲ್ಲಭಂ ॥205॥

### ಚಾಳುಕ್ಯವಂಶ

ಪರವಂಶೋನ್ನತಿ ಪೋಲಲಾರ್ಕುಮೆ ತದೀಯಶ್ರೀಯನೆಂಬಂತಿರ ।
ಚ್ಚರಿಯಂ ತಾಳ್ದಿ ಮನಕ್ಕೆವಂದೆಸೆಗುಮಂತಸ್ಸಾರಮುದ್ದಾಮಬಂ ॥
ಧುರಶಾಖಂ ದೃಢಮೂಲಮೂರ್ಜಿತಫಲಂ ನಿಷ್ಕಂಪಮಗ್ರಾಗ್ರಸುಂ ।
ದರಮಚ್ಛಿದ್ರಮಕಂಟಕಂ ಭುವನದೊಳ್ ಚಾಳುಕ್ಯವಂಶೋದಯಂ ॥206॥

### ವಿಕ್ರಮಾದಿತ್ಯ

ಪೆಣೆದುಗ್ರಾಹಿತವಂಶಮಂ ತಱಿದು ಭೂಭೃದ್ವರ್ಗಮಂ ನುರ್ಗಿ ತತ್ ।
ಕ್ಷಣದಿಂ ಕಂಟಕಕೋಟಿಯಂ ಕಡಿದು ಸಪ್ತಾಂಭೋಧಿಸಂರುದ್ಧಧಾ ॥
ರಿಣಿಯಂ ದೋರ್ಬಲದಿಂದೆ ನೇರ್ಪಡಿಸಿ ಕೀರ್ತಿಶ್ರೀಗೆ ಕೇಳೀಗೃಹಾಂ ।
ಗಣಮಪ್ಪಂತಿರೆ ಮಾಡಿದಂ ಸುಭಟರಾರ್ ಚಾಳುಕ್ಯರಾಮಂಬರಂ ॥207॥

ಕಮಠಾಧೀಶನ ಬೆನ್ನೊಳಿರ್ದು ಫಣಿರಾಜೋದ್ಯತ್ಫಣಾಗ್ರಕ್ಕೆವಂ ।
ದು ಮಹೀಕಾಮಿನಿ ದಿಗ್ಗಜಪ್ರಜದ ಕುಂಭಾಗ್ರಂಗಳಂ ಮೆಟ್ಟಿ ವಿ ॥
ಕ್ರಮಚಕ್ರೇಶನುದಗ್ರಮಪ್ಪ ಭುಜಮಂ ಬಂದೇಱಿದಳ್ ರಾಗದಿಂ ।
ದಮಿದೇನುನ್ನತಮಾಯ್ತೊ ದಕ್ಷಿಣಭುಜಂ ಚಾಳುಕ್ಯಚಕ್ರೇಶನಾ ॥208॥

ಪೆಸರ ವಿಷೋರಗೇಂದ್ರನ ಫಣಾಗ್ರದೊಳಿರ್ಪ ಭಯಂ ರಸಾತಳ ।
ಕ್ಕಸುರನಪುರ್ಚು ನೂಂಕಿದ ಪರಾಭವಮಾದಿವರಾಹನೆತ್ತುವಂ ॥

ದಸುವಱಿಯೂದ ಸೇದೆ ತನಗಾಱಿದುದೆಂಬಿನಮೀಗಳಿರ್ದಪಳ್ |
ವಸುಮತಿ ವಿಕ್ರಮಾಭರಣಭೂಪನ ಭೂರಿಭುಜಪ್ರದೇಶದೊಳ್ ||209||

ಪೆಸರ್ವೆತ್ತಿರ್ದಾದಿರಾಜರ್ಕಳುಮನಿೞಿಸಿದಂ ರಾಜವಿದ್ಯಾಭುಜಂಗಂ |
ವಸುಧಾಲಕ್ಷ್ಮೀಭುಜಂಗಂ ತ್ರಿಭುವನವಿಜಯಶ್ರೀಭುಜಂಗಂ ಮಹಾಸಾ ||
ಹಸದೋರ್ಭಂಗೀಭುಜಂಗಂ ಸಹಜಮಧುರಸಂಗೀತಗೋಷ್ಠೀಭುಜಂಗಂ |
ರಸವದ್ವಾಣೀಭುಜಂಗಂ ನೃಪಗುಣನಿಳಯಂ ರಾಯವೇಶ್ಯಾಭುಜಂಗಂ ||210||

ಎಱಗದುದಗ್ರರಿಲ್ಲೊಱಿಯ ಬಾಯೊಳೆ ನೇಲದ ರಾಯರಿಲ್ಲ ಕಂ |
ಡುಱುಸೆಱಿಗೊಟ್ಟು ತೊೞ್ತುವೆಸಗೆಯ್ಯದ ಮಂಡಳನಾಥರಿಲ್ಲ ತ ||
ನ್ನಱಿಕೆಯ ವಸ್ತುವಾಹನಮನಟ್ಟದರಿಲ್ಲೆನೆ ಬಣ್ಣಿಸಲ್ಕದಾರ್ |
ನೆಱಿವರೊ ವೀರವೃತ್ತಿಯನಗುರ್ವಿನ ವಿಕ್ರಮಚಕ್ರವರ್ತಿಯಾ ||211||

ಪುದಿದು ಪೊದೞ್ದ ವಿಕ್ರಮವಿಜೃಂಭಣಮಂ ತೊಱಿದಾಳ್ವಿಸಕ್ಕೆ ಪೂ |
ಣ್ದೊದವಿದ ಭೀತಿಯಿಂದೆಱಗಲನ್ಯನೃಪಾವಳಿ ಪಾದಪೀಠದೊಳ್ ||
ಪದನಖದರ್ಪಣಂಗಳೊಳಗಾರಿಪುಭೂಪರ ರೂಪು ಚಂದ್ರಬಿಂ |
ಬದ ಮೃಗದಂತಿರಿರ್ಪುವು ನೆಗೞ್ತೆಯ ವಿಕ್ರಮಚಕ್ರವರ್ತಿಯಾ ||212||

## ಮಹಾದೇವ

ನೆಗೞ್ದಾವಿಕ್ರಮಚಕ್ರವರ್ತಿಯ ಪದಾಂಭೋಜಕ್ಕೆ ಭೃಂಗಂ ಭುಜಾ |
ಸಿಗೆ ಕೂರ್ಪಾಜ್ಞೆಗೆ ರಕ್ಕೆ ಭೂವನಿತೆಗೇಱುಂಜವ್ವನಂ ರಾಜ್ಯಲ ||
ಕ್ಷ್ಮಿಗೆ ನಿಟ್ಟೆಯ್ದೆತನಂ ಜಸಕ್ಕೆ ಪಸರಂ ತೇಜಕ್ಕೆ ಕಾಯ್ಪೀತನೆಂ |
ದೆ ಗುಣಂಗೊಳ್ವುದು ಕುಂತಳಾವನಿತಳಂ ಶ್ರೀಮನ್ಮಹಾದೇವನಂ ||213||

ಕಲಿಕಾಲೋತ್ಥಕಳಂಕಮಂ ತೆರಳೆ ನೂಂಕುತ್ತಿರ್ಪುದತ್ಯಂತನಿ |
ರ್ಮಲಧರ್ಮದ್ರುಮಕಾಲವಾಲಜಲಮಿರ್ಪಂತಿರ್ಪುದಪ್ರಾಕೃತಾ ||
ಖಿಲಮನ್ವಾದಿವಿಶಿಷ್ಟಮಾರ್ಗದೊಳೊಡಂಬಟ್ಟಿರ್ಪುದವ್ಯಾಹತಂ |
ಕಲಿಕಾಲಪ್ರತಿಪಕ್ಷಚಾರುಚರಿತಂ ಶ್ರೀಮನ್ಮಹಾದೇವನಾ ||214||

## ಇಟ್ಟಗಿ

ಇದು ಕನಕಾದ್ರಿಯಂತೆ ವಿಬುಧಾಶ್ರಯಮಿಂತಿದು ನೋಡ ಸಾಗಲೋ |
ಕದವೊಲನಂತಭೋಗಿಜನಸೇವಿತಮಿಂತಿದು ದುಗ್ಧವಾರ್ಧಿಯಂ ||
ದದೆ ಪುರುಷೋತ್ತಮಸ್ಥಿತಿಕರಂ ಧನದಾಚಳದಂದದಿಂದಮಿಂ |
ತಿದುವೆ ಮಹೇಶ್ವರಾವಸಥಮೆನ್ನದರಾರೊ ತದಗ್ರಹಾರಮಂ ||215||

ಆಡುವ ಸೋಗೆ ಪಾಡುವಳಿಗಳ್ ನಡಪಾಡುವ ಹಂಸೆ ಪಂಚಮಂ |
ಬಾಡುವ ಗಂಡುಗೋಗಿಲೆ ಕೆಲರ್ ನುಡಿದಂತುಟನಾಗಳಂತೆ ಮಾ ||
ತಾಡುವ ರಾಜಕೀರವೊಲವಱ್ಕಿಸಲಾಱದಗಲ್ದು ಪೂವಿನಂ |
ಬಾಡೆ ಲತಾವನಂಬುಗುವ ನಲ್ಲವರಲ್ಲಿಯ ನಂದನಂಗಳೊಳ್ ||216||

ಕಲಿಮಶಕಾರ್ಘಧೂಮಮೆನಿಸಿರ್ದ ನೆಗಱ್ತೆಯ ಹೋಮಧೂಮಮ |
ಗ್ಗಲಿಸಿ ನಭಂಬರಂ ಮಿಳಿರ್ದು ನಾಕನದೀಪ್ರಚುರಪ್ರವಾಹಸಂ ||
ವಲನವಿಲಾಸಯಾಮುನಜಲೋದ್ಗಮಮಂ ಮಿಗೆ ಜನ್ನವಿರ್ಪ ಭೂ |
ವಲಯವಿನೂತವಿಪ್ರವರರಿಂದೆಸೆದಿರ್ಪುದದೆತ್ತ ನೋಱ್ಪೊಡಂ ||217||

ಸಕಲವ್ಯಾಕರಣಂಗಳುಂ ವಿವಿಧವೇದಾರ್ಥಂಗಳುಂ ಮೂರ್ತಿಗೊಂ |
ಡು ಕಲಾಶಾಸ್ತ್ರಸಮೇತವೋಲಗಿಸೆ ತಮ್ಮಂ ಬ್ರಹ್ಮವಿದ್ಯಾವಿಶೇ ||
ಷಕರಮ್ಲಾನಚರಿತ್ರಪಾತ್ರರಮಲಜ್ಞಾನರ್ಧಿಸಂಪನ್ನರೀ |
ಸಕಲಕ್ಷ್ಮೋಣಿಗೆ ಪೂಜ್ಯರಿಟ್ಟಗೆಯ ನಾಲ್ನೂರ್ವರ್ ದ್ವಿಜನ್ಮೋತ್ತಮರ್ ||218||

## ಮಹಾದೇವನ ಮುತ್ತಾತ ದೇಚಿರಾಜ

ತತ್ತನಯಂ ತ್ರಯೀತ್ರಿಪಥಗಾಹಿಮವದ್ಗಿರಿ ಸಚ್ಚರಿತ್ರಸಂ |
ಪತ್ತಿಯ ಬಿತ್ತು ಧರ್ಮದ ತವರ್ಮನೆ ಕೀರ್ತಿಯ ಜನ್ಮಭೂಮಿ ಲೋ ||
ಕೋತ್ತಮನುತ್ತಮೋತ್ತಮನುದಾತ್ತಶಿಖಾಮಣಿ ದೇಚಿರಾಜವಿ |
ಪ್ರೋತ್ತಮನಾಮಹಾಪುರುಷನಂ ಪುರುಷೋತ್ತಮನೆನ್ನದಿರ್ಪರಾರ್ ||219||

## ಮಹಾದೇವನ ತಂದೆ ನಾರಾಯಣ

ಭೃತಗೋತ್ರಂ ಶಂಖಚಕ್ರೋಜ್ವಲಯಶನಪರಿಮ್ಲಾನಶಾರೀರಪದ್ಮ |
ಸ್ಥಿತಭಾಸ್ವದ್ಬ್ರಹ್ಮತೇಜಂ ವಿಬುಧಗಣನುತಂ ಸತ್ಯಭಾಮಾಭಿರಾಮಂ ||
ಸ್ಥಿತಿಸಾರಂ ಶ್ರೀಯುತಂ ವಿಪ್ರವರಪತಿ ಜಗತ್ಸೇವ್ಯನೆಂದೆಂದು ಲೋಕಂ |
ಸ್ತುತಿಗೆಯ್ಯುತ್ತಿರ್ಪ ನಾರಾಯಣನ ಮಹಿಮೆಯಂ ಬಣ್ಣಿಸಲ್ ಬಲ್ಲನಾವಂ ||220||

ಜಗಮೆಲ್ಲಂ ತನಗಾಶ್ರಿತರ್ ಪುರುಷಕಾರಂ ತನ್ನ ಮೆಯ್ ತಾನೆ ಲ |
ಕ್ಷ್ಮಿಗೆ ಮೆಯ್ಮರ್ಚನೊಡರ್ಚುತಿರ್ಪ ಪುರುಷಂ ಪುಣ್ಯಾಧಿಕರ್ ತನ್ನ ಪೋ ||
ಲ್ವೆಗೆವರ್ಪರ್ ಪೆಱರಿಲ್ಲ ಸತ್ವದುದಯಂ ಬ್ರಹ್ಮಸ್ವರೂಪಂ ಪ್ರಕಾ |
ಶಗುರುತ್ವಂ ತನಗೆಕ್ಕಲಾವಣಮೆನಿಪ್ಪಂ ಮೂರ್ತಿನಾರಾಯಣಂ ||221||

### ಮಹಾದೇವನ ತಾಯಿ ಚಂದ್ರಿಕಾದೇವಿ

ವಿಮಲಾಚಾರವಿಚಾರಚಾರುಪ್ಪವಿ ಧರಾದೇವಾಂಗನಾಕಾರಧಾ |
ತ್ರಿ ಮಹೀಲೋಕನಿಲಿಂಪನಿರ್ಮಲಕುಲಾವಿರ್ಭಾವಸಾವಿತ್ರಿ ಮೂ ||
ರ್ತಿಮದಾತ್ಮೇಶ್ವರಪುಣ್ಯಲಕ್ಷ್ಮಿ ನವನಾಮಾರುಂಧತೀದೇವಿ ನಿ |
ತ್ಯಮಹತ್ವಾಂಬಿಕೆಯೆಂದು ಬಣ್ಣಿಸದರಾರ್ ಚಂದ್ರಾಂಬಿಕಾದೇವಿಯಂ ||222||

### ಮಹಾದೇವನು ಕಟ್ಟಿಸಿದ ದೇವಸ್ಥಾನ

ಧರೆ ರಂಗಂ ಕುಲಪರ್ವತಾಳಿ ತಳಗಂಬಂಗಳ್ ದಿಶಾಭಿತ್ತಿ ಭಿ |
ತ್ತಿ ರಸಾಲಂಕೃತಚಿತ್ರಪುತ್ರಿಕೆಯರಾದಿಗ್ದೇವಿಯರ್ ದೇಗುಲಂ ||
ಗಿರಿರಾಜಂ ಕನಕಾದ್ರಿ ಪೊಂಗಳಸಮಾಗಲ್ಕಾ ಮಹಾದೇವರಾ |
ದರದಿಂದೆತ್ತಿಸಿದಂತೆ ದೇವಕುಲನೊಪ್ಪಿರ್ಕುಂ ಮಹಾದೇವನಾ ||223||
ಉದಯಾದ್ರೀಂದ್ರದೊಳರ್ಕಬಿಂಬಮುದಯಂಗೆಯ್ವಂತದಂ ದಾಂಟಲೊ |
ಲ್ಲದೆ ನಿಂದಲ್ಲಿಯ ಲೋಕಮಂ ಬೆಳಗುತಿರ್ಪಂತಿರ್ಕುಮುತ್ತುಂಗತಾ ||
ಸ್ಪದದೇವಾಯತನಾಗ್ರಹೇಮಕಲಶಂ ಶ್ರೀಮನ್ಮಹಾದೇವನ |
ಭ್ಯುದಯಶ್ರೀ ಪಿಡಿದಿರ್ಪ ಪೂರ್ಣಕಲಶಂ ತಾನಿಂತಿದೆಂಬನ್ನೆಗಂ ||224||
ಇದಪೂರ್ವಂ ಬ್ರಹ್ಮನುಂ ನಿರ್ಮಿಸಲಱಿಯನಿದಂ ಪೋಲಲಾಪಿಶ್ವಕರ್ಮಂ |
ಗಿದೆ ದಲ್ ಕರ್ಮಾಂತರಪ್ರೌಢಿಗೆ ಗುರುವೆನಿಸಲ್ ಸಾಲ್ವುದೆಂಬಂತುಟಂ ನೋ ||
ಡಿದರಾಶ್ಚರ್ಯಂಬಡಲ್ ಮಾಡಿದನಿದನೆ ವಲಂ ದೇವದೇವಂಗಿರಲ್ ತ |
ಕ್ಕುದೆನಿಪ್ಪುತ್ತುಂಗದೇವಾಲಯಮನೆಸೆದಿರಲ್ ದಂಡನಾಥತ್ರಿಣೇತ್ರಂ ||225||
ಸಕಲಕಲಾಸರಸ್ವತಿಗೆ ವಾಙ್ಮಯಮೂರ್ತಿಗೆ ವೇದಮೂರ್ತಿಗ |
ಪ್ರಕಟನಮಂತ್ರಮೂರ್ತಿಗಮಲಾಕ್ಷರಮೂರ್ತಿಗಿರಲ್ಕೆ ಭಕ್ತಿಯಿಂ ||
ಸಕಲಕಲಾಸರಸ್ವತಿಯೆ ಮಾಡಿಸಿದಂ ಮಠಮಂ ಸಮಸ್ತಶಾ |
ಬ್ದಿಕಕವಿತಾರ್ಕಿಕಾಗಮಿಕವೈದಿಕಸಾಕ್ಷರಸಜ್ಜನಾಶ್ರಯಂ ||226||

---

### ✓55 ಶಿವಮೊಗ್ಗ 97. 1112

**ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಭುಜಬಳಗಂಗನ ಹೆಂಡತಿ ಬಾಚಲದೇವಿ ಬನ್ನಿಕೆರೆಯಲ್ಲಿ ಜಿನಗೃಹವನ್ನು ಮಾಡಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

**ಬಾಚಲದೇವಿ**

ಶ್ರೀವಧು ಜಯವಧು ಕೀರ್ತಿ । ಶ್ರೀವಧು ವಾಗ್ವಧುವೆನಿಪ್ಪ ವಧು ಗಂಗನೃಪಂ ।
ಗೀವಧುವೆನಿಸಿದ ಬಾಚಲ । ದೇವಿಯೊಳೆಣೆಯೆನ್ನೆ ನುಱಿದ ನೃಪವನಿತೆಯರಂ ||227||

**ಫಲಸ್ತುತಿ**

ಧರೆ ಪುಸಿಪೋಗದೆ ಬೆಳಗೀ । ಧರೆಯಂ ಭುಜಬಳದಿನಾಳ್ಗೆ ಭುಜಬಳಗಂಗಂ ।
ಪರೆದಿರ್ಕೆ ಜೈನಧರ್ಮಂ । ಧರೆಯೊಳ್ ಚಂದ್ರಾರ್ಕತಾರಮುಳ್ಳನ್ನೆವರಂ ||228||

ಸಕಳೋರ್ವೀಸ್ತುತಮಪ್ಪ ಧರ್ಮಮನಿದಂ ಕಾದಂ ಚಿರೈಶ್ವರ್ಯಭು(ಭಾ)ಗಂ ।
ಭುಕನಕ್ಕುಂ ವಿಪರೀತದಿಂ ನಡೆದವಂಗಾಗಂಗೆಯಾವಾರಣಾ ॥
ಸಿಕುರುಕ್ಷೇತ್ರದೊಳೆಯ್ದೆ ಗೋದ್ವಿಜಮುನಿಸ್ತ್ರೀಯರ್ಕಳಂ ಕೊಂದ ಪಾ ।
ತಕಮಕ್ಕುಂ ಬಿಡದಿರ್ಕುಮಾಪುರುಷನೆಂತುಂ ರೌರವಸ್ಥಾನಮಂ ||229||

ಶಾಸನಮಿದಾವುದೆಲ್ಲಿಯು । ಶಾಸನಮಾರಿತ್ತರೇಕೆ ಸಲಿಸುವೆನಾನೀ ।
ಶಾಸನಮನೆಂಬ ಪಾತಕ । ನಾಸಕಳಂ ರೌರವಕ್ಕೆ ಗಳಗಳನಿೞಿಗುಂ ||230||

---

## 56 ಶ್ರವಣಬೆಳ್ಗೊಳ 126. 1113

**ಇದರಲ್ಲಿ ಗಂಗರಾಜನ ಹೆಂಡತಿ ಲಕ್ಷ್ಮಿ ತನ್ನ ಸಹೋದರನಾದ ಬೂಚಣನು ಸಾಯಲು ಅವನಿಗೆ ನಿಸಿದಿಗೆಯನ್ನು ನಿಲ್ಲಿಸಿದಂತೆ ಹೇಳಿದೆ.**

**ಬೂಚಣ**

ವಿನಯದ ಸೀಮೆ ಸತ್ಯದ ತವರ್ಮನೆ ಶೌಚದ ಜನ್ಮಭೂಮಿಯೆಂ ।
ದನವರತಂ ಪೊಗೞ್ವುದು ಜನಂ ವಿಬುಧೋತ್ಕರಕೈರವಪ್ರಬೋ ॥
ಧನಹಿಮರೋಚಿಯಂ ನೆಗೞ್ದ ಬೂಚಿಯನುದ್ಧಪರಾರ್ಥಸದ್ಗುಣಾ ।
ಭಿನವದಧೀಚಿಯಂ ಸುಭಟಭೀಕರವಿಕ್ರಮಸವ್ಯಸಾಚಿಯಂ ||231||

ಧರೆ ಲಘುವಾಯ್ತು ವಿಶ್ರುತವಿನೇಯನಿಕಾಯಮನಾಥಮಾಯ್ತು ವಾ ।
ಕ್ತರುಣಿಯುಮಾಗಳೀಜಗದೊಳಾರ್ಗಮನಾದರಣೀಯೆಯಾದಳೆಂ ॥
ದಿರದೆ ವಿಷಾದಮಾದಮೊದವುತ್ತಿರೆ ಭವ್ಯಜನಾಂತರಂಗದೊಳ್ ।
ನಿರುಪಮನೆಯ್ದಿದಂ ನೆಗೞ್ದ ಬೂಚಿಯಣಂ ದಿವಿಜೇಂದ್ರಲೋಕಮಂ ||232||

## 57 ಶಿಕಾರಿಪುರ 137. 1114

**ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ದಂಡನಾಯಕ ಗೋವಿಂದರಾಜನು ಬಳ್ಳಿಗಾವೆಯಲ್ಲಿ ಅಭಿಷೇಕಯುನಮೂರ್ತಿಯನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆಯೂ 25 ಬ್ರಾಹ್ಮಣರಿಗೆ ವೃತ್ತಿಗಳನ್ನು ಕೊಟ್ಟಂತೆಯೂ ಹೇಳಿದೆ.**

### ತೈಲಪ

ವಾರ್ಧಿಯೆ ಸೀಮೆ ತನ್ನ ಭುಜಗರ್ವದಿನಾರ್ಜಿಸಿದುರ್ವಿಗಿಂದುಸಂ |
ಸ್ಪರ್ಧೆಯಿನುರ್ವಿ ಪರ್ವಿದ ಜಸಕ್ಕೆ ದಿಗಂತಮೆ ಸೀಮೆಯೆಂಬಿನಂ ||
ದುರ್ಧರಬಾಹುವೀರ್ಯನೆಳೆಯಂ ಬಗೆಗೊಂಡು ಚಳುಕ್ಯರಾಜ್ಯಸಂ |
ವರ್ಧನನಾಳ್ದನುತ್ಪಲಶಿರಃಕಮಲಾರ್ಜಿತಚಂಡಿಕಾಪದಂ ||233||

ಹೃತ್ಕೀಲನರಾತಿಗೆ ಕುಲ | ಕುತ್ಕೀಲಂ ಪೆರ್ಮೆಗೆನಿಸಿ ನೆಗಳ್ದಂ ರಾರಾ |
ಜತ್ಕೀರ್ತ್ಯಮರಧುನೀಹಿಮ | ವತ್ಕುತ್ಕೀಲಂ ಪ್ರತಾಪಶೈಲಂ ತೈಲಂ ||234||

### ವಿಕ್ರಮಾದಿತ್ಯ V

ವಿಕ್ರಮನೂರ್ಜಿತನಿಜಭುಜ | ವಿಕ್ರಮನಾಳ್ದಂ ಧರಿತ್ರಿಯಂ ತತ್ತನುಜಂ |
ಶಕ್ರನಿವನೆನಿಸಿ ನೆತಪರ | ಚಕ್ರಂ ದಿಕ್ಚಕ್ರವರ್ತಿತೇಜಶ್ಚಕ್ರಂ ||235||

### ವಿಕ್ರಮಾದಿತ್ಯ VI (ತ್ರಿಭುವನಮಲ್ಲ)

ಗತವೇಳಂ ಚೋಳನುತ್ಪಲ್ಲವಕಲಿತಕರಂ ಪಲ್ಲವಂ ಸಂಭ್ರಮಾನ್ವೇ |
ಷಿತಭೂಭೃದ್ರಂಧ್ರನಂಧ್ರಂ ಕ್ವಥಿತಪೃಥುಳಪ್ರಚ್ಛಾಂಗಳಿಂ ಸಿಂಗಳಂ ಲಂ ||
ಘಿತಮಾಳಂ ಮಾಳವಂ ಜರ್ಜರಭುಜಕುಥರಂ ಗುರ್ಜರಂ ಬಟ್ಟನೇ ಸಂ |
ತತಮಾತ್ಮೀಯಪ್ರತಾಪೋನ್ನತಿಯಿನೆನಿಸಿದಂ ವಿಕ್ರಮಾದಿತ್ಯದೇವಂ ||236||

ಭೂರಿಭುಜೋದ್ಧುರತರತರ|ವಾರಿಯ ವಾರಿಯೊಳೊಱಲ್ದು ನೀರ್ಮಾನಸವೋಲ್|
ವೀರಶ್ರೀ ನೆಲಸಿರ್ಪಳ | ನಾರತಮನಪಾಯೆ ರಾಯಕೋಳಾಹಳನಾ ||237||

### ಅನಂತಪಾಳ ದಂಡನಾಥ

ಅವಸರಮಾಗೆ ಪಾರ್ದು ಕಿವಿವರ್ಚುವ ಸಂಗರಮಾಗೆ ನೋಡಿ ಬೆ |
ಚ್ಚುವ ಪತಿಯರ್ಥಮಂ ಕಳಲೊಡರ್ಚುವ ಮತ್ತಿನ ದಂಡನಾಯಕರ್ ||
ಸವನೆ ವಿರೋಧಿಯುಟ್ಟಿಗಳನುರ್ಚುವ ಲಕ್ಷ್ಮಿಯನಾಳ್ದವಂಗೆ ಸಾ |
ರ್ಚುವ ನೆಲನಂ ಪಯೋಧಿವರಮೆಯ್ದೆ ನಿಮಿರ್ಚುವನಂತಪಾಳನೊಳ್ ||238||

### ಗೋವಿಂದರಾಜ

ಕಮಳಪ್ರೋದ್ಭವವಂಶಸಂಭವರೊಳೆಲ್ಲಂ ಸಂದ ತನ್ನಾರ್ಪು ತ |
ನ್ನ ಮಹತ್ವಂ ನೆಗಱ್ದ ತನ್ನಱಿವು ತನ್ನಾಜ್ಞಾಫಳಂ ತನ್ನ ಕೀ ||
ರ್ತಿ ಮಹೀಚಕ್ರಮನೆಲ್ಲಮಂ ಬೆಳಗೆ ದಂಡಾಧೀಶರತ್ನಂ ಚಳು |
ಕ್ಯಮಹೀನಾಥಭುಜಾಸಿದಂಡಮೆನಿಪಂ ಗೋವಿಂದದಂಡಾಧಿಪಂ ||239||

ಎನಗಿಂ ಸ್ವೇಚ್ಛಾವಿಹಾರವ್ಯತಿಕರಮೊಗೆದತ್ತೇಕೆ ಗೋವಿಂದದಂಡೇ |
ಶನ ಚಿತ್ತಂ ದೃಪ್ತಸಾಪತ್ನಿಕಬಳದಳನೋದ್ರೇಕದೊಳ್ ತಳ್ತುದಿನ್ನಾ ||
ತನೊಳಾಂತುಗ್ರಾರಿವೀರವ್ಯತಿಕರಗತಿ ಮದ್ಬಿಂಬಸಂಭೇದನಂ ಕೆ |
ಮ್ಮನೆ ತಾನಿಂ ಪೋಗದೆಂದುದ್ಭಯದೆ ತಪನನಿಂದಾದನುತ್ತಪ್ತದೇಹಂ ||240||

ದಿಗ್ದಾಹಂ ವೈರಿನಿರ್ಹಾಶನಮೊದವಿದುದಲ್ತುಲ್ತುದಗ್ರಕ್ರುಧುಗ್ರಂ |
ದಿಗ್ದಂತಿವ್ರಾತನೇತ್ರಾರುಣರುಚಿ ದೆಸೆಯಂ ಪರ್ವಿತಲ್ತುಲ್ತಿದುದ್ಯ ||
ದ್ದಿಗ್ದೇವೀಕುಂಕುಮಸ್ಥಾಸಕಮೆನಲುರಿಗಳ್ ಸುಟ್ಟನುಚ್ಚಿಷ್ಟರೋಷ |
ಪ್ರಾಗ್ದೇಶಂ ಶತ್ರುದೇಶಂಗಳನತುಳಬಳಭ್ರಾಜಿ ಗೋವಿಂದರಾಜಂ ||241||

ತೊಳಗುವ ರನ್ನದ ಸೊಡರ್ವೊಲ್ | ಬೆಳಗಿದಪಂ ವಿಕ್ರಮಾಂಕನೃಪನರಮನೆಯೊಳ್ |
ತೊಳೆದಿತರಜಮೂಪತಮೋ | ಮಳಮಂ ಗೋವಿಂದರಾಜದಂಡಾಧೀಶಂ ||242||

ರಾಯುರ್ಝುಳಪ್ಪನ ಭುಜಕೌ | ಕ್ಷೇಯಕಮೆನಿಪಳವನಾಂತ ಗೋವಿಂದಚಮೂ |
ನಾಯಕನೊಳ್ ಸೆಣಸುವವಂ | ನಾಯಕದೊಳ್ ಸೆಣಸುವೊಡೆದ ಕಾಒಂ ಪೋಲ್ಕುಂ ||

ಎತ್ತಣ ಪರಮಂಡಲಮುಂ | ಮುತ್ತಿಂಗೊಳಗಾಗಿ ದಾರದಂತಿರ್ಪುವು ಕಾ |
ಯ್ದೆತ್ತಲೊಡಮಮಿದೇನು | ದ್ವೃತ್ತನೊ ರಣರಂಗಭೈರವಂ ಗೋವಿಂದಂ ||244||

---

## 58 ಶ್ರವಣಬೆಳ್ಗೊಳ 127. 1115

ಇದರಲ್ಲಿ ಮೇಘಚಂದ್ರತ್ರೈವಿದ್ಯನು ಸಾಯಲು ಗಂಗರಾಜನೂ ಅವನ ಹೆಂಡತಿ ಲಕ್ಷ್ಮಿಯೂ ನಿಸಿದಿಗೆಯನ್ನು ನಿಲ್ಲಿಸಿದಂತೆ ಹೇಳಿದೆ.

### ಮೇಘಚಂದ್ರ

ಮುನಿನಾಥಂ ದಶಧರ್ಮಧಾರಿ ದೃಢಷಟ್ತ್ರಿಂಶದ್ಗುಣಂ ದಿವ್ಯಬಾ |
ಣಸಿಧಾನಂ ನಿನಗಿಕ್ಸುಚಾಪಮಳಿನೀಜ್ಯಾಸೂತ್ರಮೋಟೊಂದೆ ಪೂ ||

ವಿನ ಬಾಣಂಗಳುಮಯ್ದೆ ಹೀನನಧಿಕಂಗಾಕ್ಷೇಪಮಂ ಮಾಳ್ಪುದಾ |
ವ ನಯಂ ದರ್ಪಕ ಮೇಘಚಂದ್ರಮುನಿಯೊಳ್ ಮಾಣ್ ನಿನ್ನ ದೋರ್ದರ್ಪಮಂ|| [1]

ಶ್ರವಣೀಯಂ ಶಬ್ದವಿದ್ಯಾಪರಿಣತಿ ಮಹನೀಯಂ ಮಹಾತರ್ಕವಿದ್ಯಾ |
ಪ್ರವಣತ್ವಂ ಶ್ಲಾಘನೀಯಂ ಜಿನನಿಗದಿತಸಂಶುದ್ಧಸಿದ್ಧಾಂತವಿದ್ಯಾ ||
ಪ್ರವಣಪ್ರಾಗಲ್ಭ್ಯಮೆಂದೆಂದುಪಚಿತಪುಳಕಂ ಕೀರ್ತಿಸಲ್ ಕೂರ್ತು ವಿದ್ವ |
ನ್ನಿವಹಂ ತ್ರೈವಿದ್ಯನಾಮಪ್ರವಿದಿತನೆಸೆದಂ ಮೇಘಚಂದ್ರವ್ರತೀಂದ್ರಂ ||246||

ಕ್ಷಮೆಗೀಗಳ್ ಜವ್ವನಂ ತೀವಿದುದತುಳತಪಶ್ರೀಗೆ ಲಾವಣ್ಯಮಾಗಳ್ |
ಸಮಸಂದಿರ್ದತ್ತು ತನ್ನಿಂ ಶ್ರುತವಧುಗಧಿಕಪ್ರೌಢಿಯಾಯ್ತಾಗಳೆಂದಂ ||
ದೆ ಮಹಾವಿಖ್ಯಾತಿಯಂ ತಾಳ್ದಿದನಮಳಚರಿತ್ರೋತ್ತಮಂ ಭವ್ಯಚೇತೋ |
ರಮಣಂ ತ್ರೈವಿದ್ಯವಿದ್ಯೋದಿತವಿಶದಯಶಂ ಮೇಘಚಂದ್ರವ್ರತೀಂದ್ರಂ ||247||

ಇದು ಹಂಸೀಬೃಂದಮಾಂಟಲ್ ಬಗೆದಪುದು ಚಕೋರೀಚಯಂ ಚಂಚುವಿಂದಂ |
ಕರ್ದುಕಲ್ ಸಾರ್ದಪ್ಪುದೀಶಂ ಮುಡಿಯೊಳಿರಿಸಲೆಂದಿರ್ದಪಂ ಸಜ್ಜಿಗೇಱಲ್ ||
ಪದೆದಪ್ಪಂ ಕೃಷ್ಣನೆಂಬಂತೆಸೆದು ಬಿಸಲಸತ್ಕಂದಳೀಕಂದಕಾಂತಂ |
ಪುದಿದತ್ತೀಮೇಘಚಂದ್ರವ್ರತಿತಿಳಕಜಗದ್ವರ್ತಿಕೀರ್ತಿಪ್ರಕಾಶಂ ||248||

**ಗಂಗರಾಜ**

ಮತ್ತಿನ ಮಾತವತ್ತಿರಲಿ ಜೀರ್ಣಜಿನಾಲಯಕೋಟಿಯಂ ಕ್ರಮಂ |
ಬೆತ್ತಿರೆ ಮುನ್ನಿನಂತಿರನಿತೂರ್ಗಳೊಳಂ ನೆಱೆ ಮಾಡಿಸುತ್ತುಮ ||
ತ್ಯುತ್ತಮಪಾತ್ರದಾನದೊದವಂ ಮೆಱೆಯುತ್ತಿರೆ ಗಂಗವಾಡಿ ತೊಂ |
ಬತ್ತಱುಸಾಸಿರಂ ಕೊಪಣಮಾದುದು ಗಂಗಣದಂಡನಾಥನಿಂ ||249||

**ಲಕ್ಷ್ಮಿ**

ಶೋಭೆಯನೇಂ ಕೆಯ್ಕೊಂಡುದೊ|ಸೌಭಾಗ್ಯದ ಕಣಿಯೆನಿಪ್ಪ ಲಕ್ಷ್ಮೀಮತಿಯಿಂ|
ದೀಭುವನತಳದೊಳಾಹಾ | ರಾಭಯಭೈಷಜ್ಯಶಾಸ್ತ್ರದಾನವಿಧಾನಂ ||250||

---

## 59 ಶಿವಮೊಗ್ಗ 57. 1115

**ಇದರಲ್ಲಿ ಗಂಗರಾಜನಾದ ನನ್ನಿಯ ಗಂಗ ಪೆರ್ಮಾಡಿಯ ಆಳಿಕೆಯಲ್ಲಿ ಬರ್ಮಿಸೆಟ್ಟಿ ಬಸದಿಗಾಗಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

---

1. ಪಂಪರಾಮಾಯಣ I, 20.

### ಬರ್ಮದೇವ

ಭರದಿಂದಾಂತದಟಱಿಗಂ | ಶರಣೆಂದ ನೃಪಂಗಮೆರೆದು ಬಂದ ನರಂಗಂ |
ಸುರಗಿರಿ ವಜ್ರಾಗಾರಂ | ಸುರಭೂಜಂ ಬರ್ಮದೇವನದಟರ ದೇವಂ ||251||

### ರಕ್ಕಸಗಂಗ

ಸ್ಥಿರನೇ ಮೇರುಗಿರೀಂದ್ರನೊಳ್ ಸಾಸುವಂ ಗಂಭೀರನೇ ವಾರ್ಧಿಯೊಳ್ |
ಪುರುಡಿಪ್ಪಂ ಕಲಿಯೇ ಸುರೇಂದ್ರಸುತನಂ ಮೆಚ್ಚಂ ಮಹಾದಾನಿಯೇ ||
ಸುರಭೂಜಕ್ಕೊರೆಗೆಟ್ಟುವಂ ಚದುರನೇ ಪಾಂಚಾಳನಂ ಗೆಲ್ವನಂ |
ದಿರದೀಧಾಲಿಣಿ ಬಣ್ಣಿಕುಂ ರಣಜಯಪ್ರೋತ್ತುಂಗನಂ ಗಂಗನಂ ||252||

ನುಡಿದುದೆ ಸನ್ನಿ ಮಾಡಿದುದೆ ಶಾಸನಮಿತ್ತುದೆ ರಾಮರೇಸು ಮಾ |
ಪಿರ್ಡಿದುದೆ ವೆಚ್ಚ್ರತೇಪಮುಱದಿರ್ದುದೆ ವೃತ್ಯ್ಯ ಪರೋಪಕಾರದೊಳ್ ||
ನಡೆದುದೆ ಬಟ್ಟೆ ಸದ್ಗುಣಮೆ ಮೆಯ್ಯೆನೆ ನಿನ್ನವೊಲಿಂತು ನೀತಿಯೊಳ್ |
ನಡೆವ ನೃಪೇಂದ್ರನಾವನಖಿಲಾವನಿಯೊಳ್ ಕಲಿಗಂಗಭೂಪತೀ ||253||

### ಗುಣನಂದಿ

ಗುಣಿಯೆನೆ ಜಿನಮತಶಕ್ತಾ | ಮಣಿಯೆನೆ ಕವಿಗಮಕಿವಾದಿವಾಗ್ಮಿಪ್ರಪರಾ |
ಗ್ರಣಿಯೆನೆ ಪಂಡಿತಚೂಡಾ|ಮಣಿಯೆನೆ ಗುಣನಂದಿದೇವರೆಸೆದರ್ ಧರೆಯೊಳ್ ||254||

### ಗುಣಚಂದ್ರ

ಅಳವೇ ಪೇೞ್ ನುಡಿಯಲ್ಕೆ ನಿನ್ನ ಬಿರುದಂ ಮಾಣ್ ಮಾಣೆಲೇ ಸಾಂಖ್ಯ ವಾ |
ಗ್ಬಳಮಂ ನಚ್ಚದೆ ನೀನಡಂಗೆಱದಿರ್ ಚಾರ್ವಾಕ ನೈಯಾಯಿಕಾ ||
ಮಲೆಯಲ್ಬೇಡಿರು ಮಟ್ಟಮೇಕೆ ಚಲದಿಂದೀಬಂದಪಂ ಕೆಮ್ಮನಂ |
ಡಲೆಯಲ್ ಶ್ರೀಗುಣಚಂದ್ರದೇವನಮಳಂ ವಾದೀಭಕಂಠೀರವಂ ||255||

---

## ✓ 60 ಬೇಲೂರು 58. 1117

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ಬೇಲೂರಲ್ಲಿ ಚೆನ್ನಕೇಶವದೇವಸ್ಥಾನವನ್ನು ಕಟ್ಟಿಸಿ ದೇವರನ್ನು ಪ್ರತಿಷ್ಠೆಮಾಡಿ ಗ್ರಾಮಗಳನ್ನು ಬಿಟ್ಟಂತೆ ಹೇಳಿದೆ

### ಎರೆಯಂಗ

ಪೊಗೆ ಪೊಕ್ಕಾಶಾಧಿಪರ್ ಕಣ್ಗಳನೊಱಸುವಿನಂ ದಿಗ್ಗಜಾಪಾಂಡುದಂತಂ |
ಪೊಗೆ ಸುತ್ತಲ್ ಕಗ್ಗಿಕೊಂಡಿರ್ಪಿನಮಪಘನಮಾಗಿರ್ದ ಧೋಧೋಂಪದಾಳಂ ||

ಪೊಗೆಯಿಂದಂ ಮೇಘಬೃಂದಾನ್ವಿತಮೆನಿಸುವಿನಂ ತೀವ್ರತೇಜೋನಳಂ ಕೆ |
ಯ್ಮೆಗುವನ್ನಂ ಪೊಯ್ಸಳಂ ಭೋಜನ ಕುಱುಪಿನ ದುರ್ಗಂಗಳಂ ಕೂಡೆ ಸುಟ್ಟಂ||256||
ನಿಜಸೇನಾಧೂಳಿಯಿಂ ಚೌಕದ ಕಿಳಿಗಿಳದಾ ಬೆಟ್ಟುಗಳ್ ಕೂಡೆ ಮೇಘ |
ವ್ರಜದಿಂ ಪೂಱ್ದುರ್ಗವೆಂಬಂತಿರೆ ನಡೆದುದಟಿಂ ಕೊಂಡಪಂ ಸುಟ್ಟು ಧೂಮ ||
ಧ್ವಜಮಂ ಭೋಜಪ್ರಣಾಶೋದಯಮನೊದವಿಸಲ್ ಪೊಯ್ಸಳಂ ಚಕ್ರಿ ಜೈತ್ರ |
ಧ್ವಜಮಂ ರಾಗೋತ್ಕಟಂ ಕಟ್ಟಿದನೆನೆ ಪೆಱರಾರ್ ವೀರಧಾಧೀಶನಿಂದಂ ||257||
ಕರೆವಿಡಿದು ಬಳೆಯುವಟ್ಟಣ | ಮುರಿವುದುಮೆಱೆಗಂಗನೃಪನ ಕೋಪಾನಳನಿಂ ||
ಸ್ಮರಿಯಿಸಿದುದು ರಾಮಶರ | ಸ್ಫುರಿತಾಗ್ನಿಯನಬ್ಧಿವೀಚಿನಿಚಯಪ್ರಾಚಕಿತಂ ||258||
ಇನನೊರ್ವಂ ಪೋಱಿಗಾಗೆ ಪೇೞ್ ಪುದುವೆ ತೇಜಂ ಕ್ಷತ್ರಿಯಂಗರ್ಕನಂ |
ದನನೊರ್ವಂ ಪೋಱಿಗಾಗೆ ಪೇೞ್ ಪುದುವೆ ದಾನಂ ಭೂಭುಜಂಗಬ್ಜಗ ||
ರ್ಭನುಮೊರ್ವಂ ಪೋಱಿಗಾಗೆ ಪೇೞ್ ಪುದುವೆ ಚಾತುರ್ಯಂ ನೃಪಂಗೆಂದು ಮೆ |
ಚ್ಚನಿವಂ ಮತ್ತಿನ ಭೂಪರಂ ನೃಪವರಂ ಶ್ರೀರೂಪನಾರಾಯಣಂ ||259||

**ಎರೆಯಂಗನ ಹೆಂಡತಿ ಏಚಲೆ**

ಆ ನರಪತಿಗಂಭೋಧಿಗ | ನೂನಗಭೀರತೆಯೆ ಸಮನಿಸಿರ್ಪಂತಿರೆ ಸ |
ನ್ಮಾನಿನಿಯೇಚಲದೇವಿ ಮ | ನೋನಯನಪ್ರೀತಿ ಸಮನಿಸಲ್ ಸಮನಿಸಿದಳ್ ||260||
ಪೊಗಸಿರಿ ಲಕ್ಷ್ಮಿಗೆ ವಾಗ್ದೇ | ವಿಗೆ ಬುದ್ಧಿ ನಿಜೇಶ್ವರಂಗೆ ಹಿತಸಿದ್ಧಿಯೆನಲ್ |
ಸೊಗಯಿಸಿರೆ ರೂಪು ಮತಿಕಾ | ರ್ಯಗತಿ ಬೆಡಂಗಮರ್ದುದಾಮಹಾಸತಿಗೆಂತುಂ||261||

**ವಿಷ್ಣುವರ್ಧನ**

ಪಿಂಗದೆ ತೋಳೊಳ್ ಕೊರ್ವಿ ಮ | ಲಂಗಿರೆ ಜಯಲಕ್ಷ್ಮಿ ಲಕ್ಷ್ಮಿ ವರ್ಧಿಸೆ ಸುಟ್ಟಂ |
ಗಂಗರ ಕುಱುಪಿನ ಪುರಮಂ | ತುಂಗಬಳಂ ವಿಷ್ಣುವೆಂಬ ಭುಜಬಳಗಂಗಂ ||262||
ಎಲೆ ಕಾವೇರಿಯ ವಾರಿ ಕೂಡೆ ಪೊಲಸಾದತ್ತೆಂದು ಪೇವೈಸುತುಂ |
ಕೆಲದೊಳ್ ಕೂಪಜಳಾಶಿಯುಕ್ಕಿನೆಗಮಾರಾಜೇಂದ್ರಚೋಳಂ ಭುಜಾ ||
ಬಲದಿಂ ವಿಷ್ಣು ತದೀಯಸೇನೆಯ ಪೆಣಂಗಳ್ ತನ್ನದೀಪೂರದೊಳ್ |
ಕಲಸಲ್ ವಿಕ್ರಮಕೇಳಿಯಂ ಮೆಱೆದನಶ್ಯಗ್ರಪ್ರತಾಪೋದಯಂ ||263||
ಶರಣೆನ್ನೆನ್ನೀಶನಂ ವಾರಿಧಿಯೊಳಕಟ ಮೈನಾಕ ನೀರ್ವಕ್ಕಿವೋಲ್ ಪೊ |
ಕ್ಕಿರವೇಡಾ ವಜ್ರಿಗಿನ್ನಂಜದಿರಧಿಕಬಳಂ ಕಾದಪಂ ನಿನ್ನನೆಂದಾ ||

ದರದಿಂ ಭೀತಾದ್ರಿಯಂ ತನ್ನಯ ವಿಮಳಯಶೋಲಕ್ಷ್ಮಿ ಕಾರುಣ್ಯದಿಂದಂ ।
ಕರೆವಂತಂಭೋಧಿಯಂ ಪೊರ್ದಿರೆ ಸೊಗಯಿಸಿದಂ ಜಿಷ್ಣು ವಿಷ್ಣುಕ್ಷಿತೀಶಂ ||264||

ಶರಣೆಂಗಾಚಂದ್ರನಿಂ ಚಂದನದಿನತಿಶಯಂ ಶೀತಳಂ ನಿರ್ಮಳಂ ಮ ।
ಚ್ಚರನೆಂಗಾರುದ್ರನುದ್ರೇಕದೆ ಕೆದಱಿಪನಂದುಂಡುದಂ ನಂಜನೆಂಬಂ ||
ತಿರೆ ತೋರ್ಕುಂ ತನ್ನ ಕಾರ್ಯ್ಯಂ ಮಲೆಯದರಿನೃಪಂ ಕಾಣ್ಗೆ ಮೇಣ್ ಕಾದುಗೆಂತುಂ।
ಪಿರಿಯಂ ಪೇೞ್ ಮಾಣ್ಬನೇ ತೋಱದೆ ನಿಜಗುಣಮಂ ಜಿಷ್ಣು ವಿಷ್ಣುಕ್ಷಿತೀಶಂ||265||

ಇವನೀದಕ್ಷಿಣಬಾಹುದಂಡದೊಳೊಡಂಬಟ್ಟಾಗಿ ತೋಱಿರ್ಪ ಮೆ ।
ತ್ರಿವೊಲಾಯ್ತಾದಿವರಾಹನೆತ್ತಿದ ಧರಿತ್ರೀಮಂಡಳಂ ತೇಜದಿಂ ||
ದವರಲ್ದಂಬುಜದಂತಿರಂಬರದೊಳಿರ್ದತ್ತುಷ್ಣರುಙ್ಮಂಡಳಂ ।
ಸವನೇ ಸಾಹಸದೊಳ್ ನಳಾದಿನರಪಾಳರ್ ವಿಷ್ಣುಭೂಪಾಳನೊಳ್ ||266||

ದೆಸೆಗಳನೊತ್ತಿಕೊಂಡ ಧನದಿಂದಮಿವಂ ಸಲೆ ಮಾಡುವಧ್ವರ ।
ಪ್ರಸರದೊಳಂಜುತುಂ ಹವಿಗೆ ನೀಡುವ ಶಕ್ರನ ಕೆಯ್ಯ ಕಂಪಮುಂ ||
ಪ್ರಸರಿಪ ಧೂಮಸಂಚಯದೆ ಕಾಡಿಗೆಗೊಳ್ವ ಸರೋಜಜಾಂಡಮುಂ ।
ಬೆಸಗೊಳವೇಡ ವಿಷ್ಣು ಪುರುಷೋತ್ತಮನೆಂದಿವು ತಾವೆ ಪೇೞವೇ ||267||

ಪದುಳಂ ನಿಂದಂತುಮಿಂತುಂ ನಿಮಿರ್ವ ನೆಲಕೆ ಜೇರಿರ್ಪವೋಲಿರ್ಪ ತೋಳ್ ಸೊ।
ರ್ಕದ ವೀರಶ್ರೀಗೆ ಸೊರ್ಕೇಱಿಸುವ ಮಸಕಮಂ ಪೆತ್ತ ಬಾಳ್ ದಿಗ್ಗಜಾನೀ ||
ಕದ ಮೆಯ್ಯಂ ಸುಯ್ಯುಮಂ ಬೆಚ್ಚನಿಪ ಬಿಸಿಯ ತೇಜಂ ಪೊಡೞ್ದಿರ್ಪಿನಂ ಕೊ ।
ಪ್ಪದ ರಾಜ್ಯಶ್ರೀಯುಮಾಯುಂ ತನಗೆ ದೃಢಮೆನಲ್ ವಿಷ್ಣುರೋಚಿಷ್ಣುವಾದಂ||268||

---

## 61 ಮುಳವಳ್ಳಿ 31. 1117

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಾಪ್ರಧಾನ ಗಂಗರಾಜನು ಚೋಳರನ್ನು ಜಯಿಸಿ ದೊರೆಯಿಂದ ತಿಪ್ಪೂರನ್ನು ಪಡೆದು ಒಬ್ಬ ಜೈನಗುರುವಿಗೆ ಕೊಟ್ಟಂತೆ ಹೇಳಿದೆ.**

### ವಿನಯಾದಿತ್ಯ

* ಅದಱೊಳ್ ಕೌಸ್ತುಭದೊಂದನರ್ಘ್ಯಗುಣಮಂ ದೇವೇಭದುದ್ದಾಮಸ ।
ತ್ವದಗುರ್ವಂ ಹಿಮರಶ್ಮಿಯುಜ್ವಳಕಳಾಸಂಪತ್ತಿಯಂ ಪಾರಿಜಾ ||

ತದುದಾರತ್ವದ ಪೆಂಪನೊರ್ವನೆ ನಿತಾಂತಂ ತಾಳ್ದಿ ತಾನಲ್ತೆ ಪು |
ಟ್ಟಿದನುದ್ವೇಜಿತವೀರವೈರಿ ವಿನಯಾದಿತ್ಯಾವನೀಪಾಲಕಂ ||269||
* ಅದಱೊಳ್ = ಹೊಯ್ಸಳವಂಶಾಬ್ಧಿಯಲ್ಲಿ

ಮದವದ್ಭೂಪಬಲಾಂಧಕಾರಹರಣಂ ತೇಜೋಧಿಕಂ ಸಂತತಾ |
ಭ್ಯುದಯಂ ಸಂಹೃತವಿದ್ವಿಷತ್ಕುವಳಯಶ್ರೀಕಂ ಸುಹೃಚ್ಚಕ್ರಸ ||
ಮ್ಮದಸಂಪಾದನಹೇತು ಸತ್ಪಥಗತಂ ಪದ್ಮೋದ್ಭವೋದ್ಭಾವಕಂ |
ವಿದಿತಾರ್ಥಾನುಗನಾಮನಲ್ತೆ ವಿನಯಾದಿತ್ಯಾವನೀಪಾಲಕಂ ||270||

## ಗಂಗರಾಜನ ಶೌರ್ಯ

ಇತ್ತಣ ಭೂಮಿಭಾಗದೊಳಗನ್ಯರದೇಕೆ ಭವತ್ಪ್ರತಾಪಸಂ |
ಪತ್ತಿಯ ವರ್ಣನಾವಿಧಿಗೆ ಗಂಗಜಮೂಪ ಜಿಗೀಷುವೃತ್ತಿಯಿಂ ||
ದೆತ್ತಿದ ನಿನ್ನ ಕೆಯ್ಯ ನಿಶಿತಾಸಿಯ ತೌಷೊನೆ ಬೆನ್ನ ಬಾರನೆ |
ತ್ತುತ್ತಿರೆ ಪೋಗಿ ಕಂಚಿ ಗುಱಿಯುಪ್ಪಿನಮೋಡಿದ ದಾಮನೆಯ್ದನೇ ||271||

---

## 62 ಬೇಲೂರು 18. ಸು. 1117

**ಈ ಶಾಸನವು ಅಸಮಗ್ರವಾಗಿದೆ. ಇದು ಹೊಯ್ಸಳರಾಜನಾದ ವಿಷ್ಣುವರ್ಧನ ಇವನ ಮಹಿಷಿ ಶಾಂತಲೆ ಇವರ ಸ್ತುತಿರೂಪವಾಗಿದೆ.**

## ವಿನಯಾದಿತ್ಯ

ಕೊಂಕಣಿಗರಿವನ ಖಡ್ಗದ|ಕಂಕಣಮುದೆ ನಮ್ಮ ನೆಲವೊ ಮುಱುಗಿಸುಗೆನುತುಂ |
ಭೋಂಕಲ್ ಕೆದಱುವಿನಂ ನಿ | ಶ್ಯಂಕಂ ಪರಿಯಿಟ್ಟನಲ್ತೆ ವಿನಯಾದಿತ್ಯಂ ||272||
ಮಲೆಯರನುಮುಕ್ಕಳಿಲ್ಲಂ | ತಲೆಯಂ ತಡವುತ್ತುಮೆಱ್ದಿ ಪಾದಾಂಬುಜಮಂ |
ತಲೆಯೊಳ್ ತಳೆವಿನೆಗಂ ಭುಜ | ಬಳಮಂ ತಳೆದಿರ್ದನಲ್ತೆ ವಿನಯಾದಿತ್ಯಂ ||273||
ಯುಗಸಾಮರ್ಥ್ಯದೆ ಮುನ್ನಂ|ನೃಗನಹುಷಾದಿಗಳೊಳಾದ ಗುಣಮೇಂ ಗುಣಮೇ |
ಮಿಗಿಲಾತಂ ಗುಣದಿಂ ಕಲಿ|ಯುಗಸಾಮರ್ಥ್ಯಮುಮನಲೆದು ವಿನಯಾದಿತ್ಯಂ ||274||

## ವಿಷ್ಣುವರ್ಧನನ ಮಹಿಷಿ ಶಾಂತಲೆ

ಪತಿಭಕ್ತಿ ಭವದ್ವಿಮುಕಂ | ಹಿತಮೆಂಬುದನಱಿದು ವಿನಯದಿಂ ವಿಷ್ಣುಮಹೀ |
ಪತಿಯುಂ ಮೆಚ್ಚಿಸುತೆ ಮಹಾ|ಸತಿ ಶಾಂತಲದೇವಿ ಪಟ್ಟಮಂ ಧರಿಯಿಸಿದಳ್ ||275||

---

## 63 ಸೊರಬ 325. 1118

**ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಚಟ್ಟಗಾವುಂಡನು ಭಾರಂಗಿಯಲ್ಲಿ ಮಲ್ಲಿಕಾರ್ಜುನದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಸಮುದ್ರ

ಮಕರವ್ರಾತಾಭಿಘಾತೋಚ್ಚಳಿತಕಮಠಸಂಘಟ್ಟಸಂಸ್ಪರ್ಧಿ ಮೀನ |
ಪ್ರಕರಪ್ರಕ್ಷೋಭಿತೋದ್ವೃತ್ತತರಳತರತರಂಗೋತ್ಕರಕ್ಷಿಪ್ತಮುಕ್ತಾ ||
ನಿಕರಂ ಕಣ್ಗೆಯ್ದೆ ಚೆಲ್ವಂ ಪಡೆದುದವಿರಳೋತ್ತಾಳಕಲ್ಲೋಳಮಾಳಾ |
ಧಿಕಸ....ರ್ಷಪ್ರಬಳಘನಘನಧ್ವಾನರೌದ್ರಂ ಸಮುದ್ರಂ ||276||

ಅದು ನಾನಾನಕ್ರಚಕ್ರಕ್ರಮಕರಿಮಕರೋಡ್ಡೀನಪಾಠೀನಪುಚ್ಛ |
ಚ್ಛದವಾತಾಘಾತಭೀತಾಚಳಚಳನಚಳತ್ತುಂಗರಂಗತ್ತರಂಗೌ ||
ಘದುರಂತಪ್ರಾಂತಮುಜ್ಜೃಂಭಿತಬಹಳತಟಿಜ್ಜಾಳಲೀಳಾವಿನೀಳಾಂ |
ಬುದಬಿಂಬಾಡಂಬರಂ ಕಣ್ಗೆಸೆವುದು ಲಹರೀಲೋಳಬಾಳಪ್ರವಾಳಂ ||277||

### ಅನಂತಚಮೂಪ

ಶಾರದನೀರದಂ ಪುದಿದುದೋ ನಭಮಂ ಸುತನಂ ಸುಧಾಂಶುವಂ |
ಕ್ಷೀರಗಭೀರನೀರಧಿ ನಿರೀಕ್ಷಿಸಲೆಂದಿರದೆಯ್ದೆವಂದು ನಿಂ ||
ದೀರಸೆಯಿಂ ನಭಕ್ಕೊಗೆಯಲಿರ್ದುದೊ ಪೇಳೆನಿಪುದ್ಧಕೀರ್ತಿವಿ |
ಸ್ತಾರನನೆಯ್ದೆ ಬಣ್ಣಿಪುದನಂತಚಮೂಪನನೀಜಗಜ್ಜನಂ ||278||

### ಚಟ್ಟ

ಚಟ್ಟಂ ಪರವನಿತೆಯರಂ | ಮುಟ್ಟಂ ವಿತರಣಮನಮರಭೂರುಹದೊಳ್ ಕೋ |
ಡಿಟ್ಟಂ ಪಾಪದ ಪಥಮಂ | ಮೆಟ್ಟಂ ಶಾಶ್ವತಪದಕ್ಕೆ ಕಳಸಮನಿಟ್ಟಂ ||279||

---

## 64 ನಾಗಮಂಗಲ 19. 1118

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಾಪ್ರಧಾನ ಗಂಗರಾಜನು ಬಿಂಡಿಗನವಿಲೆಯ ತೀರ್ಥಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿನಯನಂದಿ

ನಾಡೊಳಗಿದೆಸೆದ ಗೋಸನೆ | ಬಾಡಂಗಳ್ಗೆಱಗಿದಂದೆ ಮುನಿ ವನಿತೆಯರೊಳ್ |
ಕೂಡಿದನೆಂಬೀನುಡಿಯುದ | ನೇಡಿಪುದೆಲೆ ವಿನಯನಂದಿದೇವರ ಚರಿತಂ ||280||

### ಪಾಲ್ಯಕೀರ್ತಿ

ಅತಿಶಯಮಾಗೆ ದಾನದೊಳೆ ಜೇರ್ವರಿದೊಳ್ಪು ಸಯೋಕ್ತಿಯೆಂಬ ಸ |
ನ್ಮತಿಯೊಳೆ ಪುಟ್ಟಿ ಶಾಸ್ತ್ರದೊಳೆ ದಾಂಗುಡಿವೋಗಿ ವಿಶೇಷಮಪ್ಪ ಸ ||
ನ್ನುತಗುಣದೋಳಿಯಿಂದ ಮಡಲಾಗಿ ದಿಗಂತಮನೆಯ್ದಿ ಪಲ್ಲಪಂ |
ಡಿತರ ವಿಳಾಸಕೀರ್ತಿಲತೆ ಪರ್ವಿದುದುರ್ವಿಗೆ ಚೋದ್ಯಮಪ್ಪಿನಂ ||281||

ಸುರಕರ್ಢಿಯ ಕಾಮಧೇನುವ | ಶರದಭ್ರದ ಕ್ರಾಂತಿಯಂ ಪುದುಂಗೊಳಿಸುತ್ತುಂ |
ಶರದಮಳಚಂದ್ರಬಿಂಬದ | ದೊರೆಗೆ ಮಿಗಿಲ್ ಪ್ಪಾಲ್ಯಕೀರ್ತಿದೇವರ ಕೀರ್ತಿ ||282||

ದಾನಮಪರಿಮಿತದೊಳ್ಪಭಿ | ಮಾನಂ ಸತ್ಕವಿತೆ ಶಾಸ್ತ್ರನಿಪುಣತೆ ಕೀರ್ತಿ |
ಸ್ಥಾನಮೆನೆ ಸಂದರೀಗಳ್ | ದಾನಿಗಳಭಿಮಾನದಾನಿಗಳ್ ವಸುಮತಿಯೊಳ್ ||283||

ಏವೊಗಳ್ವುದಣ್ಣ ವಿಬುಧಜ | ನಾವಳಿಗಂ ಜೇಡಿದರ್ಥಿಜನಕಂ ನಿಚ್ಚಂ |
ದೇವತರು ಕುಡುವ ತೆಱದಂ| ತೀವರ್ ಸಲೆ ಪಲ್ಲಪಂಡಿತರ್ ವಸುಮತಿಯೊಳ್ ||284||

ಪುಡವಿಯೊಳಗ್ಗಳಂ ನೆಗೞ್ದ ದಾನಿಗಳಿನ್ನಿವರನ್ನರಾರೊ ಪೇೞ್ |
ನುಡಿಯದಿರಾರುಮಂ ಮರುಳೆ ಕಲ್ಪಮಹೀಜದ ಕೋಡಿನಂತೆ ಕೋ ||
ಡುಡುಗದೆ ನಗ್ನಭಗ್ನನಟಗಾಯಕದೀನಜನಕ್ಕೆ ಸಂತೊಸಂ |
ಬಡೆ ಕುಡುತಿರ್ಪ ಪೆಂಪಿನಳವಚ್ಚರಿಯಾಯ್ತಭಿಮಾನದಾನಿಯೊಳ್ ||285||

---

## 65 ಶ್ರವಣಬೆಳ್ಗೊಳ 73. 1118

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ದಂಡನಾಯಕ ಗಂಗರಾಜನು ದೊರೆಯಿಂದ ಪರಮ ಎಂಬ ಗ್ರಾಮವನ್ನು ಬೇಡಿ ತನ್ನ ತಾಯಿ ಪೋಚಲದೇವಿಯೂ, ಹೆಂಡತಿ ಲಕ್ಷ್ಮೀದೇವಿಯೂ ಬೆಳ್ಗೊಳದಲ್ಲಿ ಮಾಡಿಸಿದ ಬಸದಿಗಳಿಗೆ ಬಿಟ್ಟಂತೆ ಹೇಳಿದೆ.**

### ಗಂಗರಾಜನ ತಂದೆ ಏಚ

ವಿತ್ರಸ್ತಮಳಂ ಬುಧಜನ | ಮಿತ್ರಂ ದ್ವಿಜಕುಳಪವಿತ್ರನೇಚಂ ಜಗದೊಳ್ |
ಪಾತ್ರಂ ರಿಪುಕುಳಕಂದಖ | ನಿತ್ರಂ ಕೌಂಡಿನ್ಯಗೋತ್ರನಮಳಚರಿತ್ರಂ ||286||

### ಇವನ ಹೆಂಡತಿ ಪೋಚಿಕಬ್ಬೆ

ಉತ್ತಮಗುಣತತಿ ವನಿತಾ | ವೃತ್ತಿಯನೊಳಕೊಂಡುದೆಂದು ಜಗಮೆಲ್ಲಂ ಕೆ |
ಯ್ಯೆತ್ತುವಿನಮಮಳಗುಣಸಂ| ಪತ್ತಿಗೆ ಜಗದೊಳಗೆ ಪೋಚಿಕಬ್ಬೆಯೆ ನೋಂತಳ್ ||287||

### ಗಂಗರಾಜ

ತೆಗೆ ವಾರುವಮಂ ಹಾಱುವ | ಬಗೆಯಂ ತನಗಿರುಳ ಬವರಮೆನುತೆ ಸವಂಗಂ |
ಬುಗುವ ಕಟಕಿಗರನಳಿಱಿಂ | ಪುಗಿಸಿದುದು ಭುಜಾಸಿ ಗಂಗದಂಡಾಧಿಪನಾ ||288||

ಗಂಗವಾಡಿಯ ಬಸದಿಗಳೆನಿತೊಳವನಿತುಮಂ ತಾನೆಯ್ದೆ ಪೊಸಯಿಸಿದಂ |
ಗಂಗವಾಡಿಯ ಗೊಮ್ಮಟದೇವರ್ಗೆ ಸುತ್ತಾಲಯುಮನೆಯ್ದೆ ಮಾಡಿಸಿದಂ ||
ಗಂಗವಾಡಿಯೊಳು ತಿಗುಳರಂ ಬೆಂಕೊಂಡು ವೀರಗಂಗಂಗೆ ನಿಮಿರ್ಚಿ ಕೊಟ್ಟಂ |
ಗಂಗರಾಜನಾವುನ್ನಿನ ಗಂಗರ ರಾಯಂಗಂ ನೂರ್ಮಡಿ ಧನ್ಯನಲ್ತೇ ||289||

ಎತ್ತಿದನೆಲ್ಲಿಗಲ್ಲಿ ನೆಲೆವೀಡನೆ ಮಾಡಿದನೆಲ್ಲಿಗಲ್ಲಿ ಕಣ್ |
ಪತ್ತಿದುದೆಲ್ಲಿಗಲ್ಲಿ ಮನಮಾವೆಡೆಗೆಯ್ದಿದುದಲ್ಲಿಗಲ್ಲಿ ಸಂ ||
ಪತ್ತಿನ ಜೈನಗೇಹಮನೆ ಮಾಡಿಸೆ ದೇಶದೊಳಲ್ಲಿಗಲ್ಲಿಗೆ |
ತ್ತೈತ್ತಿಲುಮಾವಗಂ ಪಱಿಯ ಮಾಱಿಕ್ಕಿವೊಲಾದುದು ಗಂಗರಾಜನಿಂ ||290||

---

### ೫೬ ಶ್ರವಣಬೆಳ್ಗೊಳ 351. 1119

ಇದರಲ್ಲಿ ದಿವಾಕರಣಂದಿಯ ಶಿಷ್ಯೆ ಶ್ರೀಮತಿಗಂತಿ ಸನ್ಯಸನವಿಧಿಯಿಂದ ಮುಡಿಪಿದಳೆಂದು ಹೇಳಿದೆ.

### ದಿವಾಕರಣಂದಿ

ಅಂತೆನಲಿಂತೆನಲ್ಕಱಿಯೆನೆಯ್ದೆ ಜಗತ್ತ್ರಯವಂದ್ಯರಪ್ಪ ಪೆಂ |
ಪಂ ತಳೆದಿರ್ದರೆಂಬುದನೆ ಬಲ್ಲೆನದಲ್ಲದೆ ಸಂಯಮಂ ಚರಿ ||
ತ್ರಂ ತಪಮೆಂಬಿವತ್ತಳಗಮಿಂತು ದಿವಾಕರಣಂದಿದೇವಸಿ |
ದ್ಧಾಂತಿಗರ್ಗೆಂದೊಡೊಂದು ರಸನೋಕ್ತಿಯೊಳಾನದನೆಂತು ಬಣ್ಣಿಪೆಂ ||291||

### ಮಳಧಾರಿದೇವ

ನೆಱಿಯೆ ತನುತ್ರಮಿಕ್ಕಿದವೊಲಿರ್ದ ಮಲಂ ತಿನೆ ಮೆಯ್ಯನೊರ್ಮೆಯುಂ |
ತುಱಿಸುವುದಿಲ್ಲ ನಿದ್ದೆವರೆ ಮಗ್ಗುಲನಿಕ್ಕುವುದಿಲ್ಲ ಬಾಗಿಲಂ ||
ಕಿಱುತೆಱಿಯೆಂಬುದಿಲ್ಲುಗುಱ್ವುದಿಲ್ಲ ಮಲಂಗುವುದಿಲ್ಲ ಹೀಂದ್ರನುಂ |
ನೆಱಿವನೆ ಬಣ್ಣಿಸಲ್ ಗುಣಗಣಾವಳಿಯಂ ಮಳಧಾರಿದೇವರಾ ||292||

### ಶ್ರೀಮತಿಗಂತಿ

ಆ ಮುನಿ ದೀಕ್ಷೆಯಂ ಕುಡೆ ಸಮಗ್ರತಪೋನಿಧಿಯಾಗಿ ದಾನಚಿಂ |
ತಾಮಣಿಯಾಗಿ ಸದ್ಗುಣಗಣಾಗ್ರಣಿಯಾಗಿ ದಯಾದಮುಕ್ಷಮಾ ||

ಶ್ರೀಮುಖಲಕ್ಷ್ಮಿಯಾಗಿ ವಿನಯಾರ್ಣವಚಂದ್ರಿಕೆಯಾಗಿ ಸಂತತಂ |
ಶ್ರೀಮತಿಗಂತಿಯರ್ ನೆಗಱ್ದಿರುರ್ವಿಯೊಳುರ್ವರೆ ಕೂರ್ತು ಕೀರ್ತಿಸಲ್ ||293||

---

## 67 ಚಿಕ್ಕಮಗಳೂರು 160. 1120

**ಈ ಅಸಮಗ್ರವಾದ ಶಾಸನದಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಪ್ರಧಾನರಾದ ಮರಿಯಾನೆದಂಡನಾಯಕ ಭರತದಂಡನಾಯಕರ ಸ್ತುತಿ ಇದೆ.**

### ವಿನಯಾದಿತ್ಯನ ಹೆಂಡತಿ ಕೆಳೆಯಬ್ಬರಸಿ

ಪರಿಜನಕಂ ಪುರಜನಕಂ | ಪರಮಾರ್ಥಂ ತಾನೆ ಪುಣ್ಯದೇವತೆಯೆನಲೇಂ |
ಧರೆಯೊಳ್ ನೆಗಱ್ದಳೊ ಕೆಳೆಯ | ಬ್ಬರಸಿ ಜನಾರಾಧ್ಯೆ ಭುವನವನಿತಾರತ್ನಂ||294||

### ಬಲ್ಲಾಳ I

ಎನಿತಿತ್ತೊಡಮೆನಿತಿಱಿದೊಡ |ಮನಿತಾರ್ಪುಂ ಕೂರ್ಪುಮಪ್ಪುವೇ ಪೆಱರ್ಗದು ಕೆ|
ಮ್ಮನೆ ನೋಡ ದಿಟಕೆ ಬಲ್ಲಾ | ಳನೃಪಾಳನೆ ಚಾಗಿ ಬಲ್ಲುದೇವನೆ ಬೀರಂ ||295||

### ವಿಷ್ಣುವರ್ಧನ

ಇನಿತುಂ ಕೋಪಾವಳೀಪಭ್ರುಕುಟಿ ನಿಟಿಲದೊಳ್ ಪುಟ್ಟೆ ತೆರ್ಪುತ್ತಿಮಂ ತೊ |
ಪ್ಪನೆ ಮಾರ್ಪೊಯ್ಗುಂ ದಿಶಾಧೀಶರಸಿದಿರ ದಿಶಾಧೀಶರೊಳ್ ತಾಗಿಕುಂ ತಿ ||
ಪ್ಪನಲಾಶಾದಂತಿಯೂಥಂಗಳನಿದಿರ ದಿಶಾದಂತಿಯೂಥಂಗಳೊಳ್ ಪು |
ಣ್ಮನೆ ತಾಳಂಗೂಡುಗುಂ ವ್ಯೋಮಮುಮನೆಳೆಯುಮಂ ವಿಷ್ಣುಜಿಷ್ಣುಪ್ರಭಾವಂ ||

### ಮರಿಯಾನೆದಂಡನಾಯಕ

ಎಱಗಿ ಬುಧಮಧುಕರಂಗಳ್ | ಪೆಱಪಿಂಗದೆ ತನ್ನನೆಂದುಮೋಲಗಿಪಿನೆಗಂ |
ಮಱಿಯಾನೆ ದಾನಗುಣಮೆಡೆ|ವಱಿಯದಿರಲ್ ಪತಿಗೆ ಪಟ್ಟದಾನೆಯೆನಿಪ್ಪಂ ||297||
ಮಱುವಕ್ಕಮನೋಡಿಸಲುಂ | ನೆಱೆ ರಾಜ್ಯಶ್ರೀವಿಳಾಸಮಂ ಮೆಱೆಯಲುಮೀ|
ಮಱಿಯಾನೆ ನೆಱೆಗುಮೆಂದ | ಱ್ಕಱೆನೊಳ್ ಪತಿ ಮೆಚ್ಚಿ ಪಟ್ಟದಾನೆಯುಮಾದಂ||
ಉನ್ನತವಂಶನುತ್ಸವಕರೋತ್ತಮಭದ್ರಗುಣಾನ್ವಿತಂ ಜಗ |
ತ್ಸನ್ನುತದಾನಯುಕ್ತವಿಭವಂ ಮಱಿಯಾನೆ ರಿಪುಪ್ರಭೇದನೋ ||
ತ್ಪನ್ನಜಯಾಭಿರಾಮನೆನಗೀತನೆ ನಚ್ಚಿನ ಪಟ್ಟದಾನೆಯೆಂ |
ದೇಂ ನೆಱೆ ನಚ್ಚಿ ಮಾಡಿದನೊ ವಿಷ್ಣುನೃಪಂ ಧ್ವಜಿನೀಪತಿತ್ವಮಂ ||299||

ಎಱಗುವ ದಿವಿಜರ ಮಕುಟದ । ತುಱುಗಿದ ಮಾಣಿಕದ ತಣ್ಬೆಸಿಲ್ಗಳ ಪೊಳಪಿಂ।
ಮಿಱುಗುವ ಜಿನಪದನಖರುಚಿ।ಮಱಿಯಾನೆಗೆ ಮಾೞ್ಕೆ ಸಕಲಮಹಿಮಾಸ್ಪದಮಂ ॥

## ಭರತದಂಡನಾಯಕ

ತೊಳತೊಳಗಿ ಬೆಳಗಿ ಕೀರ್ತಿಯ । ವಳಯದಿನಳವಟ್ಟ ವಿಷ್ಣುಭೂಪನ ರಾಜ್ಯ ।
ಸ್ಥಳಕೆ ಮಿಸುಪೆಸೆವ ಹೇಮದ । ಕಳಶಂ ಕೇವಳಮೆ ಭರತದಂಡಾಧೀಶಂ ॥301॥

ಸಿರಿ ಪೊಸಮುತ್ತಿನೆಕ್ಕಸರದಂತಿರೆ ನಿನ್ನ ವಿಶಾಲವಕ್ಷದೊಳ್ ।
ಸರಸತಿ ವಕ್ತ್ರದೊಳ್ ತಿಲಕದಂತಿರೆ ವೀರರ ವೀರಲಕ್ಷ್ಮಿ ತೋ ॥
ಳ್ವೆರಗಿನೊಳೊಪ್ಪೆ ರಕ್ಕೆವಣಿಯಂತಿರೆ ನಿರ್ಮಳಮಪ್ಪ ಕೀರ್ತಿಯಂ ।
ಭರತಚಮೂಪ ತಾಳ್ದು ಶಶಿಸೂರ್ಯಕುಳಾದ್ರಿಜಯಂಗಳುಳ್ಳಿನಂ ॥302॥

ವಾರಿಧಿವೃತಭೂಲೋಕದೊ । ಳಾರಯಲೀವಿಱಿವ ಗುಣದೊಳಮಮಾಭರತಂ ।
ಗಾರುಮಣಂ ತೊಣೆಯಲ್ಲರ।ಧೀರರ್ ಕಲಿಯುಗದೊಳೊಗೆದ ದಂಡಾಧೀಶರ್ ॥303॥

ಲೋಗರ ಮಾತವಂತಿರಲಿ ಮಾಣ್ ಭರತಂ ಮುನಿದೆತ್ತೆ ಮತ್ತೆ ಕೋ ।
ಳ್ಪೋಗದ ವೈರಿದುರ್ಗಮುರಿದೇಱದ ವೈರಿಪುರಂಗಳೋಡಿ ಪಾ ॥
ಱಾಗದ ವೈರಿದೇಶಮತಿಭೀತಿಯಿನುಳ್ಳುದನಿತ್ತು ತೆತ್ತುಮಾ ।
ಳಾಗದ ವೈರಿವೀರರಣಮಿಲ್ಲ ದಲೀದೊರೆ ತತ್ಪರಾಕ್ರಮಂ ॥304॥

ಮನೆಯೊಳ್ ಚಾಣಕ್ಯನಿಂದಂ ಮಿಗಿಲೆನಿಪ ಮಹಾಮಂತ್ರಿ ನಾನಾನಯಜ್ಞಂ ।
ಮೊನೆಯೊಳ್ ಸೌಪರ್ಣನಿಂದಗ್ಗಳಮೆನಿಪ ಮಹಾವೀರನಭ್ಯಸ್ತಶಾಸ್ತ್ರಂ ॥
ಮನೆಗಂ ಮಾಱಾಂತು ನಿಂದೊಡ್ಡಿದ ಮೊನೆಗಮಿದೇಂ ದಕ್ಷನೆಂದಱ್ಕಱಿಂದಾ ।
ಳ್ದನೆ ತನ್ನಂ ಬಣ್ಣಿಸಲ್ಕೇಂ ನೆಗೞ್ದನೊ ಭರತಂ ಖಡ್ಗಕಾರ್ಯಾತಿಧುರ್ಯಂ ॥305॥

ನಿರಪಾಯಂ ನಿಷ್ಕಳಂಕಂ ನಿಹತರಿಪುಕುಳಂ ನಿರ್ಭರಾಶಾಜಯಶ್ರೀ ।
ಪರಿರಂಭಾರಂಭಶುಂಭತ್ಸುಖಮಯಮತಿತೀವ್ರಪ್ರತಾಪಪ್ರಕಾಶ ॥
ಸ್ಫುರಿತಂ ಪದ್ಮಾಕರಾಬ್ಜಗ್ರಹಣಕಲಿತನಿತ್ಯೋದಯಂ ಲೋಕದೊಳ್ ಸು ।
ಸ್ಥಿರಮಕ್ಕೀದೋರ್ಯಶಶ್ರೀರತ ಭರತ ಭವದ್ಭಾಗ್ಯಚಂಡಾಂಶುಬಿಂಬಂ ॥306॥

---

### ✓68 ಶ್ರವಣಬೆಳ್ಗೊಳ 128. 1121

**ಇದರಲ್ಲಿ ಗಂಗರಾಜನ ಹೆಂಡತಿ ಲಕ್ಷ್ಮಿ ಸಾಯಲು ಆವಳಿಗೆ ಗಂಗರಾಜನು ನಿಸಿದಿಗೆಯನ್ನು ನಿಲಿಸಿದಂತೆ ಹೇಳಿದೆ.**

ಲಕ್ಷ್ಮಿ

ಪರಮಪದಾರ್ಥನಿರ್ಣಯಮನಾಂತ ವಿದಗ್ಧತೆ ದುರ್ನಯಂಗಳೊಳ್ |
ಪರಿಚಯಮೆಂದುಮಿಲ್ಲದತಿಮುಗ್ಧತೆ ತನ್ನಿನಿಯಂಗೆ ಚಿತ್ತದೊಳ್ ||
ಪಿರಿದನುರಾಗಮಂ ಪಡೆವ ರೂಪು ವಿನೇಯಜನಾಂತರಂಗದೊಳ್ |
ನಿರುಪಮಭಕ್ತಿಯಂ ಪಡೆವ ಪೆಂಪಿವು ಲಕ್ಷ್ಮಲೆಗೆಂದುಮನ್ವಿತಂ ||307||

ಸೌಭಾಗ್ಯದೊಳಸುರ್ದಾದಂ | ಶೋಭಾಸ್ಪದಮಾದ ರೂಪಿನೊಳ್ಪಿಂ ಪ್ರತ್ಯ |
ಕ್ಷೀಭೂತಲಕ್ಷ್ಮಿಯೆಂದಪು | ದೀಭೂತಳಮಿನಿತುಮೆಯ್ದೆ ಲಕ್ಷ್ಮೀಮತಿಯಂ||308||

ವಿತರಣಗುಣಮದೆ ವನಿತಾ|ಕೃತಿಯಂ ಕೆಯ್ಕೊಂಡುದೆನಿಪ ಮಹಿಮೆಯ ಲಕ್ಷ್ಮೀ|
ಮತಿಯೆಲವೊ ದೇವತಾಧಿ | ಷ್ಠಿತೆಯಲ್ಲದೆ ಕೇವಳಂ ಮನುಷ್ಯಾಂಗನೆಯೇ ||309||

---

69 ಶಿವಮೊಗ್ಗ 4. 1122

ಇದರಲ್ಲಿ ಗಂಗರಾಜನಾದ ನನ್ನಿಯ ಗಂಗಪೆರ್ಮಾಡಿ ತನ್ನ ಅಜ್ಜ ಬರ್ಮದೇವನು ಮಾಡಿ
ಸಿದ ಮಂಡಳಿಯ ಪಟ್ಟದ ತೀರ್ಥದ ಬಸದಿಯನ್ನು ಕಲ್ಲುವೆಸನಾಗಿ ಮಾಡಿಸಿ
ಭೂಮಿಯನ್ನು ಬಿಟ್ಟಂತೆ ಹೇಳಿದೆ.

ರಕ್ಕಸಗಂಗ

ತೆಂಗನುಡಿದಡರ್ದು ಕಿಚ್ಚಂ|ಕೌಂಗಂ ಮಿಡುಕದಿರಲೆಡದ ಕೆಯ್ಯೊಳ್ ಮದಮಾ |
ತಂಗಮನೆ ಪಿಡಿದು ನಿಲಿಸಿದ | ಗಂಗಂ ಸಾಮಾನ್ಯನೃಪನೆ ರಕ್ಕಸಗಂಗಂ ||310||

ಭುಜಬಳಗಂಗ

ಭುಜಬಳದಿಂ ಶತ್ರುಮಹೀ|ಭುಜಕುಜಮಂ ಕಿೞ್ತು ಮುತ್ತಿ ಕೋಂಟೆಗಳಂ ಕೊಂ|
ಡಜಿತಬಳನೆನಿಸಿ ನೆಗೞ್ದಂ | ಭುಜಬಳಗಂಗಕ್ಷಿತೀಶನವನಿಪತಿಳಕಂ ||311||

ನನ್ನಿಯಗಂಗ

ದೆಸೆಗಳನೆಯ್ದೆ ಪರ್ವಿದ ನೆಲಕ್ಕಿದೆ ತಾಂ ನೆಲಗಟ್ಟೆನಿಪ್ಪ ಬ |
ಲ್ಪೆಸೆವುದು ತೋಳೊಳೆಣ್ದೆಸೆಯ ಗಂಡರ ಮೀಸೆಯ ಮೇಲೆ ಮೇಲೆ ವ ||
ರ್ತಿಸುವುದು ಗಂಡಗರ್ವದ ಜಸಂ ಬಡಬಾಗ್ನಿಯ ಬಾಯನೆಯ್ದೆ ಬ |
ತ್ತಿಸುವುದು ತೇಜಮೇನಧಿಕನಾವನೊ ನನ್ನಿಯ ಗಂಗಭೂಭುಜಂ ||312||

ಮದನಖದೊಳ್ ದಶಾನನತೆ ನಮ್ರನೃಪಾಳಿಮುಖಾಂಕದಿಂ ಜಯಾ |
ಸ್ಪದಭುಜದಲ್ಲಿ ಷಣ್ಮುಖತೆ ದುರ್ಜಯಶಕ್ತಿಧರತ್ವದಿಂ ಜತು ||

ರ್ವದನತೆ ವಕ್ತ್ರದೊಳ್ ಚತುರವಾಣಿಯಿನೊಪ್ಪಿರಲೆಂತು ನೋಱಿಸ್ಕೊಡ |
ಭ್ಯುದಯಮನೆಯ್ದಿದತ್ತು ಪಲವುಂ ಮುಖದಿಂ ತವೆ ಕೀರ್ತಿ ಗಂಗನೊಳ್ ||313||
ಮುನಿಸಿಂ ದಿಗ್ದಂತಿದಂತಂಗಳನವಯವದಿಂದೊತ್ತಿ ಬೇಗಂ ಭಳಿಲ್ಲೆಂ |
ಬಿನೆಗಂ ಕಿಱಿತ್ತೆತ್ತನೇ ತಾರಗೆಗಳನದಟಿಂದಾಲಿಕಲ್ಲಂದದಿಂ ಸೂ ||
ಸನೆ ವಾರ್ಧಿವ್ರಾತಮಂ ಸುೞಿನೆ ತವುವಿನೆಗಂ ಪೀರನೇ ಕೋಪದಿಂ ಪೊ |
ಯ್ಯನೆ ಬೆಟ್ಟಂ ಪಿಟ್ಟುಪಿಟ್ಟಾಗಿರೆ ಸಮರದೊಳೀವೀರಪೆರ್ಮಾಡಿದೇವಂ ||314||

**ಗುಣವಂದಿ**

ಎಳಿಗೆ ಗುಣರುಚಿಯಿನೊಳ್ಪ | ಗ್ಗಳಿಸಿರೆ ಗುಣರುಚಿವಿಕಾಸವಾಗ್ರಶ್ಮಿಯಿನು |
ಜ್ಜಳಿಸೆ ವದನೇಂದು ಪೆಂಪಂ | ತಳೆದಂ ಗುಣನಂದಿದೇವಶಬ್ದಬ್ರಹ್ಮಂ ||315||

**ಪ್ರಭಾಚಂದ್ರ**

ಚತುರಾಸ್ಯಂ ಚತುರೋಕ್ತಿಯಿಂ ಪ್ರಭುತೆಯಿಂದೀಶಂ ಗುಣವ್ಯಾಪಕ |
ಸ್ಥಿತಿಯಿಂ ವಿಷ್ಣು ಸುಬುದ್ಧಿವಿಸ್ತರತೆಯಿಂ ಬೌದ್ಧಂ ದಲೀಜೈನಪ ||
ದ್ಧತಿಯಿಂದಿರ್ದುಮಿದೇಂ ವಿಚಿತ್ರತರಮೋ ಚಾತುರ್ಯಮಾಯ್ತಾಸಮು |
ನ್ನತಸಿದ್ಧಾಂತವಿಭೂಷಣಂಗೆನಿಸಿದಂ ಶ್ರೀಮತ್ಪ್ರಭಾಚಂದ್ರಮಂ ||316||

**ಬುಧಚಂದ್ರ**

ವಸುಮತಿಗೊಳ್ಪುವೆತ್ತ ಧವಳಾತಪವಾರಣಮಾಗಿ ಕೀರ್ತಿ ನ |
ರ್ತಿಸುವುದು ಪೆಂಪುವೆತ್ತ ಮಹಿಮೋನ್ನತಿ ಮೇರುಗೆ ಮಂಡಪಂ ದಲಾ ||
ಗೆಸೆವುದು ಸದ್ಗುಣಪ್ರತತಿ ಮೌಕ್ತಿಕಮಾಲೆಯ ಲೀಲೆಯಂ ಸಮ |
ರ್ಥಿಸುವುದು ಸಜ್ಜನಕ್ಕೆ ಸಹಜಾತಮೆನಲ್ ಬುಧಚಂದ್ರದೇವರಾ ||317||
ಕರಮಂ ವಾರುಣಿಗೆಂದು ನೀಡಿ ಪಿರಿದುಂ ನಿಸ್ತೇಜಮೆಯ್ದಿರ್ದ ತ |
ನ್ನಿರವಂ ನೋಡದೆ ಸತ್ಪದಪ್ರಭುತೆಯುಂ ತಾಳ್ದಿರ್ದ ದೋಷಾಕರಂ ||
ದೊರೆಯೇ ಪೇೞನುತುಂ ಕಳಂಕರಹಿತಂ ಸದ್ವೃತ್ತದಿಂದಂ ತಿರ |
ಸ್ಕರಿಪಂ ಚಂದ್ರನನೊಳ್ಪುವೆತ್ತ ಬುಧಚಂದ್ರಂ ಸಂತತೋತ್ಸಾಹದಿಂ ||318||
ನುಡಿಗಳ್ ಸತ್ಯಸುವರ್ಣಭೂಷಣಗಣಂ ಚಿತ್ತಂ ಸುರತ್ನಂಗಳಂ |
ಮಡಗಿಟ್ಟಿರ್ದ ಕರಂಡಕಂ ತನು ತಪಶ್ರೀಭಾಮಿನೀಭಾಸಿಯಂ ||
ದೊಡೆ ದುಷ್ಕೀರ್ತಿಯನಾಂತ ಮತ್ತಿನ ಶಠರ್ ದುರ್ಬೋಧರಸ್ಪೃಶ್ಯರೇಂ |
ಘಡಿಯೇ ಸದ್ಬುಧಸೇವ್ಯನಪ್ಪ ಬುಧಚಂದ್ರಖ್ಯಾತಯೋಗೀಂದ್ರನೊಳ್ ||319||

## 70 ಹಾಸನ 116. 1122

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ತನ್ನ ಮಹಿಷಿ ಶಾಂತಲದೇವಿಗೆ ಸಲುವ ಶಾಂತಿಗ್ರಾಮದ ಧರ್ಮೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಬಲ್ಲಾಳ ವಿಷ್ಣುವರ್ಧನೋದಯಾದಿತ್ಯರು

ಶ್ರುತಿಕಥಿತಪಥದೊಳಮರ್ದಿರೆ | ಗತಿಗಳ್ ಶುದ್ಧಾತ್ಮತತ್ತ್ವದೊಳ್ ತಿಳಿದಿರೆ ಸ |
ನ್ಮತಿಗಳ್ ಪುಣ್ಯಾತ್ಮರಿವರ್ | ಗತಿಗಂ ರಾಜ್ಯಕ್ಕಮೊಪ್ಪೆ ಭಾಜನಮಾದರ್ ||320||

### ಬಲ್ಲಾಳ ವಿಷ್ಣುವರ್ಧನರು

ಮದದಿನಿದಿರಾದ ಪಾಂಡ್ಯನ | ಮದಮಂ ನಿಜಖಡ್ಗಬಳದೆ ಕರ್ಚಿಯೆ ಕಳೆದೋ |
ವದೆ ರಾಜ್ಯಲಕ್ಷ್ಮಿಯಂ ಕೊಂ | ಡದಟರ್ ಕೇವಳಮೆ ವಿಷ್ಣುಬಲ್ಲಾಳನೃಪರ್ ||321||

ದೋರಸಮುದ್ರದಲ್ಲಿ ಜಗದೇವನ ಸೇನೆಯನಿಕ್ಕಿ ತಮ್ಮ ತೋಳ್ |
ವೀರಸಮುದ್ರಮಾಗೆ ಜಯಲಕ್ಷ್ಮಿಗೆ ತದ್ಗಜವಕ್ತ್ರರಕ್ತಕಾ ||
ಶ್ಮೀರವಿಲೇಪನಂ ನೆಱಪಿ ತತ್ಪದಕಂಜರಸೆಯ್ದೆ ಕೊಂಡು ಭಂ |
ಡಾರಮನಾನೃಪರ್ ತಳೆದ ವೀರಮನಾರೊ ಗಭೀರಮೆನ್ನದರ್ ||322||

### ಬಲ್ಲಾಳ I

ಪರಮಾರಾಧ್ಯಂ ಮಹೇಶಂ ಕುಲವಧು ವಿಜಯಶ್ರೀ ನೆಲಂ ಪೋಷ್ಯವರ್ಗಂ |
ದೊರೆಗಳ್ ವೈವಾಹಸಂಬಂಧಿಗಳೆನೆ ನೆಗೞ್ದಾ ರಾಯರಂಭೋಜಜಾಂಡೋ ||
ದರದೊಳ್ ತೆಂಗಾಯ ನೀರಂತಿರೆ ತಿಳಿದ ಜಸಂ ತನ್ನ ಭಂಡಾರಮಾಗು |
ತ್ತಿರೆ ಬಲ್ಲಾಳಾವನೀಶಂ ಪೊಗೞೆ ಜಗಮಶೇಷಂ ಮಹತ್ತ್ವಕ್ಕೆ ನೋಂತಂ ||323||

### ವಿಷ್ಣುವರ್ಧನ

ರವಿ ತೇಜೋಲತೆಯೊಳ್ ಪೊದಱೆ ಫಳಮೆಂಬಂತಿರ್ಪಿನಂ ಪೂರ್ಣಬಿಂ |
ಬವನುಳ್ಳಿಂದು ಯಶೋವಿಶಾಲಲತೆಯೊಳ್ ಪೂಗೊಂಚಲಂತಿರ್ಪಿನಂ ||
ಧವಳಚ್ಛತ್ರದ ತಣ್ಪು ಭೂಮಿಗಮರ್ದಿರ್ಪಂತಿರ್ಪಿನಂ ಕ್ಷತ್ರಧ |
ರ್ಮವಿಳಂಬಂ ಪೊಗೞ್ವಂಗಳುಂಬಮೆನಿಸಿತ್ತಾವಿಷ್ಣುಭೂಪಾಳನೊಳ್ ||324||

ಧುರದೊಳ್ ಮಾಱಾಂತರಂ ಕೊಂದಪನೆರೆದ ಜನಕ್ಕಿತ್ತಪಂ ಭೀತಿಯಿಂದಂ |
ಶರಣೆಂಬಾರ್ ಬಂದೊಡಂ ಕಾದಪನಿದು ಪುಸಿಯೆಂಬುದ್ಧತರ್ ಕಾದಿ ನೋೞ್ಕ ||
ಚ್ಚರಿಯಿಂದಂ ಬೇಡಿ ನೋೞ್ಕಲ್ಲದೊಡೆ ಮಱೆಗೆವಂದಿರ್ದು ನೋೞ್ಕಟ್ಟಿ ಕೊಲ್ಗಂ |
ಕರೆದೀಗುಂ ಕಾಗುಮೆಂತುಂ ನೆಣಸುವದಟರಾರ್ ಪೊಯ್ಸಳಂಗಂ ಜವಂಗಂ ||325||

### ಶಾಂತಲದೇವಿ

ಗಿರಿಜೆಯ ಪಾದಪದ್ಮಯುಗಳಜ್ಜಳದಿಂದಮೆ ಕೊರ್ಬಿ ನೀತಿ ವಿ ।
ಸ್ತರಿಸಿರೆ ಸೊಂಪುವೆತ್ತು ಪುರುಷವ್ರತದಿಂ ದಳಮೇಱಿ ಭಾಗ್ಯಮಂ ॥
ಜರಿಗಳನಾಂತು ರಂಜಿಸುವ ಶಾಂತಲದೇವಿಯ ರೂಪಕಲ್ಪವ ।
ಲ್ಲರಿಯಡರ್ದತ್ತು ವಿಷ್ಣುನೃಪನೆಂಬ ಸಮುನ್ನತಕಲ್ಪವೃಕ್ಷಮಂ ॥326॥

ಸತತಂ ನೋಱಿಯಲ್ಕೊಡೆ ಲಕ್ಷ್ಮೀದೇವತೆ ರಣವ್ಯಾಪಾರದೊಳ್ ಖಙ್ಗದೇ ।
ವತೆ ಬಿಣ್ಪಿಂದಮೆ ಭೂಮಿದೇವತೆ ಜನಕ್ಕೆಲ್ಲಂದದಿಂ ಪುಣ್ಯದೇ ॥
ವತೆ ವಾಗ್ದೇವತೆ ವಿದ್ಯೆಯೊಳ್ ಸಕಲಕಾರ್ಯೋದ್ಯೋಗದೊಳ್ ಮಂತ್ರದೇ ।
ವತೆ ನಾಥಂಗೆನೆ ಶಾಂತಿದೇವಿಯನದಿನ್ನೇವಣ್ಣಿಪಂ ಬಣ್ಣಿಪಂ ॥327॥

ಬೆಸನಂ ಪತಿಹಿತದಲ್ಲಿಯೆ । ಬೆಸನಂ ದ್ವಿಜದೇವಪೂಜೆಯಲ್ಲಿಯೆ ನೆಗೞ್ದ ।
ಬೆಸನಂ ನೋಂಪಿಗಳಲ್ಲಿಯೆ । ಬೆಸನಂಗಳ್ ಶಾಂತಿದೇವಿಯೊಳ್ ಪೆಱವೊಳವೇ॥328॥

ಪತಿಯ ಕಳಂಕಮನಾತ್ಮ । ದ್ಯುತಿಯಿಂದಪಹರಿಸಳೆಂದು ಸಲೆ ರೋಹಿಣಿಯುಂ ।
ಪತಿಹಿತೆ ಶಾಂತಲದೇವಿಯ । ಸಿತಕೀರ್ತಿಜ್ಯೋತ್ಸ್ನೆಸಂತತಂ ನಗುತಿರ್ಕುಂ ॥329॥

---

### 11 ಶ್ರವಣಬೆಳ್ಗೊಳ 132· 1123.

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಿಷಿ ಶಾಂತಲದೇವಿ ಬೆಳ್ಗೊಳದಲ್ಲಿ ಸವತಿಗಂಧವಾರಣ ಬಸ್ತಿಯನ್ನು ಕಟ್ಟಿಸಿದಳೆಂದು ಹೇಳಿದೆ.**

### ಎರೆಯಂಗ

ಅರಿಪುರದೊಳ್ ಧಗದ್ಧಗಿಲ ದಂಧಗಿಲೆಂಬುದರಾತಿಭೂಮಿಪಾ ।
ಳರ ಶಿರದೊಳ್ ಗರಿಲ್ ಗರಿಗರೀಗರಿಲೆಂಬುದು ವೈರಿಭೂತಳೇ ॥
ಶರ ಕರುಳೊಳ್ ಚಿಮಿಲ್ ಚಿಮಿಚಿಮೀಚಿಮಿಲೆಂಬುದು ಕೋಪವಹ್ನಿ ದು ।
ರ್ಧರತರಮೆಂದೊಡಳ್ಕುಱದೆ ಕಾದುವರಾರೆಱೆಯಂಗದೇವನೊಳ್ ॥330॥

### ವಿಷ್ಣುವರ್ಧನ

ಕೆಲರಂ ಕಿೞ್ತಿಕ್ಕಿ ಪೇರಂ ಬಿದಿರ್ದು ಕೆಲರನತ್ಯುಗ್ರಸಂಗ್ರಾಮದೊಳ್ ಬಾ ।
ಳ್ದಲೆಗೊಂಡಾಕ್ಷೇಪದಿಂದಂ ಕೆಲರ ತಲೆಗಳಂ ಮೆಟ್ಟಿ ನಿಂದುಗ್ರಕೋಪಂ ॥
ಮಲೆವತ್ಯುದ್ವೃತ್ತರಂ ತೊತ್ತೞಿದುೞಿದು ನಿಜಪ್ರಾಜ್ಯಸಾಮ್ರಾಜ್ಯಮಂ ತೋ ।
ಳ್ವಲದಿಂ ನಿಷ್ಕಂಟಕಂ ಮಾಡಿದನಧಿಕಬಳಂ ವಿಷ್ಣು ಜಿಷ್ಣುಪ್ರತಾಪಂ ॥331॥

### ಶಾಂತಲೆ

ಆ ನೆಗೞ್ದ ವಿಷ್ಣುನೃಪನ ಮ । ನೋನಯನಪ್ರಿಯೆ ಜಲಾಳಿನೀಲಾಳಕಿ ಜಂ ।
ದ್ರಾನನೆ ಕಾಮನ ರತಿಯೊಳ್ । ತಾನೆಣೆ ತೊಣೆ ಸರಿ ಸಮಾನೆ ಶಾಂತಲದೇವೀ ॥332॥

ಧುರದೊಳ್ ವಿಷ್ಣುನೃಪಾಳಕಂಗೆ ವಿಜಯಶ್ರೀ ವಕ್ಷದೊಳ್ ಸಂತತಂ ।
ಪರಮಾನಂದದಿನೋತು ನಿಲ್ವ ವಿಪುಳಶ್ರೀ ತೇಜದುದ್ದಾನಿಯಂ ॥
ಪರದಿಗ್ಭಿತ್ತಿಯನೆಯ್ದೆ ಸಲ್ ನೆಱೆವ ಕೀರ್ತಿಶ್ರೀಯೆನುತ್ತಿರ್ಪುದೀ ।
ಧರೆಯೊಳ್ ಶಾಂತಲದೇವಿಯಂ ನೆಱೆಯೆ ಬಣ್ಣಿಪ್ಪಾತನೇವಣ್ಣಿಪಂ ॥333॥

---

## 72 ಶ್ರವಣಬೆಳ್ಗೊಳ 117. 1123

ಇದರಲ್ಲಿ ಶುಭಚಂದ್ರದೇವನು ಸತ್ತಂತೆಯೂ, ಅವನ ಗುಡ್ಡ ದಂಡನಾಯಕ ಗಂಗರಾಜನು ನಿಸಿದಿಗೆಯನ್ನು ನಿಲಿಸಿದಂತೆಯೂ ಹೇಳಿದೆ.

### ದಿವಾಕರಣಂದಿ

ವರಭವ್ಯಾನನಪದ್ಮಮುಳ್ಳಲರಲಜ್ಞಾನೀಕನೇತ್ರೋತ್ಪಳಂ ।
ಕೊರಗಲ್ ಪಾಪತಮಸ್ತಮಂ ಪರೆಯಲೆತ್ತಂ ಜೈನಮಾರ್ಗಾಮಳಾಂ ॥
ಬರಮತ್ಯುಜ್ವಲಮಾಗಲೇಂ ಬೆಳಗಿತೋ ಭೂಭಾಗಮಂ ಶ್ರೀ ದಿವಾ ।
ಕರಣಂದಿವ್ರತಿವಾಕ್ ದಿವಾಕರಕರಾಕಾರಂಬೊಲುರ್ವೀನುತಂ ॥334॥

### ಗಂಡವಿಮುಕ್ತಮಳಧಾರಿದೇವ

ಗಂಡವಿಮುಕ್ತದೇವಮುಳಧಾರಿಮುನೀಂದ್ರರ ಪಾದಪದ್ಮಮಂ ।
ಕಂಡೊಡಸಾಧ್ಯಮೇಂ ನೆನೆದ ಭವ್ಯಜನಕ್ಕಿಮ ಕೊಂಡ ಜಂಡವೇ ॥
ದಂಡವಿರೋಧಿದಂಡನೃಪದಂಡಪತತ್ಪೃಥುವಜ್ರದಂಡಕೋ ।
ದಂಡಕರಾಳದಂಡಧರದಂಡಭಯಂ ಪೆಱಪಿಂಗಿ ಪೋಗವೇ ॥335॥

ಒಳಯುತರಂ ಬೞಿಲ್ಲುವ ಲತಾಂತಶರಂಗಿದಿರಾಗಿ ತಾಗಿ ಸಂ ।
ಚಳಿಸೆ ಪಳಂಚಿ ತೂಳ್ದವನನೋಡಿಸಿ ಮೆಯ್ಪುಗೆಯಾದ ದೂಸಱಿಂ ॥
ಕಳೆಯದೆ ನಿಂದ ಕರ್ಬುನದ ಕರ್ಗಿದ ಸಿಪ್ಪಿನಮುರ್ಕೆವೆತ್ತ ಕ ।
ತ್ತಳವೆಸಿಸಿತ್ತು ಪುತ್ತಡರ್ದ ಮೆಯ್ಯ ಮಳಂ ಮಳಧಾರಿದೇವರಾ ॥336॥

### ಶುಭಚಂದ್ರ

ಶುಭಚಂದ್ರಮುನೀಂದ್ರಯಶಃ । ಪ್ರಭೆಯೊಳ್ ಸರಿಯಾಗಲಾಱದಿಂತೀಚಂದ್ರಂ ।
ಪ್ರಭೆದೆಗೆದು ಕಂದಿ ಕುಂದಿದ । ನಭವಶಿರೋಮಣಿಗದೇಕೆ ಕಂದುಂ ಕುಂದುಂ ॥337॥

---

## 73 ತೇರ್ದಾಳದ ಶಾಸನ

## (ಇಂಡಿಯನ್ ಆಂಟಿಕ್ವರಿ XIV, 15). 1123

ಇವರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಸಾಮಂತ ಗೊಂಕದೇವನು ತಾನು ಪ್ರತಿಷ್ಠಿಸಿದ ನೇಮಿನಾಥದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ. ಅಂತ್ಯದಲ್ಲಿ ಅದೇ ದೇವರಿಗೆ ದಂಡನಾಯಕ ಭಾಯಿದೇವನು 1187 ರಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಲೋಕನ ಮಗ ಎರಗ

ಆತನ ನಂದನಂ ಚಲದೊಳಾರಘುನಂದನನೇಕವಾಕ್ಯವಿ ।
ಖ್ಯಾತಿಯೊಳರ್ಕನಂದನನನಿಂದಿತಶೌರ್ಯದೊಳಿಂದ್ರನಂದನಂ ॥
ನೀತಿಯೊಳಬ್ಜನಂದನನೆನಿಪ್ಪ ಮಹತ್ತ್ವಮನಪ್ಪುಕೆಯ್ದನು ।
ವಿನೀತಳದೊಳ್ ಬುಧರ್ ಪೊಗೞಲಿಂತೆಱಗೋರ್ವನರಂ ನಿರಂತರಂ ॥338॥

### ಗೊಂಕ

ಅಡಸುವ ಕುತ್ತುವೊತ್ತರಿಪ ಮಿತ್ತು ಕಡಂಗುವ ಮಾರಿ ಕೊಯ್ವಿನಿಂ ।
ತೊಡರ್ವ ವಿರೋಧಿ ಪಾಯ್ವ ಪುಲಿ ಪೊಯ್ವ ಸಿಡಿಲ್ ಪಿಡಿವುಗ್ರಪನ್ನಗಂ ॥
ಸುಡುವ ದವಾಗ್ನಿಬಾಧೆ ಕಡೆಗಣ್ಚುವುದೆಂದೊಡೆ ತೇರಿದಾಳದೀ ।
ಕಡುಗಲಿ ಗೊಂಕಭೂಪತಿಯ ಭವ್ಯತೆ ಕೇವಳಮೇ ನಿರೀಕ್ಷಿಸಲ್ ॥339॥

ಎತ್ತಿಸಿ ತೇರಿದ್ದಾಳದೊಳಗೊಪ್ಪೆ ಜಿನೇಶ್ವರಸದ್ಮಮುಂ ಸಮುಂ ।
ತೆತ್ತಿಸಿದಂ ಜಯಧ್ವಜಮನುರ್ವಿಗೆ ದಿಬ್ಮುಖದಂತಿದಂತದೊಳ್ ॥
ತೆತ್ತಿಸಿದಂ ನಿಜಾಂಕಮಹಿಮಾಕ್ಷರಮಾಳಿಕೆಯುಂ ಗಡೆಂದೊಡೇ ।
ನುತ್ತಮಭವ್ಯನೋ ಜಿನಮತಾಗ್ರಣಿ ಸದ್ಗುಣಿ ಗೊಂಕಭೂಭುಜಂ ॥340॥

### ಭಾಯಿದೇವನ ತಂದೆ ತೇಜಮ

* ಸಮುದಾರಿಕ್ಷಿತಿಭೃತ್ಕದಂಬಕದೊಳತ್ಯಾಭೀಳವಜ್ರಾಗ್ನಿತೇ ।
ಜಮನುನ್ಮತ್ತಮಹೀಶವಂಶವನದೊಳ್ ದುರ್ವಾರದಾವಾಗ್ನಿತೇ ।

---

* ಇದು ಪರೀಚಪಾದ ವೃತ್ತ.

ಜವುನನ್ಯೋರ್ವಿಪಸ್ಯೈನ್ಯಸಾಗರದೊಳುದ್ಯದ್ಬಾಡಬೋಗ್ರಾಗ್ನಿತೇ |
ಜವುನೋರಂತಿರೆ ತೋಱಿ ವಿಶ್ವಧರೆಗಿಂತೀಗಂಡಪೆಂಡಾರನ |
ಶ್ರಮದಿಂದಂ ವೆಱೆವಂ ನಿಜಪ್ರಬಳಬಾಹೂತೇಜಮಂ ತೇಜಮಂ ||341||

### ಭಾಯಿದೇವ

ಪರಭೂಭೃತ್ಕುಳಮಂ ತಗುಳ್ದು ಶರಣಾಯಾತರ್ಕಳಂ ಕಾದು ಪೂ |
ಣ್ದಿರೆದರ್ಗಿತ್ತು ಸಮಸ್ತದೇವಸದನಕ್ಕಂ ವಿಪ್ರಸಂಘಕ್ಕಮಾ |
ದರದಿಂ ಭೂಗೃಹದಾನಮಂ ದಯೆಯಿನಾದಂ ಮಾಡಿ ಕೀರ್ತ್ಯಂಗನಾ |
ವರನಾಗಲ್ ವಿಭು ಭಾಯಿದೇವಸಚಿವಂ ಬಲ್ಲಂ ಪೆಱರ್ ಬಲ್ಲರೇ ||342||
ಕಡಲನೆಡಗಲಿಸಿ ಶೇಷನ | ಪೆಡೆಯೊಳ್ ದಿಕ್ಕುಂಭಿಕುಂಭದೊಳ್ ಸುರಸಭೆಯೊಳ್ |
ಬಿಡದೆ ಕಲಿಭಾಯಿದೇವನ | ತೊಡವೆನಿಸಿದ ಕೀರ್ತಿ ನರ್ತಿಪಳ್ ನಲವಿಂದಂ ||343||

### ಫಲಸ್ತುತಿ

ಇದು ತಾನೈಹಿಕಪಾರಮಾರ್ಥಿಕಸುಖಕ್ಕಾವಾಸಮೀಧರ್ಮಮಿಂ |
ತಿದನುಲ್ಲಂಘಿಸಿದಾತನುಗ್ರನರಕೋದೀರ್ಣಾಂತಸಂವರ್ತಗ ||
ರ್ತದೊಳಾಱ್ಗಂ ಪರಿರಕ್ಷೆಗೆಯ್ವವನುಪೇಂದ್ರಾಹೀಂದ್ರದೇವೇಂದ್ರಸಂ |
ಪದದೊಳ್ ಕೂಡುಗುಮಲ್ಲಿಯುಂ ಪಡೆಗುಮಾಕಲ್ಪಾಯುಮಂ ಶ್ರೀಯುಮಂ ||344||

---

## 74 ಚೆನ್ನರಾಯಪಟ್ಟಣ 149. 1124

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ಶ್ರೀಪಾಲತ್ರೈವಿದ್ಯನಿಗೆ ಬಸದಿಯನ್ನು ಮಾಡಿ ಶಲ್ಯಗ್ರಾಮವನ್ನು ಕೊಟ್ಟಂತೆ ಹೇಳಿದೆ.

### ವಿನಯಾದಿತ್ಯ

ಯದುಕುಳಕುಳಾದ್ರಿಶಿಖರದೊ | ಳುದಯಿಸಿದಂ ದುರ್ನಿರೀಕ್ಷ್ಯತೇಜೋಽತ್ಯುತಸಂ |
ಪದರಾತಿರಾಜಮಂಡಲ | ನುದಾತ್ತಗುಣರತ್ನವಾರ್ಧಿ ವಿನಯಾದಿತ್ಯಂ ||345||

### ಎರೆಯಂಗ

ಆತನ ತನಯಂ ಸಕಳಮ | ಹೀತಳಸಾಮ್ರಾಜ್ಯಲಕ್ಷ್ಮಿಯುಂ ತನಗೇಕ |
ಶ್ವೇತಾತಪತ್ರವಾಗೆ ಪು | ರಾತನನೃಪರೆಣೆಗೆವಂದನೆಱೆಯಂಗನೃಪಂ ||346||

### ವಿಷ್ಣುವರ್ಧನ

ನೆನೆಯಲ್ ಪಾಪಕ್ಷಯಂ ನೋಡಿದೊಡಭಿಮತಸಂಸಿದ್ಧಿ ಸದ್ಭಕ್ತಿಯಿಂದಂ |
ಮನಮೊಲ್ದಾರಾಧಿಸಲ್ಕಾಸುಕೃತದೊದವನೇವೇಳ್ವುದೆಂಬನ್ನೆಗಂ ಮು ||
ನ್ನಿನ ಪುಣ್ಯಂ ವೀರರಪ್ಪಾನಳನಹುಷರೊಳನ್ಯೂನನಾದಂ ಜಗತ್ಪಾ |
ವನಸತ್ಯತ್ಯಾಗಶೌಚಾಚರಣಪರಿಣತಂ ವೀರವಿಷ್ಣುಕ್ಷಿತೀಶಂ ||347||

ಅದಿಯಮನೋಡಿದೋಟಮನೆ ಱೋಡಿಸಿ ಕಲ್ತು ನೃಸಿಂಹವರ್ಮನೋ |
ಡಿದನವನೋಟಮಂ ಗುಣಿಸಿ ಜೆಂಗಿರಿ ಜೆಂಗಿರಿಯಲ್ಲಿ ಕಲ್ತು ಕೊಂ ||
ಡದಟಿನ ಕೊಂಗರಾನೆಗಱಿದ್ದ ಕೊಂಗರನೀಕ್ಷಿಸಿ ಪಾಂಡ್ಯನೋಡಿದಂ |
ಯದುತಿಳಕಂಗೆ ವಿಷ್ಣುಧರಣೀಪತಿಗೋಡದರಾರ್ ಧರಿತ್ರಿಯೊಳ್ ||348||

### ಶ್ರೀಪಾಲತ್ರೈವಿದ್ಯ

ಹೃದ್ಯಸ್ಯಾದ್ವಾದಭೂಭೃದ್ಭವನನುಪಮಷಟ್ತರ್ಕಭಾಸ್ವನ್ನಖಂ ಪಾ |
ಯ್ದುದ್ಯದ್ದರ್ಪಾಂಧವಾದಿದ್ವಿರದನಘಟೆಯಂ ವಿಕ್ರಮಪ್ರೌಢಿಯಿಂದಂ ||
ವಿದ್ಯಾಸಿಂಹೀರತಿವ್ಯಾಪ್ತಿಯೊಳೆ ಸುಖಿಯಿಸುತ್ತಿರ್ಪುದುತ್ಸಾಹದಿಂ ತ್ರೈ |
ವಿದ್ಯಶ್ರೀಪಾಲಯೋಗೀಶ್ವರನೆನಿಪ ಮಹಾವಾದಿಮತ್ತೇಭಸಿಂಹಂ ||349||

ತಮಗಾಜ್ಞಾವಶಮಾದುದುನ್ನತಮಹೀಭೃತ್ಕೋಟಿ ತಮ್ಮಿಂದೆ ಬಿ |
ಣ್ಪಮದರ್ತ್ತೀಧರೆಗೆಯ್ದೆ ತಮ್ಮ ಮುಖದೊಳ್ ಷಟ್ತರ್ಕವಾರಾಶಿವಿ ||
ಭ್ರಮಮಾಪೋಶನಮಾತ್ರಮಾದುದೆನಲಿಂ ಮಾತೇನಗಸ್ತ್ಯಪ್ರಭಾ |
ವಮುಮಂ ಕೀೞ್ಪಡಿಸಿತ್ತು ಪೆಂಪಿನೆಸಕಂ ಶ್ರೀಪಾಲಯೋಗೀಂದ್ರನಾ ||350||

---

## ನರೇಂದ್ರದ ಶಾಸನ

### (ಎಪಿಗ್ರಾಫಿಯಾ ಇಂಡಿಕ XIII, 301). 1125

**ಇದರಲ್ಲಿ ಚಾಳುಕ್ಯರಾಜನಾದ ವಿಕ್ರಮಾದಿತ್ಯನ ಆಳಿಕೆಯಲ್ಲಿ ಕಾದಂಬಜಯಕೇಶಿದೇವನೂ ಅವನ ಹೆಂಡತಿ ಮೈಳಲದೇವಿಯೂ ಕುಂದೂರಲ್ಲಿ ದಂಡನಾಯಕಸಿಂಗರಸನು ಕಟ್ಟಿಸಿದ ಶಿವದೇವಸ್ಥಾನಕ್ಕೆಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಚಟ್ಟಯದೇವ

ಜಯಲಕ್ಷ್ಮೀನರ್ತಕೀನರ್ತನಪರಿಣತಶೈಲೂಷನುರ್ವೀವಧೂಟೀ |
ಪ್ರಿಯಭಾಸ್ವನ್ಮೌಕ್ತರತ್ನಂ ಭುವನಭವನದೀಪಾಯಮಾನಪ್ರತಾಪೋ ||

ದಯಃನುದ್ಯತ್ಪಕ್ಷಿಮಾಂಭೋನಿಧಿಪತಿ ಧರೆಯೊಳ್ ಬಾಪ್ಪು ಸಾಮಾನ್ಯನೇ ಜ |
ಟ್ಟಯದೇವಂ ದೇವರಾಜಪ್ರಕಟಿತವಿಭವಃ ಸ್ವೀಕೃತಾಶ್ಚರ್ಯ್ಯಶೌರ್ಯಂ ||351||

### ಭವ್ಯರಾಜನ ಹೆಂಡತಿ ಗಂಗಾದೇವಿ

ಸರಸತಿ ಸಹಚರಿ ವಿದ್ಯಾ | ಪರಿಣತಿಯಿಂ ತಂಗೆ ಗಂಗೆ ಶುದ್ಧತೆಯಿಂ ಭಾ |
ಸುರನೀತಿ ತನುಜೆ ತನಗಾ | ಚರಣದಿನೆನೆ ಗಂಗೆಯಂತು ನೋಂತರುಮೊಳರೇ ||352||

### ಸೋಮದಂಡನಾಯಕ

ಪ್ರವಿದಿತಕೌತ್ಸಗೋತ್ರಘನದುಗ್ಧಪಯೋಧಿಯೊಳುದ್ಭಲೀಲನು |
ದ್ಭವಿಸಿ ಕರಾಗ್ರಪೂರ್ಣತೆಗೆ ನಿರ್ಮಳಕಾಂತಿಗೆ ಲೋಕಲೋಚನೋ ||
ತ್ಸವಕೆ ಸುವೃತ್ತವೃತ್ತಿಗೆ ಬುಧಸ್ತುತಿಗಾಶ್ರಯಮಾಗಿ ಸೋಮನೀ |
ಭುವನಮನಾವಗಂ ನಿಜಯಶಃಪೃಥುಚಂದ್ರಿಕೆಯಿಂದೆ ತೀವಿದಂ ||353||

### ಸಿಂಹಚಮೂಪನ ಹೆಂಡತಿ ಮೈಳಲದೇವಿ

ಇನಿತು ಪೊಗೞ್ತೆಯಿಂ ತಳೆದ ಸಿಂಹಚಮೂಪನ ಪೆಂಪುವೆತ್ತ ಮಾ |
ನಿನಿ ನಿಜನಾಥನುನ್ನತಭುಜಕ್ಕೆ ಜಯಾಂಗನೆ ವಕ್ತ್ರಪಂಕಜ ||
ಕ್ಕನುಪಮವಾಗ್ವಧೂಟಿ ಸುಭಗತ್ವದೆ ಪೆರ್ಚಿದುರಸ್ಥಲಕ್ಕೆ ಸ |
ಜ್ಜನನುತಲಕ್ಷ್ಮಿ ತಾನೆನೆ ಕೃತಾರ್ಥೆಯೆ ಮೈಳಲದೇವಿ ಧಾತ್ರಿಯೊಳ್ ||354||
ಪರಿಜನಪಾರಿಜಾತಲತೆ ಬಂಧುಜನಾಮರಧೇನು ಧಾರಿಣೀ |
ಸುರುಚಿರಹೇಮವೃಷ್ಟಿ ಪತಿಭಕ್ತಿಧರಾತ್ಮಜೆ ಧರ್ಮ್ಮಹರ್ಮ್ಯಭಾ ||
ಸುರನವರತ್ನದೀಪಿಕೆ ದಯಾರಸವಾರ್ಧಿಸುಧಾಂಶುಲೇಖೆಯಿಂ |
ಬರನುತಿಗಳ್ಗಡರ್ಪನಿಪ ಮೈಳಲದೇವಿಗೆ ಮಯ್ಮೆಯೊಪ್ಪದೇ ||355||

---

## ✓75 ಸೊರಬ 141. 1127

**ಈ ವೀರಗಲ್ಲಿನಲ್ಲಿ ಚಾಳುಕ್ಯರಾಜನಾದ ಭೂಲೋಕಮಲ್ಲನ ಆಳಿಕೆಯಲ್ಲಿ ಕದಂಬತ್ಯೆಲಪನಿಗೂ ಪೆರ್ಮಾಡಿಸಾಂತರನಿಗೂ ಯುದ್ಧವಾದಾಗ ಬಮ್ಮಸಾಂತನು ಕಾದಿ ಸುರಲೋಕಪ್ರಾಪ್ತನಾದನೆಂದು ಹೇಳಿದೆ.**

ಕಡುಮುಳಿದು ಬಮ್ಮಸಾಂತಂ | ಕಡಿತಲೆ ಪಲಗೆಯುಮ ಕೊಂಡು ಸಾಂತರನಾಳಂ |
ಕಡಿಖಂಡಮಾಡಿ ಪೊಯ್ದೊಡೆ | ಕೆಡೆದುದು ಧಾರಿಣಿಯ ಮೇಲೆ ವೈರಿಸಮೂಹಂ ||356||

ರಣರಂಗಶೂದ್ರಕಂ ಬ | ಲ್ಕಣಿ ಸುಭಟಂ ಸೆಣಸುವರಿಬಲಂಗಳ ಶಿರಮಂ |
ಖಣಿಲೆನೆ ಪೊಯ್ದಾರ್ದಾಗಳೆ | ಪೆಣಮಯಮಾಯ್ತೆಂದು ನೋಂಕಿದರಿಬಲಮನಿತುಂ||

---

## 76 ಷಿಕಾರಿಪುರ 100. 1129

**ಇದರಲ್ಲಿ ಚಾಳುಕ್ಯರಾಜನಾದ ಭೂಲೋಕಮಲ್ಲನ (ಸೋಮೇಶ್ವರನ) ಆಳಿಕೆಯಲ್ಲಿ ಕದಂಬ ರಾಜನಾದ ತೈಲನು ದಕ್ಷಿಣಕೇದಾರ ಮಠಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ತೈಲಪ

ರಸೆಯಂ ರಸೆಗುಯ್ದಸುರನ|ನಸಮಭುಜಾಬಳದೆ ಸಮರಸಮಯದೊಳುರ್ಚಿ ಮ |
ರ್ದಿಸಿ ತಂದ ಚಕ್ರಿಯಂ ನೆನೆ | ಯಿಸುವಂ ಭುಜಬಳಮಹತ್ವದಿಂ ತೈಲನೃಪಂ ||358||

### ವಿಕ್ರಮಾದಿತ್ಯ

ನಿರುತಂ ಕೀರ್ತ್ತಿವೆಟ್ಟುಮುಂ ಮಾನಸಿಕೆಯ ದೆಸೆಯಂ ಬಿಟ್ಟು ಕೂರ್ಮಾವತಾರಂ|
ಬೆರಸಿಂತೀವಿಶ್ವವಿಶ್ವಂಭರೆಯನಸದಳಂ ತಾಳ್ದಿದಂದಿಂದಮಾದಾ ||
ಪರಿವಾದಕ್ಕಂಜಿ ತಾಂ ಮಾನಸಿಕೆಯನಧಿಕಂ ತಾಳ್ದಿ ಮೇಲಾಗಿ ವಿಶ್ವಂ |
ಭರೆಯಂ ನಿಃಕ್ಲೇಶದಿಂ ತಾಳ್ದಿದ ಹರಿಯೆನಿಪಂ ವಿಕ್ರಮಾದಿತ್ಯದೇವಂ ||359||

ಕಲಿಕಾಲಾವನಿಪಾಲಜಾಲಚಿರದೋರ್ವ್ಯಾಸೋಪಜಾತೋದ್ಧತಾ |
ಖಿಲಕಾಲುಷ್ಯಕಲಂಕಪಂಕಪಟಲಪ್ರಕ್ಷಾಳನಂ ಮಾಡಲೆಂ ||
ದೊಲವಿಂ ತೀರ್ಥಜಲಾವಗಾಹನವನಾದಂ ಮಾಡುತಿರ್ಪಂತೆ ನಿ |
ಚ್ಚಲುಮಿರ್ಪಳ್ ಜಯಲಕ್ಷ್ಮಿ ಖಡ್ಗಜಲದೊಳ್ ಚಾಳುಕ್ಯಚಕ್ರೇಶನಾ ||360||

ಅಳವಳಿದರಾತಿಭೂಪತಿ | ಗಳ ಬಳಗಂ ತಂದು ಕುಡುವ ಗಜಮದಧಾರಾ |
ಜಳದ ಹಯಂಗಳ ಲಾಲಾ|ಜಳದ ಪೊನಲ್ ಬಹುಳಮಾನೃಪೇಂದ್ರಾಲಯದೊಳ್ ||

ಮಾಳವಚೋಳಗೌಳಮಗಧಾಂಗತುರುಷ್ಕಕಳಿಂಗವಂಗಭೂ |
ಪಾಳಕರಂಜಿ ಬೆರ್ಚಿ ಬೆಸಕೆಯ್ದೊಸೆದೆಂದುದನೆಂದು ರಾಜ್ಯಸ ||
ಲ್ಲೀಲೆಯೊಳಿರ್ಪರಾನಱಿಯೆನಲ್ಲದೊಡಾಗಳೆ ದೇವರಾಜ್ಯಸ |
ಲ್ಲೀಲೆಯೊಳಾನೃಪೋತ್ತಮರನೆಯ್ದಿಪನೋವದೆ ಕುಂತಳೇಶ್ವರಂ ||362||

### ಸೋಮೇಶ್ವರ III

ಪುಟ್ಟುವುದುಂ ವಿರೋಧಿನೃಪಸಂತತಿಗಾರ್ತತೆ ತೊಟ್ಟೆನಲ್ ಕರಂ |
ಪುಟ್ಟಿದುದೆಲ್ಲಿಯುಂ ನಿಖಿಳಕುಂತಳಭೂತಳರಾಗವರ್ಧನಂ ||

ಪುಟ್ಟಿದುದಾವಗಂ ನೆಗೞ್ದ ಭಾರತಿಗಂದು ಸನಾಥತೋದಯಂ |
ಪುಟ್ಟಿದುದೆಂದೊಡಾರ್ ದೊರೆಗೆವರ್ಪರ್ ನೃಪಾಳಕರಾನ್ನೃಪಾಳನೊಳ್ ||363||

ಮಣಿಯದರಿನ್ನೃಪರ ಚೂಡಾ | ಮಣಿಯುಮನಾನ್ನೃಪರ ಕುಂಭಿಕುಂಭೋತ್ಥಲಸ |
ನ್ಮಣಿಯುಮನಣಿಯುರಮುಮನುಡೆ | ಮಣಿಗಟ್ಟಲ್ ಒಗೆವನಾತ್ಮಶೈಶವದಶೆಯೊಳ್ ||364||

ನಡೆಗಲಲೊಡರಿಸಲಾತಂ | ನಡೆಗಲಲೊಡರಿಸಿದರಹಿತರಡವಿಗೆ ಭಯದಿಂ |
ನುಡಿಗಲಲೊಡರಿಸೆ ಜೇಗಂ | ನುಡಿಗಲಲೊಡರಿಸಿದರರಿನ್ನೃಪರ್ ವನಚರರೊಳ್ ||365||

ಪೊಡೆಸೆಂಡಾಡುವ ಪದದೊಳ್ | ಪೊಡೆಸೆಂಡಂ ಪೊಡೆಯಲೊಲ್ಲದರಿನೃಪಶಿರಮಂ |
ಪೊಡೆಸೆಂಡಾಡುವಸಿರದೆಂ | ದೊಡೆ ಭುಜಬಳದಳವನವನೊಳಳೆವವನೊಳನೇ ||366||

ಸದಮಳರಾಗವಾರ್ಧಿರಸಪೂರ್ಣತೆ ವಿಕ್ರಮಚಕ್ರಿಗಾದುದಾ |
ದುದು ಮುಕುಳೀಕೃತತ್ವಮುಸುಹೃತ್ಕರಪಂಕರುಹಕ್ಕೆ ಜೇಗಮಾ ||
ದುದು ನಿಖಿಲೋರ್ವಿಗಾಯತದೃಗುತ್ಪಳಹಾಸಮಿದೆಂಬನಂ ಸಮಂ |
ತುದಯಮಹಾಮಹೀಧರಮನೇಱಿದನೊಪ್ಪಿರೆ ಸೋಮವಲ್ಲಭಂ ||367||

ಧರೆಯಂ ಪೊತ್ತಿರ್ದು ಭಾರಾನ್ವಿಪಗಮವಿವಶಂ ಭೋಗಮಂ ಕಾಣನೆಂದುಂ |
ನಿರುತಂ ಭೋಗೀಶನೆಂದುಂ ತಱಿದುದು ಧರೆಯಂ ಪೊತ್ತು ಬೆಕ್ಕ ಕೂರ್ಮರಾಜಂ.||
ಗಿರದಿನ್ನಾಪ್ರಾಣಿಗಳ್ ವಿಶ್ರಮಿಸುಗೆ ಸುಖದಿಂದೆಂಬವೋಲ್ ವಿಶ್ವವಿಶ್ವಂ |
ಭರೆಯಂ ದೋರ್ದಂಡದೊಳ್ ತಾಳ್ದಿದನತುಳಬಳಂ ಸೋಮಚಾಳುಕ್ಯಭೂಪಂ||368||

ಶ್ರೀಕಾಂತಾರಮ್ಯಪರ್ಯ್ಯಂ ನೆಗೞ್ದ ನಿಜಮಹೋರಸ್ಥಳಂ ಚಾರುವೀರ |
ಶ್ರೀಕಾಂತಾಕೇಳಿಶುಂಭನ್ಮಣಿಮಯಭವನಂ ನೈಜತೀವ್ರಾಸಿ ವಿದ್ಯಾ ||
ಶ್ರೀಕಾಂತಾಲಾಸ್ಯರಂಗಂ ನಿಜಮುಖಕಮಳಂ ನಿಚ್ಚಮೆಂಬನ್ನೆಗಂ ಧಾ |
ತ್ರೀಕಾಂತಂ ತಾಳ್ದಿದಂ ಶ್ರೀಗಳನತುಳಬಳೋದ್ಭಾಸಿ ಭೂಲೋಕಮಲ್ಲಂ ||369||

ವಿನತಾರಾತಿನೃಪಾಳಮೌಳಿಮಣಿಗಳ್ ನಕ್ಷತ್ರಮಾತ್ಮೀಯಕೀ |
ರ್ತಿ ನವಾಭ್ಯನ್ನತಚಂದ್ರಿಕಾಪ್ರಸರವೋರಂತಸ್ತತಾಪಂ ಜಗ ||
ಜ್ಜನಮೆಲ್ಲಂ ಸುಚಕೋರಕಾವಳಿಯೆನಲ್ ಸೋಮಾಖ್ಯೆ ಭೂಚಕ್ರದೊಳ್ |
ತನಗನ್ಸ್ಪರ್ಧಮೆನಲ್ ವಿರಾಜಿಸಿದಮಂ ಸೋಮೇಶ್ವರೋರ್ವೀಶ್ವರಂ ||370||

ಸ್ವಕಳಾಳೀದಾನದಿಂದಂ ವಿಬುಧತತಿಗತಿಪ್ರೀತಿಯಂ ಮಾಱಿಪ್ಪೊಡಂ ಶೀ |
ತಕರಂ ಶ್ರೀಕಂಠಭೂಷಾಮಣಿ ಕುವಳಯಸಂತರ್ಪಣಾಧಾಯಿಯೆಂದಿಂ ||

ತು ಕರಂ ಸಂಸ್ತುತ್ಯನಾಗಿರ್ಪೊಡಮೆಸೆವ ವಿನಿರ್ದೋಷನೊಳ್ ನಿಷ್ಕಳಂಕ |
ಪ್ರಕರಪ್ರಖ್ಯಾತನೊಳ್ ತಾಂ ಸಮನೆನಿಪನೆ ಪೇಱ್ ಸೋಮನೊಳ್ ವ್ಯೋಮ
ಸೋಮಂ ||371||

ಅರಿಭೂಪರ ತೇಜದ ದ | ಳ್ಳುರಿ ಮುಱ್ಗುವುದೊರ್ಮೆ ತನ್ನ ಪೆಸರ್ಗೊಳಲೇನ |
ಚ್ಚರಿವಡೆದುದೊ ಜಗದೊಳ್ ಘೀ | ಕರತರತರವಾರಿವಾರಿ ಸೋಮೇಶ್ವರನಾ ||372||

ಕುಂತಳಮಾತ್ಮವಲ್ಲಭೆಯ ಕುಂತಳಮೊಪ್ಪುವ ಕಾಂಚಿ ಕಾಂಚಿ ಶು |
ದ್ಧಾಂತನಿತಂಬಿನೀಜನದ ಧಾರೆ ನಿಜೋನ್ನತದಾನಧಾರೆಯಿಂ ||
ಬಂತಿರೆ ಸುತ್ತಲುಂ ಸಲೆ ನಿಮಿರ್ಚಿ ನಿಜೋಗ್ರಭುಜಪ್ರತಾಪಮಾ |
ಶಾಂತಮನೆಯ್ದೆ ಪಾಲಿಸಿದನುರ್ವಿಯನೊರ್ವನೆ ಸೋಮವಲ್ಲಭಂ ||373||

## ತೈಲ

ಶ್ರೀಮತ್ಕದಂಬವಂಶಶಿ | ಖಾಮಣಿ ಮಂಡಳಿಕಮುಕುಟವಿಭ್ರಾಜಿತಚೂ |
ಡಾಮಣಿ ವಿದ್ವಜ್ಜನಚಿಂ | ತಾಮಣಿ ಧೈರ್ಯಪ್ರಸಿದ್ಧಶೈಲಂ ತೈಲಂ ||374||

## ಬಳ್ಳಿಗಾವೆ

ಅದು ವಿಬುಧೈಕವಾಸಮಮರಾವತಿಯಂತತಿಭೋಗಿಸೇವ್ಯಮಂ |
ತದು ಪೆಸರ್ವೆತ್ತು ರಂಜಿಸುವ ಭೋಗವತೀಪುರದಂತೆ ಭಾವಿಸ ||
ಲ್ಕದು ಧನದಪ್ರಸೇವ್ಯಮಳಕಾಪುರದಂತೆನೆ ಬಳ್ಳಿಗಾವೆಗಾ |
ವುದೊ ಪಡಿ ಪಟ್ಟಣಂ ನೆಗೞ್ದ ವಾರ್ಧಿಪರೀತಸಮಸ್ತಧಾತ್ರಿಯೊಳ್ ||375||

## ಬಳ್ಳಿಗಾವೆಯ ವರ್ತಕರು

ಕಿಡುವೊಡಮೆಯನೊಂದನೆ ಕೊ|ಟ್ಟಿಡೆಮಡಗದಿಪಂ ಪರಂಗಳೆಂಬೆರಡುಮನಂ |
ಗಡಿಯೊಳ್ ಕಿಡದೊಡಮೆಯನಡಿ|ಗಡಿಗಾರ್ಜಿಪರಲ್ಲಿ ನೆಗೞ್ದ ನಗರಜನಂಗಳ್||376||

ಸುರಪತಿಯಂತೆ ಸರ್ವವಿಬುಧಾಶ್ರಯರಿಂದ್ರಗಜೇಂದ್ರದಂತೆ ಭಾ |
ಸುರತರದಾನಸಂಪದಧಿಕೋನ್ನತರಿಂದುವಿನಂತೆ ಸತ್ಕಲಾ ||
ಧರರಹಿರಾಜನಂತೆ ನಿಖಿಲಕ್ಷಮೆಗಾಸ್ಪದರೆಂದೊಡೀಗಳಾರ್ |
ದೊರೆಯರೊ ಬಳ್ಳಿಗಾವೆಯ ಮಹಾನಗರಂಗಳೊಳೀಧರಿತ್ರಿಯೊಳ್ ||377||

ಕರಿಗೆ ರಥನಂ ಭಯಂಕರ | ಖರದಂಷ್ಟ್ರಾಂಕುರಮಿಭಾರಿಗುನ್ನತಪಕ್ಷಂ |
ಶರಭರಿಪುಗಾದುದೆಂಬಂ | ತಿರಲೆಸೆವರ್ ಪ್ರಭುಗಳಲ್ಲಿ ತತ್ಪತ್ತನದೊಳ್ ||378||

## 77 ಮೂಡಗೆರೆ 22. 137.

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಗಳು ಹರಿಯಬ್ಬೆ ಜಿನಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿಷ್ಣುವರ್ಧನ

ಪ್ರಕಟಾಟೋಪದ ಚಕ್ರಗೊಟ್ಟದೊಡೆಯಂ ಸೋಮೇಶ್ವರಂ ಬಳ್ಕಿ ತ |
ನ್ನ ಕರಾಳಾಸಿಯ ಘೂರ್ಪನೇಂ ಮೆಱೆದನೋ ಗೌಡಾಂಧಕಾರಪ್ರಚಂ ||
ಡಕರಂ ಮಾಳವಮೇಘಜಾಳಪವನಂ ಚೋಳೋಗ್ರಕಾಳಾನಳಂ |
ತ್ರಿಕಳಿಂಗತ್ರಿಪುರತ್ರಿಣೇತ್ರನದಟಂ ಶ್ರೀವಿಷ್ಣುಭೂಪಾಳಕಂ||379||

### ವಿಷ್ಣುವರ್ಧನನ ಮಗ ಕುಮಾರಬಲ್ಲಾಳ

ಕಳಕೆ ಬಯಲ್ಗೆಕ್ಕತುಳ | ಕ್ಕೆಳೆಯೊಳ್ ಮಾಱಾಂಪರಿಲ್ಲದಾದಿಗಧಿಪರಂ |
ಸೆಳೆದು ನೆಲಕ್ಕಿಕ್ಕಲ್ಕ | ವ್ವಳಿಪುದು ರಿಪುನೃಪಕುಮಾರಭೈರವನ ಮನಂ ||380||
ಆವಂಗಮಾವ ಧನಮುಮ | ನೀವ ಮಹಾದಾನಿ ಯುದ್ಧವಿಜಯಮನಾಮಾ |
ದೇವಂಗಮೀಯದದಟರ | ದೇವಂ ಬಲ್ಲಾಳದೇವನಪ್ರತಿಮಬಳಂ ||381||

### ಹರಿಯಬ್ಬೆ

ಹರಿಕಾಂತೆಯುಮೀಕಾಂತೆಯ | ದೊರೆಗೆವರಲ್ಕಾಱಳೆಂಬ ನಿಮ್ಮದದ ಗುಣೋ |
ತ್ಕರಮನೊಳಕೊಂಡು ಹರಿಯಬೆ| ಪರಹಿತದಿಂ ಧರೆಯೊಳೆಯ್ದೆ ಜಸಮಂ ತಳೆದಳ್||382||

### ಹರಿಯಬ್ಬೆಯ ಗಂಡ ಸಿಂಗ

ಪರಬಳದಾನವಸಂಹಾ | ರಾರುಣಜಳಲಿಪ್ತಖಡ್ಗನುತ್ತತತೇಜಂ |
ವರವಿಬುಧವಿಭವವಿಭವಂ | ಹರಿಕಾಂತಾಕಾಂತನೆಸೆದಪಂ ವಿಭುಸಿಂಗಂ ||383||

---

## 78 ಚಿಕ್ಕಮಗಳೂರು 137. 1130

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ವಿಷ್ಣುದಂಡಾಧಿಪನಿಂದ ನಿರ್ಮಿತವಾದ ಕೇಶವದೇವಸ್ಥಾನಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ವಿಷ್ಣುವರ್ಧನ

ಅಣೆವುದು ಚೋಳನಂ ಖಸನನಂಜಿಸುತಿರ್ಪುದು ಮಾಳವೇಶನೊಳ್ |
ಸೆಣಸುವುದಂಗರಾಜನನದಿರ್ಪುವುದಂತೆ ಕಳಿಂಗರಾಜನಂ ||

ನೊಣೆವುದು ಕೇರಳೇಶ್ವರನನಂಡಲೆವುಗ್ರಸಮಗ್ರದರ್ಪದಿಂ |
ಕುಣಿವುದು ತೇಜದೇೞ್ಗೆ ಪರಿದೆಲ್ಲಿಯುಮೆಯ್ದುರೆ ವಿಷ್ಣುಭೂಪನಾ ||384||

### ಬೋವರ್ಕಳ್

ಪಿರಿಯಂ ಪೆಂಪಿನ ತಿಣ್ಪಿನೊಳ್ ಪಿರಿಯನತ್ಯಾಶ್ಚರ್ಯಕಾರ್ಯಂಗಳೊಳ್ |
ಪಿರಿಯಂ ಬ್ರಾಹ್ಮಣಭಕ್ತಿಯೊಳ್ ಪಿರಿಯನಾದಂ ಧರ್ಮಕರ್ಮಂಗಳೊಳ್ ||
ಪಿರಿಯಂ ಸಜ್ಜನಸೇವೆಯೊಳ್ ಪಿರಿಯನಾಸೌಜನ್ಯಸಂಪತ್ತಿಯೊಳ್ |
ಪಿರಿಯಂ ತಾನೆನೆ ಮಾದಿಬೋವನವೊಲಾವಂ ಧನ್ಯನೀಧಾತ್ರಿಯೊಳ್ ||385||

ಪರಿಕಿಸೆ ಕರ್ಣನಿಂ ಖಚರನಾಯಕನಿಂ ದಿವಿಜೇಂದ್ರಪುತ್ರನಿಂ |
ಪಿರಿಯನೆನಿಪ್ಪನುದ್ಧತರದಾನದೊಳಾರ್ಪಿನೊಳೆಯ್ದೆ ಗಂಡಿನೊಳ್ ||
ಧರೆ ಪೊಗೞ್ವಂತು ಬೇಡಿದವರ್ಗಿತ್ತು ಶರಣ್ಬುಗೆ ಕಾದು ಶತ್ರುವಂ |
ಧುರಧರೆಯೊಳ್ ತಗುಳ್ದು ಯದುವಂಶನೃಪಾಳನ ಬೋವ ಬಾಸೆಯಂ ||386||

ನಯದಿಂ ಸ್ವಾಮಿಯ ಚಿತ್ತಮಂ ವಿನಯದಿಂ ದೇವದ್ವಿಜಶ್ರೇಣಿಯಂ |
ಭಯದಿಂ ಬಂಧುಗಳಂ ಸಮಂತಭಯದಿಂ ಸದ್ಭೃತ್ಯರಂ ಮೆಚ್ಚಿಪಂ ||
ಸುಯಶೋಭೂಷಣನತ್ಯುದಾರಚರಿತಪ್ರಸ್ತುತ್ಯನಿತ್ಯೋದಯಾ |
ಶ್ರಯನೀವೊನ್ನೆಯನಾಯಕಂ ಬುಧಮನಸ್ಸಂತೋಷಸಂದಾಯಕಂ ||387||

ಶ್ರೀ ವಿನಯಂ ವಿವೇಕಮಳವುನ್ನತಿ ಕೀರ್ತಿ ಜಲಂ ಪ್ರಭುತ್ವಮಾ |
ರ್ತೀವಳವಣ್ಮು ಸತ್ಯಮೆಸಕಂ ದಯೆ ನೀತಿಗಳೆಂತುಮಾವಗಂ ||
ಭಾವಿಪೊಡೊಂದುಗುಂದದಿವನೊಳ್ ನೆಲಸಿರ್ದಪುವೆಂದೊಡಣ್ಣ ಪೇ |
ೞೀವೊಗೞ್ದಪ್ಪುದೀಹರಿಯಬೋವನನುದ್ಧತವೈರಿದಾವನಂ ||388||

ವಿನಯವಿಲಾಸಿಯೆನ್ನ ಗುಣಿಯೆನ್ನ ದಯಾಪರನೆನ್ನ ಶೌಚಿಯೆ |
ನ್ನ ಸಿರುತಮೆಲ್ಲರಿಂ ಸುಜನನೆನ್ನ ಕರಂ ಕಲಿಯೆನ್ನ ಸತ್ಯದೊ ||
ಳ್ಪಿನ ನೆಲೆಯೆನ್ನ ನೀಂ ಪೊಗೞ್ವೊಡೆಂತುಟಿಲೇ ಬುಧ ಚಿಕ್ಕಮಾದಿಬೋ |
ವನಸೊಲಿದಾರ್ಗಮೀವನನಸೆಲೇ ಮಱೆವೊಕ್ಕರನೊಲ್ದು ಕಾವನಂ ||389||

ಗುಣಿಯೆಂಬುದು ಬುಧಚಿಂತಾ | ಮಣಿಯೆಂಬುದು ಧರ್ಮಕಾರ್ಯತಾತ್ಪರ್ಯದೊಳ |
ಗ್ರಣಿಯೆಂಬುದು ಗೋತ್ರಶಿಖಾ|ಮಣಿಯೆಂಬುದು ಮಾಚಬೋವನಂ ಭೂಭುವನಂ ||

## 79 ಶ್ರವಣಬೆಳ್ಗೊಳ 143. 1131

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಿಷಿ ಶಾಂತಲದೇವಿ ಶಿವಗಂಗೆಯಲ್ಲಿ ಸತ್ತಳೆಂದು ಹೇಳಿದೆ.**

**ವಿನಯಾದಿತ್ಯ**

ಇಟ್ಟಿಗೆಗೆಂದಗೞ್ದ ಕುೞಿಗಳ್ ಕೆಱೆಯಾದುವು ಕಲ್ಗೆಗೊಂಡ ಪೆ |
ರ್ವೆಟ್ಟು ಧರಾತಳಕ್ಕೆ ಸರಿಯಾದುವು ಸುಣ್ಣದ ಭಂಡಿ ಬಂದ ಪೆ ||
ರ್ವಟ್ಟೆಯೆ ಪಳ್ಳಮಾದುವೆನೆ ಮಾಡಿಸಿದಂ ಜಿನರಾಜಗೇಹಮಂ |
ನೆಟ್ಟನೆ ಪೊಯ್ಸಳೇಶನೆನೆ ಬಣ್ಣಿಪರಾರ್ ಮಲೆರಾಜರಾಜನಂ ||391||

**ವಿಷ್ಣುವರ್ಧನ**

ಎಳೆಯೊಳ್ ದುಷ್ಕರನುದ್ಧತಾರಿಗಳನಾಟಂದೊತ್ತಿ ಬೆಂಕೊಂಡು ದೋ |
ರ್ಬಳದಿಂ ದೇಶಮನಾವಗಂ ತನಗೆ ಸಾಧ್ಯಂಮಾಡಿರಲ್ ಗಂಗಮಂ ||
ಡಳಮೆಂದೋಲೆಗೆ ತೆತ್ತುಮಿತ್ತು ಬೆಸನಂ ಪೂರ್ಣ್ಪಿರ್ಪಿನಂ ವಿಷ್ಣುಪೊ |
ಯ್ಸಳನಿರ್ದಂ ಸುಖದಿಂದೆ ರಾಜ್ಯದೊದವಿಂದಂ ಸಂತತೋತ್ಸಾಹದಿಂ ||392||

ಎತ್ತಿದನೆತ್ತಲತ್ತಲಿದಿರಾದ ನೃಪಾಳಕರಳ್ಕಿ ಬಳ್ಕಿ ಕಂ |
ಡಿತ್ತು ಸಮಸ್ತವಸ್ತುಗಳನಾಳ್ತನಮಂ ಸಲೆ ಪೂಣ್ದು ಸಂತತಂ ||
ಸುತ್ತಲುಮೋಲಗಿಪ್ಪರೆನೆ ಮುನ್ನಿನವರ್ಗಮನೇಕರಾದವ |
ರ್ಗತ್ತಳಗಂ ಪೊಗೞ್ತೆಗೆಸೆ ಬಣ್ಣಿಪನಾವನೊ ವಿಷ್ಣುಭೂಪನಂ ||393||

**ಶಾಂತಲದೇವಿಯ ತಾಯಿ ಮಾಚಿಕಬ್ಬೆ**

ದಾನಮನನೂನಮಂ ಕೆ | ಕೇನಾರ್ಥಿಗೀ ಎಂದು ಕೊಟ್ಟು ಜಿನನಂ ಮನದೊಳ್ |
ಧ್ಯಾನಿಸುತುಂ ಮುಡಿಪಿದಳ್ | ನ್ನೇನೆಂಬುದೊ ಮಾಚಿಕಬ್ಬೆಯೊಂದುನ್ನತಿಯಂ ||394||

---

## 80 ಚೆನ್ನರಾಯಪಟ್ಟಣ 248. 1133

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ದಂಡನಾಯಕ ಗಂಗರಾಜನ ಮಗ ಬೊಪ್ಪದೇವ ಮುಂತಾದವರು ಬೆಳ್ಗಲಿಯ ಗಂಗೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಗಂಗರಾಜ

ಅದಟಾಪೂರ್ಣ್ಣತಿ ಸತ್ಯಮಂತಚಲಧೈರ್ಯ್ಯಂ ಶೌಚಮೌದಾರ್ಯ್ಯಮು |
ಣ್ಮು ದಿಟಂ ತನ್ನೊಳೆ ನಿಂದುವೆಂಬ ಗುಣಸಂಘಾತಂಗಳಂ ತಾಳ್ದಿ ಲೋ ||
ಕದ ವಂದಿಪ್ರಕರಂಗಳಂ ತಣಿಪಿ ಕಃ ಕೇಸಾರ್ಥಿಯೆಂದಿತ್ತು ಚಾ |
ಗದ ಪೆಂಪಿಂದಮೆ ಗಂಗರಾಜನೆಸೆದಂ ವಿಶ್ವಂಭರಾಭಾಗದೊಳ್ ||395||

### ಬೊಪ್ಪದಂಡಾಧಿಪ

ಮಲೆವತ್ಯುದ್ಧತದೇಶಕಂಟಕರನಾಟಂದೊತ್ತಿ ಬೆಂಕೊಂಡು ದೋ |
ರ್ಬ್ಬಲದಿಂ ಕೊಂಗರನೊತ್ತಿ ವೈರಿನೃಪರಂ ಬೆನ್ನಟ್ಟಿ ತೂಳ್ದನ್ಯಮಂ ||
ಡಲಮಂ ತತ್ಪತಿಗೆಯ್ದೆ ಮಾಡಿ ಜಗದೊಳ್ ಬೀರಕ್ಕೆ ತಾನಿಂತಗುಂ |
ದಲೆಯಾದಂ ಕಲಿಗಂಗನಗ್ರತನಯಂ ಶ್ರೀಬೊಪ್ಪದಂಡಾಧಿಪಂ ||396||

---

## 81 ಬೇಲೂರು 124. 1133

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ತನ್ನ ದಂಡನಾಥ ಗಂಗರಾಜನ ಮಗ ಬೊಪ್ಪನು ದೋರಸಮುದ್ರದಲ್ಲಿ ಕಟ್ಟಿಸಿದ ಪಾರ್ಶ್ವನಾಥಬಸ್ತಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿನಯಾದಿತ್ಯ

ಸತ್ಕುಳದೊಳಗಿಂದು ಮಹೀ | ಭೃತ್ಕುಳದೊಳಗಚಳನಾಥನೆಸೆವಂತೆಸೆದಂ |
ತತ್ಕುಳದೊಳ್ ವಿಜಿತಾರಿಕು | ಭೃತ್ಕುಳನಾದಿತ್ಯಮೂರ್ತಿ ವಿನಯಾದಿತ್ಯಂ ||397||

### ಎರೆಯಂಗ

ತದಪತ್ಯಂ ರಿಪುನೃಪಭುಜ | ಮದಮರ್ದನನಖಿಳವಿಬುಧಜನತಾಸೌಖ್ಯ |
ಪ್ರದನುದಿತೋದಿತಮಹಿಮಾ | ಸ್ಪದನೆನಿಪೆಱೆಯಂಗಭೂಪನಂಗಜರೂಪಂ ||398||
ಎಱೆಯಂಗನ ಕೂರಸಿ ತಲೆ | ಗೆಱಗದ ಮುನ್ನಱಿದು ಬಂದು ಪದಕೆಱಗದವರ |
ಪಱಿಯೆ ತಲೆ ಮುಱಿಯೆ ಸಿಟ್ಟೆ | ಲ್ವೊಱೆದುಗೆ ಬಿಸುನೆತ್ತರೆಱಗದಿರ್ಪರೆ
ಧುರದೊಳ್ ||399||

### ವಿಷ್ಣುವರ್ಧನ

ಅಂತವರೊಳ್ ವಿಷ್ಣುಮಹೀ | ಕಾಂತಂ ನಿಮಿರ್ದೆಸೆಯೆ ಕೂರ್ಪುಮಾರ್ಪುಂ
ಜಸಮಾ |
ದಂ ಪೊಳಗಿ ಬೆಳಗೆ ಪೆರ್ಮೆಯ | ನಾಂತಂ ನಳನಹುಷಭರತಚರಿತಪ್ರತಿಮಂ ||400||

ಸ್ಥಿರಮಾಗಿ ವಿಷ್ಣುವರ್ಧನ | ಧರಣೀಪಾಲಂಗೆ ಪಟ್ಟಮಾಗಲೊಡಂ ಸಾ |
ಗರದಂತನಹಿತಧರಣೀ | ಶ್ವರರೊಡನೆಯ್ದಿತ್ತು ವಿಶದಕೀರ್ತಿಪ್ರಸರಂ ||401||

ಪೊಸರದೆ ಸಾಧ್ಯಮಾಯ್ತು ಮಲೆಯೆಲ್ಲಮುಮಾತುಳುದೇಶಮೆಲ್ಲಮುಂ |
ನಡೆಯೆ ಕುಮಾರನಾಡು ತಳಕಾಡುಗಳೆಂಬಿವು ಕೆಯ್ಗೆ ಸಾರ್ದುವ ||
ತ್ತಡಿಯಿಡೆ ಮುಂಚಿ ಕಂಚಿ ಬೆಸಕೆಯ್ವುದು ವಿಷ್ಣುನೃಪಂ ಕೃಪಾಣಮಂ |
ಒಡಿಯದ ಮುನ್ನೆ ಕೋಂಗನೃಪರಿಸ್ತರಿಭಂಗಳನೇಂ ಪ್ರತಾಪಿಯೋ ||402||

ಚೋಳನೃಪಾಳಪಾಂಡ್ಯನೃಪಕೇರಳಭೂಪಭುಜಾವಲೇಪವಿ |
ಸ್ಫಾಳನನಂಧ್ರಗಂಧಗಜಕೇಸರಿ ಲಾಟವರಾಟಧಾರಿಣೀ ||
ಪಾಳಘನಾನಿಳಂ ಕದನಶೂರಕದಂಬವನಾಗ್ನಿ ವಿಷ್ಣುಭೂ |
ಪಾಳನವಾರ್ಯಶೌರ್ಯನಿಧಿಯಾತನ ಶೌರ್ಯಮನಾರೊ ಕೀರ್ತಿಪರ್ ||403||

ನಿರುಪಮಿತಾಂಗಿಯುಂ ರುಚಿರಕುಂತಳೆಯುಂ ನುತಮಧ್ಯೆಯುಂ ಮನೋ |
ಹರತರಕಾಂಚಿಯುಂ ಧೃತಸರಸ್ವತಿಯುಂ ವಿಳಸದ್ವಿನೀತೆಯುಂ ||
ಸ್ಫುರದುರುಕೀರ್ತಿಮುನ್ಮಧುರೆಯುಂ ಸ್ಥಿರಮಾಗಿರೆ ತನ್ನ ತೋಳೊಳೊ |
ಲ್ದಿರಿಸಿದನುರ್ವರಾಂಗನೆಯುನಪ್ರತಿಮಂ ವಿಭು ವಿಷ್ಣುಭೂಭುಜಂ ||404||

### ವಿಷ್ಣುವರ್ಧನನ ದಂಡನಾಥ ಗಂಗರಾಜ

ನುಡಿ ತೊದಳಾದೊಡೊಂದು ಪೊಣರ್ದಂಜಿದೊಡಂತೆರಡನ್ಯನಾರಿಯೊಳ್ |
ನುಡಿಗೆಡೆಯಾಗೆ ಮೂಱು ಮಱೆವೊಕ್ಕರನೊಪ್ಪಿಸೆ ನಾಲ್ಕು ಜೇಡಿದಂ ||
ಪಡೆಯದೊಡಯ್ದು ಕೂಡಿದೆಡೆ ಪೋಗದೊಡಾಱಧಿಪಂಗೆ ತಪ್ಪಿ ಬ |
ಱಿಕ್ಕೊಡೆಗಡಿಪೇೞುಮೇೞು ನರಕಂಗಳಿವೆಂದಪನಲ್ತೆ ಗಂಗಣಂ ||405||

### ಗಂಗರಾಜನ ಮಗ ಬೊಪ್ಪ

ಪರಮಾರ್ಥಂ ವಿದ್ವದರ್ಥಂ ತವಿಸದನ ಧನಂ ವ್ಯರ್ಥಮೆಂದರ್ಥಿಸಾರ್ಥಂ |
ನಿರವದ್ಯಂ ಜ್ಞಾತವಿದ್ಯಂ ದಳಿತರಿಪುಮನೋದ್ಯಂ ತಿರಸ್ಕಾರಿತಾದ್ಯಂ ||
ಧರೆ ತನ್ನಂ ಕೀರ್ತಿಪನ್ನಂ ವಿಬುಧತತಿಗೆ ಪೊನ್ನಂ ವಿಪಶ್ಚಿತ್ಪ್ರಸನ್ನಂ |
ಕರೆದೀವಂ ಬೊಪ್ಪದೇವಂ ಸಮರಮುಖದಶಗ್ರೀವನುದ್ಯತ್ಪ್ರಭಾವಂ ||406||

ಸಮರಾಯಾತಾಹಿತಕ್ಷೋಣಿಭೃದತುಳಬಳೋದ್ಯಾನದೊಳ್ ಘಾವಕಾನು |
ಕ್ರಮದಿಂದಂ ಕ್ರೀಡಿಸುತ್ತುಂ ರಿಪುನೃಪತಿಶಿರಃಕಂದುಕಕ್ರೀಡಿತಂ ತ ||

ತ್ಸಮಯೋದ್ಭೂತಾರುಣಾಂಭೋಭರಿತಸಮರಧಾತ್ರೀಸರೋಮಧ್ಯದೊಳ್ ವಿ ।
ಕ್ರಮಲಕ್ಷ್ಮೀಲೋಲನೋಲಾಡುವನೆರೆದ ಬುಧರ್ಗಪ್ಪ ದಂಡೇಶಬೊಪ್ಪಂ ||407||
ಲೋಭಿಗಳಂ ಪೋಲಿಪುದೆ ಯ । ಶೋಭಾಜನನಪ್ಪ ಬೊಪ್ಪದಂಡೇಶನೊಳಿ ।
ನ್ನೀಭೂಭುವನದೊಳಾಹಾ । ರಾಭಯಭೈಷಜ್ಯಶಾಸ್ತ್ರದಾನೋನ್ನತಿಯಿಂ ||408||
ಜಳಜಭವಂಗಮಿಂತು ಬರೆಯಲ್ ಕಡೆಯಲ್ ಕರುವಿಟ್ಟು ಗೆಯ್ಯಲ ।
ತ್ತಳಗವೆನಿಪ್ಪುದಂ ತೊಳಪ ಬೆಳ್ಳಿಯ ಬೆಟ್ಟನೆ ಪೋಲ್ವುದಂ ಜಗ ||
ತ್ತಿಳಕಮನೀಜಿನಾಲಯಮನೆತ್ತಿಸಿದಂ ವಿಭು ಬೊಪ್ಪದೇವನ ।
ಗ್ಗಳಿಕೆಯ ರಾಜಧಾನಿಗಳೊಳೊಪ್ಪುವ ದೋರಸಮುದ್ರಮಧ್ಯದೊಳ್ ||409||

**ನಾರಸಿಂಹ I**

ಭೂಭೃತ್ಪತಿ ಮದಕರಿಹರಿ । ಶೋಭಾಸ್ಪದನಜಳತಾಸಮುತ್ತುಂಗಂ ಶ್ರೀ ।
ಪ್ರಾಭವನುದಿತಾಖಂಡಳ । ವೈಭವನೇಂ ಗೋತ್ರತಿಳಕನಾದನೊ ಪುತ್ರಂ ||410||

---

## 82 ನಾಗಮಂಗಲ 3. 1134

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಿಷಿ ಬಮ್ಮಲದೇವಿ ನಾಗಮಂಗಲದ ಶಂಕರನಾರಾಯಣದೇವಾಲಯವನ್ನು ಜೀರ್ಣೋದ್ಧಾರಮಾಡಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.**

**ಬಮ್ಮಲದೇವಿ**

ಪಲ್ಲವಕುಲಮದೆ ಪಾಲ್ಗಡ । ಲಲ್ಲಿಯ ಸಿರಿಯಾದಳೊಪ್ಪೆ ವಿಷ್ಣುಗೆ ತಾಂ ಸ ।
ದ್ವಲ್ಲಭೆ ಬಮ್ಮಲದೇವಿಯೆ । ಪಲ್ಲವಿಸಲ್ ರಾಜ್ಯವಲ್ಲಿ ವಿಶ್ವಂಭರೆಯೊಳ್ ||411||
ಕುಂದದೆ ಸಿರಿಯೆಂದುಂ ತ । ನ್ನಂದಮನೀಕ್ಷಿಸುವ ರತ್ನದರ್ಪಣಮೆನೆ ಜೆ ।
ಲ್ಪೊಂದಿದ ಬಮ್ಮಲದೇವಿಯೊ । ಳೆಂದುಂ ಶ್ರೀರೂಪನೆಸೆವುದೊಂದಚ್ಚರಿಯೇ ||412||

---

## 83 ಬೇಲೂರು 170. 1135

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ನಾಗೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿಷ್ಣುವರ್ಧನ

ದುರ್ಬಾರಾರಿಧರಾಧರಾಳಿಕುಳಿಶಂ ಶ್ರೀವಿಷ್ಣುಭೂಪಾಳನಾ |
ರ್ದೆರ್ಬಟ್ಟಲ್ ಸೆಡೆದೋಡಿ ಪೋಗಿ ಭಯದಿಂದಾಬಂದನೀಬಂದನೆಂ ||
ಉರ್ಬೀಪಾಳರ ಕಣ್ಗೆ ಲೋಕಮನಿತುಂ ತದ್ರೂಪಮಾಗಿರ್ಪುದುಂ |
ಸರ್ಬಂ ವಿಷ್ಣುಮಯಂ ಜಗತ್ತೆನಿಪುದೇಂ ಪ್ರತ್ಯಕ್ಷಮಾಗಿರ್ದುದೋ ||413||

---

## ✓84 ಹಾಸನ 89. 1135

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಹಿಷಿ ಶಾಂತಲೆಯೂ ಅವಳ ಮಗಳು
ಚಿಕ್ಕಶಾಂತಲೆಯೂ ಸಾಯಲು ಶಾಂತಲೆಯ ತಾಯಿ ಜಕ್ಕಿಯಬ್ಬೆ ಮಗಳ ಮತ್ತು
ಮಮ್ಮಗಳ ಜ್ಞಾಪಕಾರ್ಥವಾಗಿ ಎಲೆಗುಂದದಲ್ಲಿ ಶಿವಾಲಯಗಳನ್ನು ಕಟ್ಟಿಸಿ
ದಂತೆಯೂ ಅವಕ್ಕೆ ವಿಷ್ಣುವರ್ಧನನು ಭೂಮಿಯನ್ನು
ಬಿಟ್ಟಂತೆಯೂ ಹೇಳಿದೆ.

### ಜಕ್ಕಿಯಬ್ಬೆ

ನಿರ್ಮಳಮೆಂತುಂ ಒಗೆ ತಾಂ | ನಿರ್ಮಳಮೆಂತುಂ ಚರಿತ್ರಮಾತ್ಮೀಯಗುಣಂ |
ನಿರ್ಮಳಮೆಂತುಮೆನಲ್ ಸ|ದ್ಧರ್ಮಪದಂ ಜಕ್ಕಿಯಬ್ಬೆಯೊಳ್ ಸೊಗಯಿಸುಗುಂ||414||

### ಶಾಂತಲೆ

ಕಂತುವ ಚಿಂತಾಮಣಿ ಸೀ | ಮಂತಿನಿಯರ್ಗೀಕೆ ತಾನೆ ಚೂಡಾಮಣಿಯೀ |
ಶಾಂತಲೆ ರಕ್ಷಾಮಣಿ ತಾ | ನಿಂತು ಪಲರ್ಗೆನಿಸಿ ನೆಗೞ್ದಳವನೀತಳದೊಳ್ ||415||

---

## ✓85 ಶ್ರವಣಬೆಳ್ಗೊಳ 384. 1135

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಂತ್ರಿ ಗಂಗರಾಜನ ಅಣ್ಣನಾದ
ಬಮ್ಮನ ಮಗ ಏಚಿರಾಜನು ಸಾಯಲು ಗಂಗರಾಜನ ಮಗ ಬೊಪ್ಪನು
ನಿಸಿದಿಗೆಯನ್ನು ನಿಲಿಸಿದಂತೆ ಹೇಳಿದೆ.

### ಎರೆಯಂಗ

ಎಱೆಯಂಗಪೊಯ್ಸಳಂ ತ|ಳ್ತಱೆಯಟ್ಟೆ ವಿರೋಧಿಭೂಪರಂ ಧುರದೆಡೆಯೊಳ್ |
ತಱಿಸಂದು ಗೆಲ್ದ ವೀರ | ಕ್ಕೆಱೆವಟ್ಟಾಗಿರ್ದು ಸುಖದೆ ರಾಜ್ಯಂಗೆಯ್ದಂ ||416||

ವಿಷ್ಣುವರ್ಧನ

ಕೊಂಗರ್ಱಿಂ ಮಲೆಯರ್ಱಿಮ | ನಂಗೆಯ್ಗೞವಡಿಸಿ ಲೊಕ್ಕಿಗುಂಡಿವರಂ ದೇ |
ಶಂಗಳನಿೞ್ಕೞಿಗೊಂಡ ನೃ | ಸಿಂಗಂ ಶ್ರೀವಿಷ್ಣುವರ್ಧನೋರ್ವೀಪಾಳಂ ||417||

ಬಮ್ಮ

ವ್ಯಾಪಿತದಿಗ್ವಳಯಯಶಃ | ಶ್ರೀಪತಿ ವಿತರಣವಿನೋದಪತಿ ಧನಪತಿ ವಿ |
ದ್ಯಾಪತಿಯೆನಿಪ್ಪ ಬಮ್ಮಜ | ಮೂಪತಿ ಜಿನಪತಿಪದಾಬ್ಜಭೃಂಗನನಿಂದ್ಯಂ ||418||

———

## 86 ಅರಸಿಯಕೆರೆ 144. 1136

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಪ್ರಧಾನ ಚಾವುಂಡಯ್ಯನು ಕರಿಗುಂದದ ದೇವಾಲಯಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಚಾವುಂಡಯ್ಯನ ಮಗ ಪಾರ್ಶ್ವ

ವರವಧುನಲ್ಲನನ್ಯವಧುಗಲ್ಲನನೇಕಕುಲಾಗಮಂಗಳಂ |
ಪರಿಕಿಸೆ ತಾನೆ ಬಲ್ಲನಘದೊಳ್ ಸಲೆ ಸಲ್ಲನಕೀರ್ತಿಯತ್ತಲ ||
ಲ್ಲರಿಬಳಮಲ್ಲನಿಷ್ಟಜನಕೆಲ್ಲ ಬುಧಾವಳಿಗೆಲ್ಲಮೀಯಲಾ |
ಸುರಕುಜದನ್ನನೆಂದು ಧರೆ ಬಣ್ಣಿಪುದಾದರದಿಂದೆ ಪಾರ್ಶ್ವನಂ ||419||

———

## 87 ಬೇಲೂರು 17. 1136

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ದಂಡನಾಥ ಬಿಟ್ಟಿಯಣ್ಣನು ದೋರಸಮುದ್ರದಲ್ಲಿ ತಾನು ಕಟ್ಟಿಸಿದ ಜಿನಾಲಯಕ್ಕೆ ಮೈಸನಾಡ ಬೀಜವೊಳಲನ್ನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಅತಿದೀರ್ಘಘ್ರಾಣಹಸ್ತಂ ನಿಶಿತದಶನದಂಷ್ಟ್ರಾಂಕುರಂ ಪಕ್ಷರಕ್ಷಾ |
ಯುತಪಕ್ಷಂ ತಾರ್ಕ್ಷ್ಯನಂತೋವಗಿಸಿ ತಱಿಯೆ ತನ್ನಾನೆ ಪಾಂಡ್ಯಾವನೀಭೃ ||
ತ್ಪೃತನಾವಿಧ್ವಂಸನೋಪಾರ್ಜಿತಜಯವಧುವಂ ವಿಷ್ಣು ತುಚ್ಛಾಜಿಲಜ್ಜಾ |
ಸ್ಮಿತನಾಂತಂ ಚೋೞಗೌಳಾಸುರಸಮರಜಯಶ್ರೀಸಮಾಲಿಂಗಿತಾಂಗಂ ||420||

## ವಿಷ್ಣುದಂಡಾಧಿಪ (ಬಿಟ್ಟಿಯಣ್ಣ)

ಪುಟ್ಟಿದ ಸಾರ್ಪುಂ ಕೂರ್ಪುಂ । ನೆಟ್ಟನೆ ತನ್ನೊಡನೆ ಪುಟ್ಟೆ ರಿಪುಗಳ್ಗೆ ಭಯಂ ।
ಪುಟ್ಟೆ ನಿಜಪತಿಗೆ ಚಕ್ರಂ । ಪುಟ್ಟಿದುದೆನೆ ವಿಷ್ಣು ಸುಭಟಚೂಡಾರತ್ನಂ ॥421॥

ಕುವಳಯಮೆಯ್ದೆ ತನ್ನುದಯದಿಂ ಪರಿತೋಷಮನೆಯ್ದೆ ವಿಶ್ವಭಾಂ ।
ಧವಜನಲೋಲಲೋಚನಚಕೋರಚಯಂ ನಿಜದೇಹಕಾಂತಿಯಿಂ ॥
ತವದನುರಾಗಮಂ ತಳೆಯೆ ಕಾಶ್ಯಪಗೋತ್ರಪವಿತ್ರನೇಱಿಗ್ಗಾ ।
ಡಿವದೆಳದಿಂಗಳಂತನುದಿನಂ ಬಳೆದಂ ಪಿರಿದುಂ ವಿಭೂತಿಯಿಂ ॥422॥

ಅನುಪಮಮಪ್ಪ ದಿಗ್ವಿಜಯದಿಂ ಜಯನೊಳ್ ಪಡಿಯಾಗಿ ಬಲ್ಪಿನಿಂ ।
ತನಗಸರಾಜಿತತ್ವಮಳವಟ್ಟಿರೆ ತೇಜದಳುರ್ಕೆಯಿಂ ಜಗ ॥
ಜ್ಜನಮನುರಾಗದಿಂದಮಿತತೇಜನೆನಲ್ ಕ್ರಮವಿಕ್ರಮಂಗಳಿಂ ।
ನೆನೆಯಿಸುವಂ ಪುರಾತನಮಹಾತ್ಮರನಿಮ್ಮಡಿದಂಡನಾಯಕಂ ॥423॥

ಪಸರಂಬೆತ್ತೆತ್ತಲುಂ ಬೇರ್ವರಿದು ಬೆಳೆದು ಶಾಖಾನುಶಾಖಾಳಿ ನೀಳ್ದಿ ।
ರ್ದೆಸೆಗಂ ತಳ್ತೊಪ್ಪೆ ಸರ್ವರ್ತುಕಸಕಳಫಳೈಶ್ವರ್ಯದಿಂ ಲೋಕಮಂ ರ ॥
ಕ್ಷಿಸುತಿರ್ಕಾಪೂರ್ಣಚೇತೋರಥಯುತಕಮಳಾಕಲ್ಪವಲ್ಲೀವಿಳಾಸಾ ।
ವಸಥಂ ಶ್ರೀವಿಷ್ಣುದಂಡಾಧಿಪದಿವಿಜಕುಜಾತಂ ವಿಪಶ್ಚಿದ್ವಿನೂತಂ ॥424॥

ಸಮಸಂದಕ್ಷುಣ್ಣಪುಣ್ಯೋದಯಮುದಯನಗಾರೂಢಭಾನುಪ್ರಭಾವಿ ।
ಭ್ರಮದಿಂದಂ ನಿಚ್ಚನಿಚ್ಚಂ ಪೊಸಯಿಸೆ ಕಮಳಾನಂದಮಂ ವಿಶ್ವನೇತ್ರೋ ॥
ಪಮನೆಂದುಂ ತೇಜದಿಂದಂ ಬೆಳಗುಗುಮೆಳೆಯಂ ವಿಷ್ಣು ವಿಷ್ಣುಕ್ಷಿತೀಶ ।
ಕ್ರಮಪಂಕೇಜಾತಭೃಂಗಂ ಚಪಳರಿಪುಚಮೂನಾಥಮತ್ತೇಭಸಿಂಗಂ ॥425॥

ಅಭಿರಾಮಾಕಾರದಿಂದಪ್ರತಿಮಭುಜಬಳಾಟೋಪದಿಂದಪ್ರಮೇಯ ।
ಪ್ರಭುಮಂತ್ರೋತ್ಸಾಹಶಕ್ತಿತ್ರಿತಯದಿನಮರ್ದುತ್ಸಾಹದಿಂ ವಿಷ್ಣುಭೂವ ॥
ಲ್ಲಭಸಪ್ತಾಂಗಕ್ಕಮಾಳಂಬನಮೆನೆ ನೆಗಱ್ದಕ್ಷುಣ್ಣಪುಣ್ಯಾಢ್ಯನೇಕ ।
ಪ್ರಭುವಾದಂ ವಿಷ್ಣುದಂಡಾಧಿಪನವಿಳಬುಧಪ್ರಾಣರಕ್ಷಾಪ್ರವೀಣಂ ॥426॥

ಪರಿಪೂರ್ಣೇಂದುಪ್ರಭಾವಿಭ್ರಮದೊಳಮರ್ದು ಗಂಗಾಪಗಾಸ್ಫಾರರುಗ್ವಿ ।
ಸ್ತರಮಂ ಧಿಕ್ಕರಿಸಿ ದುಗ್ಧಾರ್ಣವನವರುಚಿಯಂ ತಾಳ್ದಿ ನೀಳ್ದಪ್ಪುದಾಢಂ ॥
ಧರೆಯಿಂ ದಿಕ್ಚಕ್ರದಿಂ ಮಂದರಶಿಖರದಿನತ್ತಲ್ ವಿಯನ್ಮಂಡಪಾಗ್ರಂ ।
ಬರೆಗಂ ಶ್ರೀವಿಷ್ಣುದಂಡಾಧಿಪವಿಪುಳಯಶಃಕಲ್ಪವಲ್ಲೀವಿಳಾಸಂ ॥427॥

ದಿಗಧೀಶರ್ ತಮ್ಮ ತಮ್ಮ ರ್ದೆಸೆಯೊಳಗಿದಡಂಗಿರ್ಪಿನಂ ಪೋೞಲಾೞಾ ।
ದಿಗಳಾಟಂಗೊಂಡು ದುರ್ಗಾಶ್ರಯದೊಳೆ ಸಕಳತ್ರಂ ಭಯಂಗೊಂಡು ಗೋಳುಂ ॥
ಡೆಗೊಳುತ್ತಿರ್ಪನ್ನಮಂಭೋನಿಧಿನಿಕಟಮಹೀಪಾಳರಂ ವಿಷ್ಣು ವಿಕ್ರಾಂ ।
ತಗುಣಂ ಕೆಯ್ಗೆಣ್ಮೆ ಬೆಂಕೊಂಡಡಟಿನವರ ಸರ್ವಸ್ವಮಂ ಸೂಱೆಗೊಂಡಂ ॥428॥

ಉರಿದುದು ರಾಯರಾಯಪುರಮಾಪುರವಹ್ನಿ ಶಿಖಾಕಳಾಪಮಾ ।
ಪರಿದುವೆ ಕಾಂಚಿಯತ್ತಲೆನುತುಂ ನಡೆ ನೋಡುವ ಚೋೞಬೀರರಾಂ ॥
ಡ್ಯರ ಬಗೆಯೊಳ್ ಧಿಗಿಲ್ಲೆನೆ ಚಮೂಪಶಿಖಾಮಣಿ ವೀರವಿಷ್ಣುಭೀ ।
ಕರತರದೋಃಪ್ರತಾಪಶಿಖಿ ನೀಳ್ದು ಪೊದಱ್ದುದಗುರ್ವು ಪರ್ವಿರಲ್ ॥429॥

### ಬಿಟ್ಟಿಯಣ್ಣನ ಪಿತಾಮಹ ಉದಯಾದಿತ್ಯ

ಪದಮತ್ಯುತ್ತುಂಗಗೋತ್ರಾಚಲಶಿಖರದೊಳೊಪ್ಪುತ್ತಿರಲ್ ತನ್ನ ನಿತ್ಯಾ ।
ಭ್ಯುದಯಂ ಭೂಮಂಡಳೋತ್ಸಾಹಮನೊದವಿಸೆ ಸಾನಂದಸಸ್ಮೇರಲಕ್ಷ್ಮೀ ॥
ವದನಾಬ್ಜಶ್ರೀಯೊಳೊಪ್ಪಂಬಡೆಯೆ ನಿಜವಿಳಾಸಂ ಜಗದ್ವಂದ್ಯಮಾದ ।
ತ್ತುದಯಾದಿತ್ಯಪ್ರಭಾವಂ ಪ್ರಕಟಿತಭುವನಾಭೋಗತೇಜೋವಿಳಾಸಂ ॥430॥

ಆತನ ಕುಲವಧು ಭುವನ । ಖ್ಯಾತೆ ಜಗತ್ಪೂತೆ ಭಾಗ್ಯಸೌಭಾಗ್ಯಗುಣೋ ।
ಪೇತೆ ಮನೋಭವವಿಭವಸ। ಮೇತೆಯೆನಲ್ ಶಾಂತಿಯಕ್ಕನೊರ್ವಳೆ ನೋಂತಳ್ ॥431॥

### ಇವರ ಮಗ ಚಿಣ್ಣದಂಡನಾಥ

ಪರಮಬ್ರಾಹ್ಮ್ಯಪ್ರಭಾವಂ ಮನುಜಪರಿಬೃಢಾಕಾರಮಂ ತಾಳ್ದಿತೆಂಬಂ ।
ತಿರೆ ಧೀರೋದಾತ್ತಸತ್ವೋನ್ನತಿಯೊಳಮರ್ದು ನಾನಾಗುಣಾನರ್ಘರತ್ನೋ ॥
ತ್ಕರಮಂ ರತ್ನಾಕರಂ ತಾನೆನೆ ತಳೆದೆಱೆಯಂಗಾವನೀನಾಥಧಾತ್ರೀ ।
ಭರಮಂ ತಾಳ್ದಿರ್ದನೇಕಪ್ರಭುವೆನೆ ಭುವನಂ ಚಿಣ್ಣದಂಡಾಧಿನಾಥಂ ॥432॥

### ಇವನ ಹೆಂಡತಿ ಚಂದಲೆ

ಕುಲದ ಪೊಗೞ್ತೆ ಶೀಲದ ನೆಗೞ್ತೆ ಮನೋಭವರಾಜ್ಯಲಕ್ಷ್ಮಿಯಂ।
ನಿಲಿಸಿದ ಗಾಡಿ ಲೋಕದೊಳಗಾವಗಮಾವಿುಗಿಲೆಂದದಿಂದಮ ॥
ಗ್ಗಲಿಸಿದ ರೂಢಿ ತನ್ನೊಳಮರ್ದೊಪ್ಪಿರೆ ಚಿಣ್ಣಚಮೂಪಕಾಂತೆ ಚಂ ।
ದಲೆ ನೆಱೆ ತಾಳ್ದಿದಳ್ ಧರೆಗಗುಂದಲೆಯಪ್ಪ ಗುಣಪ್ರಭಾವಮಂ ॥433॥

ಫಣಿಪತಿಗಂ ವಚೋವಿಷಯಮಲ್ಲವು ಭಾವಿಸೆ ಚಂದಿಯಕ್ಕನೊ ।
ಳ್ಗುಣಮವು ನಿಷ್ಕಳಂಕನಿಜರೂಪದೊಳೊಪ್ಪಿರೆಯುಂ ಪೊಗೞ್ತೆಯೊಳ್ ॥

ತಣಿಯದೆ ಧಾತ್ರಿ ಲಕ್ಷ್ಮಿ ರತಿ ಭಾರತಿ ರೇವತಿ ಸತ್ಯಭಾಮೆ ರು |
ಕ್ಮಿಣಿ ಭುವನಪ್ರಣೂತೆ ಧರಣೀಸುತೆಯೆಂಬುದು ಲೋಕಮಾತೆಯಂ ||434||

---

## ೬೪ ಚಿಕ್ಕಮಗಳೂರು 161. 1137

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಮಂತ್ರಿಗಳಾದ ಮರಿಯಾನೆದಂಡನಾಯಕ ಭರತದಂಡನಾಯಕರು ದೊರೆಯಿಂದ ಭೂಮಿಯನ್ನು ಪಡೆದು ಸಿಂದಗೆರೆಯ ಬಸ್ತಿಗೆ ಬಿಟ್ಟಂತೆ ಹೇಳಿದೆ.

### ಭರತದಂಡನಾಯಕ

ಜಯಜಾಯಾಶರಣಂ ರಣಕ್ಷಿತಿಪತಕ್ಷತ್ರಂ ಹತಕ್ಷತ್ರನಿ |
ರ್ದಯಸಿದ್ಧಾರಿತದೇಹಶೋಣಿತಪಯಶ್ಶಾತಾಸಿ ಶಾತಾಸಿದು ||
ರ್ಜಯಧಾರಾಚಕಿತಾರಿರಕ್ಷಣಭುಜಾದಂಡಂ ಭುಜಾದಂಡಕೋ |
ಟಿಯುವದ್ವೀರವಧೂಪ್ರಮೋದಿ ಭರತಶ್ರೀಮಚ್ಚಮೂವಲ್ಲಭಂ ||435||

ನಯಯುಕ್ತಕ್ರಮವಿಕ್ರಮಂ ಕ್ರಮನಮದ್ಭೂಮಂಡಲಂ ಮಂಡಲ |
ಪ್ರಿಯವೃತ್ತಂ ಪ್ರಿಯವೃತ್ತಸಂಗತಗುಣಗ್ರಾಮಂ ಗುಣಗ್ರಾಮಣೀ ||
ನಯನಾನಂದಕರಂ ಕರಾರ್ಪಿತಧನುರ್ಜ್ಯಾರಾವದೂರೀಕೃತಾ |
ರಿಯಶೋರಾಜಿ ಜಿತೋದ್ಧತಾಜಿ ಭರತಶ್ರೀಮಚ್ಚಮೂವಲ್ಲಭಂ ||436||

ಅವನೀನೂತಯಶಂ ಯಶೋಧವಳಿತಾಶಾಮಂಡಲಂ ಮಂಡಲಾ |
ಗ್ರವಿಲೂನಾರಿಬಲಂ ಬಲಪ್ರಭುನಮಚ್ಚಂಚಚ್ಛಿಖಾಶೇಖರೀ ||
ಭವದಾತ್ಮಾಂಘ್ರಿನಖೋತ್ಕರಂ ಕರಗತಾರಿಶ್ರೀವಿಲಾಸಂ ವಿಲಾ |
ಸವತೀಮಾನಿತಮೀನಕೇತು ಭರತಶ್ರೀಮಚ್ಚಮೂವಲ್ಲಭಂ ||437||

ಸ್ಮರಲೀಲಂ ಸ್ಮರಲೀಲಲೋಲಲಲಿತಭ್ರೂ ಭ್ರೂಧನುರ್ವಿಭ್ರಮೋ |
ತ್ಕರಲೀಲಾಯತದೃಷ್ಟಿ ದೃಷ್ಟಿವಿಲಸತ್ಪುಷ್ಪೇಷು ಪುಷ್ಪೇಷುಜ ||
ರ್ಜರಿತೋನ್ಮತ್ತವಿಲಾಸಿನೀಜನಮನೋಮಾನಂ ಮನೋಮಾನಜೇ |
ದರತೋತ್ಕಂಠವಧೂಕದಂಬ ಭರತಶ್ರೀಮಚ್ಚಮೂವಲ್ಲಭಂ ||438||

ಜಿತಮಂತ್ರಂ ಜಿತಮಂತ್ರನೂತಮಹಿಮಸ್ತೋಮಂ ಹಿಮಸ್ತೋಮಶು |
ಭ್ರತಮಾತ್ಮೀಯಯಶಂ ಯಶೋಲಹರಿಕಾಮಜ್ಜಜ್ಜಗತ್ತರ್ಪಿತ ||
ರ್ಪಿತಲೋಕಸ್ತುತಕೀರ್ತಿ ಕೀರ್ತಿತಭುಜಸ್ತಂಭಂ ಭುಜಸ್ತಂಭಸಂ |
ಭೃತವಿಕ್ರಾಂತವಧೂಕರೇಣು ಭರತಶ್ರೀಮಚ್ಚಮೂವಲ್ಲಭಂ ||439||

ಜಿತವಿದ್ವಿಷ್ಟಚಮೂಚಮೂಪವಿಲಸನ್ಮಂತ್ರಂ ಲಸನ್ಮಂತ್ರಸಾ ।
ಧಿತದುರ್ವೃತ್ತಮಹೋಮಹೋರ್ಜಿತಮಹೀಚಕ್ರಂ ಮಹೀಚಕ್ರಸಂ ॥
ಸ್ತುತದೋರ್ಮಂಡಲಮಂಡಲಾಗ್ರದಮಿತಾನಮ್ರಾರಿ ನಮ್ರಾರಿಕೀ ।
ರ್ತಿತದಿಗ್ವರ್ತಿತಜೈತ್ರಲಕ್ಷ್ಮಿ ಭರತಶ್ರೀಮಚ್ಚಮೂವಲ್ಲಭಂ ॥440॥

ಪ್ರತಿಪಕ್ಷ್ಮಕ್ಷಿತಿಕೇತು ಕೇತುಜನಿತದ್ವಿಡ್ಭೀತಿ ಭೀತಿದ್ರುತಾ ।
ಶ್ರಿತರಕ್ಷಾನಿಲಯಂ ಲಯಾನಲಲುಠತ್ತಾಪಾಗ್ನಿ ಕೋಪಾಗ್ನಿಶೋ ॥
ಷಿತಯುದ್ಧೋದ್ಧತಜೀವನಂ ವನಶಿಖಿಪ್ರೋದ್ಯತ್ಪ್ರತಾಪಂ ಪ್ರತಾ ।
ಪತತಶ್ರೀಪರಿಲಬ್ಧಲಕ್ಷ್ಮಿ ಭರತಶ್ರೀಮಚ್ಚಮೂವಲ್ಲಭಂ ॥441॥

ಕರವಾಳಾಹತವಿದ್ವಿಷಂ ದ್ವಿಷದಸೃಕ್ಪೂರಪ್ಲುತೇಭಂ ಪ್ಲುತೇ ।
ಭರಘಾಲಂಬಿತಖಡ್ಗಿ ಖಡ್ಗಿನಿಹತಾಶ್ವೌಘಂ ಹತಾಶ್ವೌಘಜ ॥
ರ್ಜರಿತಾಂತ್ರೌಘವಿಕರ್ಷಿಘೇರವರವವ್ಯಾಜೃಂಭಿತಂ ಜೃಂಭಿತೋ ।
ದ್ಧುರದೋರ್ದಂಡಭವಜ್ಜಿತಾಜಿ ಭರತಶ್ರೀಮಚ್ಚಮೂವಲ್ಲಭಂ ॥442॥

ಲಲನಾನೀಕಮನೋಮನೋಭವ ಭವಸ್ಫಾರಾಳಿಕಾಖ್ಯಾನಳೋ ।
ಜ್ವಲತೇಜೋನಿಜಬಾಹು ಬಾಹುನಿಹತದ್ವಿಡ್ವಿಟ್ಟರೋದೇವಕೀ ॥
ರ್ತಿಲತಾವೇಲ್ಲಿತವಾರ್ಧಿ ವಾರ್ಧಿವಲಯಕ್ಷೋಣೀತಲಸ್ತುತ್ಯ ನಿ ।
ನ್ನ ಲಸದ್ವಕ್ಷದೊಳಿರ್ಕೆ ಲಕ್ಷ್ಮಿ ಭರತಶ್ರೀಮಚ್ಚಮೂವಲ್ಲಭ ॥443॥

ಅನತಾರಿಶ್ರೀಸಮಾಕರ್ಷಣಮಭಿಜನದಾರಿದ್ರ್ಯತೀವ್ರಗ್ರಹೋಚ್ಚಾ ।
ಟನಮತ್ಯುಗ್ರದ್ವಿಷನ್ಮಾರಣಮತುಳಭಯಾರ್ತಾವನೀಪಾಳಕಸ್ತಂ ॥
ಭನಮುರ್ವೀವಶ್ಯಮಾತ್ಮಾವನಿಪರಿವೃಢಶಾಂತ್ಯರ್ಥಮಂತ್ರಂ ಜಗನ್ಮಂ ।
ಡನಕೀರ್ತಿಶ್ರೀಶ ವಿದ್ವನ್ನಿಧಿ ಭರತಚಮೂನಾಥ ನಿನ್ನೊಂದೆ ಮಂತ್ರಂ ॥444॥

ಹರಿ ಭರದಿಂದೆ ಕಿಱಿತ್ತುಱಿದು ತಾರದ ಕಲ್ಲೆಡೆಯಲ್ಲದಾಗ್ರಹಂ ।
ಬೆರಸು ಬುಧೋತ್ಕರಂ ತಿರಿಯದುರ್ವಿಗೆ ಮಧ್ಯಮಮೆಂಬ ನಿಂದೆಯೊಳ್ ॥
ಪೊರೆಯದ ಮೇರುವೆಂದಪುದು ಧಾರಿಣಿ ವಿಪ್ರಕುಳಪ್ರದೀಪನಂ ।
ಭರತಚಮೂಪನಂ ಮದನರೂಪನನಪ್ರತಿಮಪ್ರತಾಪನಂ ॥445॥

ಹೃದಯಂ ಕಾರುಣ್ಯಪೀಯೂಷದ ಪುದಿದೊದವಾಳೋಕನಂ ಚಾರುದಾಕ್ಷಿ ।
ಣ್ಯದ ಕೇಳೀಗೇಹಮಾಸ್ಯಾಂಬುಜಮಖಿಳಕಳಾಗರ್ಭಸಂದರ್ಭಮಿಷ್ಟ ॥

ಪ್ರುದಮುದ್ಯದ್ಭ್ರೂಲತಾಸ್ಪಂದನಮುಮುರಸರಿತ್ಪ್ರೂತಮಾಚಾರವಾಯ್ತೆಂ |
ಬುದನೆಂದಂದನ್ಯಸಾಮಾನ್ಯನೆ ಭರತಜಮೂಪಂ ಮನೋಜಾತರೂಪಂ ||446||

ಭುಜದರ್ಪಂ ಶೌರ್ಯ್ಯಗರ್ಭಂ ವಿತರಣಮಧಿಕಪ್ರೀತಿಗರ್ಭಂ ಸುನೇತ್ರಾಂ |
ಬುಜಮುಂ ದಾಕ್ಷಿಣ್ಯಗರ್ಭಂ ವದನ ಶಶಿಕಲಾಗರ್ಭಮಾಚಾರಸಾರಂ ||
ತ್ರಿಜಗತ್ಸಂಸ್ತೋತ್ರಗರ್ಭಂ ನಿರುಪಮವಿಲಸನ್ಮೂರ್ತಿ ಶೃಂಗಾರಗರ್ಭಂ |
ನಿಜಮೆಂದಂದನ್ಯಸಾಮಾನ್ಯನೆ ಭರತಜಮೂಪಂ ಮನೋಜಾತರೂಪಂ ||447||

ಮತ್ತೆ ಕೃತಯುಗಮೆ ಬಂದಂ | ದುತ್ತಮಪುರುಷರನೆ ಪಡೆವೊಡೆನಗೆ ದಲೀಶಂ |
ಬಿತ್ತೆಂದು ಕಾದಪಂ ಬಿದಿ | ಬಿತ್ತರದಿಂ ಭರತರಾಜದಂಡಾಧಿಪನಂ ||448||

---

## 89 ಬೇಲೂರು 202. 1138.

ಈ ವೀರಗಲ್ಲಿನಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನು ಹಾನುಗಲ್ಲು ಕೋಟೆಯನ್ನು ಮುತ್ತಿ ಕಾದುವಾಗ ಕಲಿರಾಯನು ದೊರೆಯ ಅಪ್ಪಣೆಯನ್ನು ಪಡೆದು ಯುದ್ಧದಲ್ಲಿ ತನ್ನ ಶೌರ್ಯವನ್ನು ಮೆರೆದು ಸತ್ತನೆಂದು ಹೇಳಿದೆ.

### ಕಲಿರಾಯ

ಸುರಿವ ಸರಲ್ಗೆ ಪಾಯ್ದು ಚತುರಂಗದಳಕ್ಕಣೆದಾರ್ದು ನೂಂಕುವಾ |
ಸುರತರಮಪ್ಪ ಸಿಂಧುರಘಟಾವಳಿಗಳ್ಕದೆ ಕಾದಿ ಬೀರರ ||
ಬ್ಬರಿವಡೆ ಮಾಚಗೌಂಡನ ಮಗಂ ಕಲಿರಾಯನೆ ಕೀರ್ತಿಯಂ ವಸುಂ |
ಧರೆ ಪೊಗಟ್ವನ್ನೆಗಂ ಪಡೆದನಾಹವದೊಳ್ ರಣರಂಗರೂದ್ರಕಂ ||449||

ಎತ್ತಿದ ಮೊನೆಯೊಳ್ ರಾಯಂ | ಕುತ್ತಲ್ ಕಾಲಾಳುಮಶ್ವಮುಂ ಮೇಲಾಳಂ |
ತೆತ್ತಮುರುಳ್ದೊಡೆ ಪೆಣನಂ|ಬಿತ್ತಿದ ತೆಱಿನಾಯ್ತು ಸುರಿಯೆ ಪೂಮಱಿ ನಭದಿಂ||150||

ಕರಿತುರಗವೀರಭಟರಂ | ಧುರದೊಳ್ ತಳ್ತಿಱಿದು ಕೊಂದ ರಾಯನನಾಗಳ್ |
ಸುರಗಣಿಕೆಮುರುಯ್ದುರ್ ವಿ | ಸ್ತರದಿಂ ಪುಷ್ಪಕವಿಮಾನಮೇಱಿಸಿ ನಭದೊಳ್||451||

ಆಳಿಂ ಮುನ್ನಿಱಿವಂ ಸಿರಿ | ದಾಳಂ ತವೆ ಕೊಂದು ಹಾನುಗಲ್ಲಾಹವದೊಳ್ |
ಕಾಳಗವುಂಡನ ತಮ್ಮಂ | ಲೀಳೆಯೆ ಸುರಲೋಕಕೆಯ್ದಿದಂ ಕಲಿರಾಯಂ ||452||

---

## 90 ಚೆನ್ನರಾಯಪಟ್ಟಣ 145. 1139

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಳಿಕೆಯಲ್ಲಿ ಹುಳ್ಳರಸನು [illegible] ವನ್ನು ಜೀರ್ಣೋದ್ಧಾರಮಾಡಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಹುಳ್ಳರಸನ ಪಿತಾಮಹ ಮುದ್ದರಸ

ಚಾಳುಕ್ಯಾನ್ವಯಪದ್ಮಷಂಡವಿಳಸನ್ಮಾರ್ತಂಡನುಗ್ರಾವನೀ |
ಪಾಳಶ್ರೀಮಧುಸೂದನಂ ಹರಶಿರಶ್ಚಂದ್ರಾವದಾತೋದ್ಘದಿ ||
ಕ್ಷ್ಮಾಳವ್ಯಾಪಿವಿನೂತವಿಶ್ರುತಯಶಂ ಶಶ್ವಜ್ಜಯಶ್ರೀವಧೂ |
ಲೀಳಂ ಮುದ್ದರಸಂ ಧರಿತ್ರಿ ಪೊಸರಂ ಜೀಯೆಂಬಿನಂ ತಾಳ್ದಿದಂ ||453||

ಶರಣೆಂದಂಗಿದಿರಾಗಿ ಬಂದು ರಣದೊಳ್ ನಿಂದಂಗೆ ತನ್ನೊಂದು ದು |
ರ್ಧರದೋರ್ದಂಡಮೆ ವಜ್ರಪಂಜರಮರಿಪ್ರಾಣಾನಿಳಾಹಾರಭೀ ||
ಕರಕಾಳೋರಗಮೆಂದೊಡಾವನೊ ಸಮಂ ಬಂಟಿಂಗೆ ಪೇೞಿಂದು ಮು |
ದ್ದರಸಂ ಬಣ್ಣಿಸೆ ಧಾತ್ರಿ ಸಂದನೆಳೆಯೊಳ್ ಚಾಳುಕ್ಯವಂಶೋದ್ಭವಂ ||454||

---

## ✓91 ಅರಸಿಯಕೆರೆ 18. 1139

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಆಳಿಕೆಯಲ್ಲಿ ಕೇಸರಿಜೆಟ್ಟಿ ಒಂದು ದೇವಸ್ಥಾನವನ್ನು ಕಟ್ಟಿಸಿದಂತೆ ಹೇಳಿದೆ.**

### ಕೇಸರಿ

ಕೇಸರಿಗೆ ಶೌರ್ಯದೊಳ್ ದೊರೆ | ಕೇಸರಿ ಬಹುಬಂಧಮಲ್ಲವಿದ್ಯಾಬಲದೊಳ್ |
ಶಾಸಿತಮುಷ್ಟಿಕಚಾಣೂ | ರಾಸುರನೊಬ್ಬನೆ ಸಮಾನಮಾಶ್ರೀಕೃಷ್ಣಂ ||455||

ಪೆಸರುಂ ತನ್ನಯ ಕೀರ್ತಿಯುಂ | ಮೊಸೆದಾಚಂದ್ರಾರ್ಕತಾರಮೊಪ್ಪುವಿನಂ ಮಾ |
ಡಿಸಿದಂ ದೇಗುಲಮನಿದಂ | ವಸುಧಾವಧುವಿಂಗೆ ರತ್ನಭೂಷಣಮೆನಿಸಲ್ ||456||

---

## 92 ಶ್ರವಣಬೆಳ್ಗೊಳ 141. 1139

**ಇದರಲ್ಲಿ ಬಲದೇವದಂಡನಾಯಕನ ಪೌತ್ರನಾದ ಬಲದೇವನು ಸತ್ತಂತೆಯೂ ಅವನ ತಾಯಿಯೂ ಸಹೋದರಿಯೂ ಪರೋಕ್ಷವಿನಯವಾಗಿ ಒಂದು ಪಟ್ಟಸಾಲೆಯನ್ನು ಕಟ್ಟಿಸಿದಂತೆಯೂ ಹೇಳಿದೆ.**

### ಬಲದೇವದಂಡನಾಯಕ

ಪಲರುಂ ಮುನ್ನಿನ ಪುಣ್ಯದೊಂದೊದವಿನಿಂ ಭಾಗ್ಯಕ್ಕೆ ಪಕ್ಕಾದೊಡಂ |
ಚಲದಿಂ ತೇಜದನೊಳ್ಪಿನಿಂ ಗುಣದಿನಾದೌದಾರ್ಯದಿಂ ಧೈರ್ಯದಿಂ ||
ಲಲನಾಚಿತ್ತಹರೋಪಚಾರವಿಧಿಯಿಂ ಗಾಂಭೀರ್ಯದಿಂ ಶೌರ್ಯದಿಂ |
ಬಲವೇವಂಗೆ ಸಮಾನಮಪ್ಪರೊಳರೇ ಮತ್ತನ್ಯದಂಡಾಧಿಪರ್ ||457||

### ಅವನ ಹೆಂಡತಿ ಬಾಚಿಕಬ್ಬೆ

ಸತಿರೂಪಮಲ್ತು ನೋೞ್ಪೊಡೆ| ಕ್ಷಿತಿಯೊಳ್ ಸೌಭಾಗ್ಯವತಿಯನುನ್ನತಮತಿಯಂ|
ಪತಿಹಿತೆಯಂ ಗುಣವತಿಯಂ|ಸತತಂ ಕೀರ್ತಿಪುದು ಬಾಚೆಯಂ ಭುವನಜನಂ ||458||

---

## 93 ಶ್ರವಣಬೆಳ್ಗೊಳ 142. 1139

ಇದರಲ್ಲಿ ಬಲದೇವದಂಡನಾಯಕನ ಮಗ ಸಿಂಗಿಮಯ್ಯನು ಸಮಾಧಿಯಿಂದ ಮುಡಿಪಿದಂತೆಯೂ ಅವನ ಹೆಂಡತಿ ನಿಸಿದಿಗೆಯನ್ನು ನಿಲಿಸಿದಂತೆಯೂ ಹೇಳಿದೆ.

### ಬಲದೇವ ದಂಡನಾಯಕ

ಸ್ಥಿರನೇ ಬಾಪ್ಪುಮರಾದ್ರಿಯಿಂದಮಧಿಕಂ ಗಂಭೀರನೇ ಬಾಪ್ಪು ಸಾ |
ಗರದಿಂದಗ್ಗಳನೆಂತು ದಾನಿಯೆ ಸುರೋರ್ವೀಜಕ್ಕೆ ಮೇಲ್ ಭೋಗಿಯೇ ||
ಸುರರಾಜಂಗೆಣೆಯೆಂದು ಕೀರ್ತಿಪುದು ಕೆಯ್ಕೊಂಡಿರ್ಕೞಿಂ ಸಂತತಂ |
ಧರೆಯೆಲ್ಲಂ ಬಲದೇವಮಾನ್ಯನನಿಳಾಲೋಕೈಕವಿಖ್ಯಾತನಂ ||459||

---

## 94 ಕಡೂರು 96. 1141

ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಪಿರಿಯರಸಿ ರಾಜಲದೇವಿಯ ಸೋದರಮಾವ ಮಂಚಿಯರಸನು ವಿಷ್ಣುಸಮುದ್ರದಲ್ಲಿ ಮಂಚೇಶ್ವರದೇವರನ್ನು ಪ್ರತಿಷ್ಠಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿಷ್ಣುವರ್ಧನ

ಯಾದವರಾದವರೊಳ್ ಮು | ನ್ನಾದವರಿನ್ನಪ್ಪರಿವನ ಪಡಿಯಿಲ್ಲೆನೆ ಶೌ |
ರ್ಯೋದಯದಿಂ ಪಸರಿಸಿದಂ | ಮೇದಿನಿಯಂ ವೀರವಿಷ್ಣುವರ್ಧನದೇವಂ ||460||
ವನರುಹನಾಭನ ಪನ್ನೊಂ | ದನೆಯವತಾರಮಿದೆನಲ್ಕೆ ಯದುಕುಲದೊಳ್ ಕೃ |
ಷ್ಣನೆ ತಾನೆ ಬಂದು ಪುಟ್ಟಿದ | ನೆನೆ ನೆಗೞ್ದನುದಾರಿ ವೀರಭುಜಬಳಗಂಗಂ ||461||
ಕಮಠಂಗಿನ್ನೇಕೆ ಸರ್ವೋರ್ವಿಯ ಪೊಱೆ ಫಣಿರಾಜಂಗದಿನ್ನೇಕಿಳಾಭಾ |
ರಮದಿನ್ನೇಕಾದಿಶಾದಂತಿಗೆ ಮಹಿಭರಮಂ ತಾಳ್ದುವಾಯಾಸಮಿನ್ನೇ ||
ಕೆ ಮಹೀಧ್ರಸ್ಮೋಲಮಂ ಪೊರ್ದುವ ಗಸಣಿ ನೆಲಕ್ಕಾನೆ ಪೋ ಸಾಲ್ವೆನೆಂದ |
ಶ್ರಮದಿಂ ಭೂಚಕ್ರಮಂ ವಿಕ್ರಮದೊಳೆ ಭುಜದೊಳ್ ವಿಷ್ಣುಭೂಕಾಂತನಾಂತಂ ||462||

ತರವಾರಿಯೊಂದಱಿಂ ಬಹು | ಶರವಾರಿಯನುದ್ಧತಾರಿಸಾರೀನೇತ್ರಾಂ |
ಬುರುಹಂಗಳೊಳಗೆ ತೋರ್ಪ್ಪಂ| ಧುರದೊಳ್ ಶ್ರೀವಿಷ್ಣುಭೂಪನೆನಗಿದು ಚಿತ್ರಂ||463||

**ವಿಷ್ಣುವರ್ಧನನ ಹೆಂಡತಿ ಬಮ್ಮಲೆ**

ಆವಿಭುವಿನ ಪಟ್ಟಮಹಾ | ದೇವಿ ಮದದ್ವಿರದಗಮನೆ ಬಿಂಬಾಧರೆ ಲ |
ಜ್ಜಾವತಿ ಬಮ್ಮಲದೇವಿ ಕ | ಲಾವತಿ ಲಾವಣ್ಯಪುಣ್ಯವತಿ ಸೊಗಯಿಸಿದಳ್ ||464||
ರತಿಗಮರುಂಧತಿಗಂ ಸರ | ಸತಿಗಂ ರೇವತಿಗಮೆಸೆವ ಪಾರ್ವತಿಗಂ ಶ್ರೀ |
ಸತಿಗಂ ಸಮನೆನಿಸಿ ಮಹಾ | ಸತಿ ಬಮ್ಮಲದೇವಿ ಕೊಳಗಿ ಬೆಳಗಿದಳಿಳೆಯಂ ||465||

**ವಿಷ್ಣುವರ್ಧನನ ಪಿರಿಯರಸಿ ರಾಜಲದೇವಿ**

ಭೃಂಗವಿನೀಳಕುಂತಳೆಗೆ ರಾಜಮರಾಳವಿಳಾಸಯಾನೆಗು |
ತ್ತುಂಗಪಯೋಧರದ್ವಯೆಗೆ ಪೀನನಿತಂಬೆಗೆ ವಿಷ್ಣುಭೂಪನ ||
ರ್ಧಾಂಗಿಗೆ ಚಾರುಲೋಚನೆಗೆ ರಾಜಲದೇವಿಗೆ ರೂಢಿವೆತ್ತ ರಾ |
ಜಾಂಗನೆಯರ್ ಪೆಱರ್ ಸಮನೆ ರಾಜಿತರೂಪವಿಳಾಸದೇಳ್ಗೆಯೊಳ್ ||466||
ರಾಜಿತಪಾಣಿಪಲ್ಲವೆಗೆ ಮನ್ಮಥಮತ್ತಗಜೇಂದ್ರಯಾನೆಗಂ |
ಭೋಜದಳಾಕ್ಷಿಗುನ್ನತನಿತಂಬೆಗೆ ಕಾಮಶರೋಪಮಾನಸರಾ ||
ರಾಜಿತಕೋಮಳಾಂಗುಳಿಗೆ ವಿಷ್ಣುನರೇಂದ್ರಮನಸ್ಸರೋಜಿನೀ |
ರಾಜಮರಾಳಬಾಳಿಕೆಗೆ ರಾಜಲದೇವಿಗೆ ಪೇೞಿದಾರ್ ಸಮಂ ||467||

ಫಲಸ್ತುತಿ

ಇಂತೀಧರ್ಮಮನಾವನಾವ ತೆಱದಿಂ ಕಾವಂ ಯಥಾನ್ಯಾಯದಿಂ |
ದಂತಾತಂಗೆ ಹಿತಂಗೆ ಗಂಗೆ ಗಯೆ ಕೇದಾರಂಗಳೊಳ್ ಸಂದ ಮ ||
ತ್ತಂ ತೀರ್ಥಂಗಳೊಳಿಂದ್ವಿನಗ್ರಹಣತತ್ಕಾಲಂಗಳೊಳ್ ಭಕ್ತಿಯಿಂ |
ದಂ ತಾಂ ಕೊಟ್ಟ ಫಲಂ ಮಹಾದ್ವಿಜರ್ಗೆ ಭಾಸ್ವದ್ಗೋಸಹಸ್ರಂಗಳಂ ||468||
ಗಂಗಾಯಮುನೆಗಳೆರಡಱ | ಸಂಗಮದೊಳಗಣ್ಯಪುಣ್ಯವರತೀರ್ಥಸ್ಥಾ |
ನಂಗಳೊಳಿರ್ದ ತಪೋಧನ | ರಂ ಗೋಬ್ರಾಹ್ಮಣರನೞಿದನಿಂತಿದನೞಿದಂ ||469||

---

95 ಚೆನ್ನರಾಯಪಟ್ಟಣ 186. 1142

**ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಸೋವರಸ, ದಾವರಸ ಮುಂತಾದವರು ನಾಗೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಕೇಶವ

ಉತ್ತರಿಪಂ ಜಸಲತೆಯಂ । ಬಿತ್ತರಿಪಂ ಸದ್ಗುಣಂಗಳಂ ಬುಧತತಿಯೊಳ್ ।
ಕತ್ತರಿಪಂ ಭಯಲೋಭಮ।ನುತ್ತಮಪುರುಷಂ ಮಹಾಂತಗುಣಿ ಕೇಶವನುಂ ॥470॥

### ಕೇಶವನ ಹೆಂಡತಿ ದಣ್ಣಲದೇವಿ

ಪೊಳೆವಲರ್ಗಣ್ಗಳೊಪ್ಪೆ ನಳಿತೋಳ್ಗಳ ಭಾವಮದೊಪ್ಪೆ ಕೋಮಳಾಂ ।
ಗುಳಿನಖಮೊಪ್ಪೆ ದಂತನಿಕರಂಗಳ ರೋಚಿಗಳೊಪ್ಪೆ ಜಂಘೆಯುಂ ॥
ಸೆಳೆನಡುವುಂ ನಿತಂಬಮುಮದೊಪ್ಪಿರೆ ದಣ್ಣಲದೇವಿಯೊಪ್ಪುತುಂ ।
ಸುಱಿವಳಪೂರ್ವರೂಪೆಯನೆ ಕೇಶವದೇವನ ಲಕ್ಷ್ಮಿ ಲೀಲೆಯಿಂ ॥471॥

### ದಾವರಸ

ನುಡಿದುದೆ ದೇವಾಲಿಕೆ ಮೇಣ್ । ನಡೆವಳಿ ಮನುಮಾರ್ಗಮಾರ್ಪು ಸುರಕುಜದ
ಬನಂ ।
ಎಡೆಗೊಂಡ ರೂಪು ಕಾಮನ । ಪಿಡಿದಲರ್ಗಣೆಯೆನಿಪ ದಾವದಂಡಾಧಿಪನುಂ ॥472॥

---

## 96 ನಾಗಮಂಗಲ 94. 1142

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಸಾಮಂತ ಸೋಮೆಯನಾಯಕನು ಬಸ್ತಿಯನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಫಲಸ್ತುತಿ

ಪ್ರಿಯದಿಂದಿಂತಿದನೆಯ್ದೆ ಕಾವ ಪುರುಷಂಗಾಯುಂ ಜಯಶ್ರೀಯುಮ ।
ಕ್ಕೆಯಿದಂ ಕಾಯದೆ ಕಾಯ್ವ ಪಾಪಿಗೆ ಕುರುಕ್ಷೇತ್ರೋರ್ವಿಯೊಳ್ ವಾರಣಾ ॥
ಸಿಯೊಳೇೞುಕೋಟಿಮುನೀಂದ್ರರಂ ಕಪಿಲೆಯಂ ವೇದಾಢ್ಯರಂ ಕೊಂದುದೊಂ ।
ದಯಶಂ ಪೊರ್ದುಗುಮೆಂದು ಸಾಱಿದಪುದೀಶೈಳಾಕ್ಷರಂ ಸಂತತಂ ॥473॥

---

## 97 ದಾವಣಗೆರೆ 85. 1143

**ಇದರಲ್ಲಿ ಚಾಳುಕ್ಯರಾಜನಾದ ಜಗದೇಕಮಲ್ಲನ ಆಳಿಕೆಯಲ್ಲಿ-ವೀರಪಾಂಡ್ಯನ ದಂಡನಾಯಕ ಸೇನಾಪತಿ ಅರಸಿಯಕೆರೆಯ ಕಲಿದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಜಗದೇಕಮಲ್ಲ

ವನಧಿಪರೀತಭೂತಳದೊಳೆಂದುದನೊಲ್ಲದ ರಾಯರಿಲ್ಲ ತ |
ನ್ನನೆ ಶರಣೆಂದು ಜೀವಿಸದ ಭೂಭುಜರಿಲ್ಲ ಸಮಸ್ತವಸ್ತುವಾ ||
ಹನಮುನನೂನಕಾಂಚನಮನಿತ್ತಿರದುದ್ಧತರಿಲ್ಲ ಜೀಯೆನು |
ತ್ತನುದಿನಮೆಯ್ದೆ ಬಟ್ಟೆವೆಸಗೆಯ್ಯದ ಜಟ್ಟಿಗರಿಲ್ಲ ನೋಳ್ಪೊಡೇ |
ನನುಪಮಮಾಯ್ತೊ ರಾಜ್ಯವಿಭವಂ ಜಗದೊಳ್ ಜಗದೇಕಮಲ್ಲನಾ ||474|| *
ಅಳವಿಗಳುಂಬಮಪ್ಪ ಭುಜಗರ್ವದ ಚೋಳನೃಪಾಳನಂಜಿ ತ |
ಲ್ಲಳಿಸೆ ತಗುಳ್ದು ಚೋಳ್ನೆಲನನಾಳ್ನೆಲನಾಗಿರೆ ಮಾಡಿಕೊಂಡ ಹೊ ||
ಯ್ಸಳನನದಿರ್ಪಿ ತೇಜದೆಸಕಂ ಮಿಗಲಾನೆಗವರ್ತೆಗೊಂಡನಾ |
ರಳವೊ ಭುಜಪ್ರತಾಪವಿಭವಂ ಜಗದೊಳ್ ಜಗದೇಕಮಲ್ಲನಾ ||475||

### ವೀರಪಾಂಡ್ಯ

ಎಸಕದ ಸೋಮವಂಶಜರೊಳಾರ್ ದೊರೆ ತನಗೆನ್ನಿಸಿಪ್ಪುದೊಂದು ಸಾ |
ಹಸದ ಸಿಮಿರ್ಕೆ ವರ್ಧಿಸುವ ರಾಜ್ಯದಮರ್ಕೆ ಸುಖಪ್ರಪಂಚಮಂ ||
ಪಸರಿಪ ತೋರ್ಕೆ ವೈರಿಗಳ ರಾಜ್ಯದ ಸಾರ್ಕೆ ಕಡುರ್ಪಿಸಿಂ ಪಿಗು |
ರ್ಪಿಸುವರ ಮಿಾಸೆಯಂ ಸುಡುವ ತೇಜದಳುರ್ಕೆ ಧರಿತ್ರಿಯೊಳ್ ಪಿರಾ |
ಜಿಸುತಿರಲುತ್ತರೋತ್ತರಮಿಳಾಸ್ತುತಿನೆತ್ತುದು ಪೀರಪಾಂಡ್ಯನಾ ||476|| *

---

## √98 ಶ್ರವಣಬೆಳ್ಗೊಳ 140· 1145

**ಇದರಲ್ಲಿ ಮೇಘಚಂದ್ರತ್ರೈವಿದ್ಯನ ಶಿಷ್ಯ ಪ್ರಭಾಚಂದ್ರನು ಸ್ವರ್ಗಸ್ಥನಾದಂತೆ ಹೇಳಿದೆ.**

### ಶುಭಕೀರ್ತಿ

ಘನದರ್ಪೋನ್ನದ್ಧಬೌದ್ಧಕ್ಷಿತಿಧರಪವಿಯಿಾಬಂದನೀಬಂದನೀಬಂ |
ದನೆ ಸನ್ನೈಯಾಯಿಕೋದ್ಯತ್ತಿಮಿರತರಣಿಯಿಾಬಂದನೀಬಂದನೀಬಂ ||
ದನೆ ಸನ್ಮೀಮಾಂಸಕೋದ್ಯತ್ಕರಿಕರಿರಿಪುವೀಬಂದನೀಬಂದನೀಬಂ |
ದನೆ ಪೋ ಪೋ ವಾದಿ ಪೋಗೆಂದುಲಿವುದು ಶುಭಕೀರ್ತಿಯದ್ಧಕೀರ್ತಿಪ್ರಘೋಷಂ||477||
ಪಿತಘೋಕ್ತಿಯಲ್ತುಜಂ ಪಶುಪತಿ ಶಾಙ್ರ್ಗಯೆನಿಪ್ಪ ಮೂವರುಂ ಶುಭಕೀರ್ತಿ|
ವ್ರತಿಸನ್ನಿಧಿಯೊಳ್ ನಾಮೋ | ಚಿತಚರಿತರೆ ತೊಡರ್ದೊಡಿತರವಾದಿಗಳಳವೇ ||478||

---

* ಇವು ಪಂಚಪಾದವೃತ್ತಗಳು.

ಸಿಂಗದ ಸರಮಂ ಕೇಳ್ದ ಮ | ತಂಗಜದಂತಳ್ಕಿ ಬಳ್ಕಲಲ್ಲದೆ ಸಭೆಯೊಳ್ |
ಪೊಂಗಿ ಶುಭಕೀರ್ತಿಮುನಿಪನೊ|ಳೇಂ ಗಡ ನುಡಿಯಲ್ಕೆ ವಾದಿಗಳ್ಗೆಂಟೆರ್ದೆಯೋ||479||

**ವೀರಣಂದಿ**

ಹರಿಹರಹಿರಣ್ಯಗರ್ಭರ | ಸುರವಣೆಯಿಂ ಗೆಲ್ದ ಕಾಮನಂ ದೀಪ್ತತಪೋ |
ಭರದಿಂದುರಿಪಿದರೆನೆ ಬಿ | ತ್ತರಿಸದರಾರ್ ವೀರಣಂದಿಸೈದ್ಧಾಂತಿಕರಂ ||480||

---

## 99 ನಾಗಮಂಗಲ 76. 1145.

**ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ತಂತ್ರವೆಗ್ಗಡೆ ದೇವರಾಜನು ಸೂರನಹಳ್ಳಿಯಲ್ಲಿ ಬಸ್ತಿಯನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

**ವಿಷ್ಣುವರ್ಧನ**

ಶ್ರೀಕಾಂತಾನೇತ್ರನೀಳೋತ್ಪಳವದನಸರೋಜಾತಸಸ್ಮೇರಲೀಲಾ |
ಲೋಕಂ ಲೋಕತ್ರಯೋಜ್ಜೃಂಭಿತವಿಶದಯಶಶ್ಚಂದ್ರಿಕಾದೋಃಪ್ರತಾಪ ||
ವ್ಯಾಕೀರ್ಣಂ ತ್ಯಕ್ತಯುಕ್ತಕ್ರಮಕಳಿತಕುಭೃಚ್ಚಕ್ರಖೇದಪ್ರಮೋದ |
ಶ್ರೀಕಂ ಶ್ರೀವಿಷ್ಣುಭೂಪಂ ಬೆಳಗುಗೆ ಜಗಮಂ ರಾಜಮಾರ್ತಂಡರೂಪಂ ||481||
ಜಳಧಿವ್ಯಾವೇಷ್ಟಿತೋರ್ವೀಪತಿಯೆನಿಸಿ ಸುಖಿಂ ಬಾಳ್ಗೆ ಚಂದ್ರಾರ್ಕತಾರಂ |
ತಳಕಾಡಂ ಕೊಂಡ ಗಂಡಂ ತಿಗುಳರ ಪಡೆಯಂ ಕೂಡೆ ಬೆಂಕೊಂಡ ಗಂಡಂ ||
ತಳವಾರಲ್ ತಳ್ತ ಭೂಪಾಳರ ಪಡತಲೆಯಂ ಘೊಪ್ಪೆನಲ್ ಹೊಯ್ದ ಗಂಡಂ |
ಬಳವದ್ರಾಜ್ಯಂಗಳಂ ತನ್ನಲಗಿನ ಮೊನೆಯೊಳ್ ಪೊಯ್ದು ಕೆಯ್ಕೊಂಡ ಗಂಡಂ||482||

**ದೇವರಾಜ**

ಜನಸಂಸ್ತುತ್ಯರೊಳೀತನತ್ಯಧಿಕನೀತಂ ವಿಶ್ರುತಾಚಾರನೀ |
ತನತರ್ಕ್ಯಾಸ್ಪದನೀತನುದ್ಧಯಶನೀತಂ ಸತ್ಕಳಾಧಾರನೆಂ ||
ದೆನಿತಾನುಂ ತೆಱದಿಂದೆ ಬಣ್ಣಿಸಲಿಳಾಲೋಕಂ ಕರಂ ಪೆಂಪುವೆ |
ತ್ತನುದಾತ್ತಸ್ಥಿತಿಯಿಂ ಸುಹೃಜ್ಜನವಿಪದ್ವಿದ್ರಾವಣಂ ದೇವಣಂ ||483||

**ದೇವರಾಜನ ಹೆಂಡತಿ ಕಾಮಲದೇವಿ**

ತಳಿರಂ ಕೆಂದಳಮಿಂದುವಂ ವದನಮುದ್ಭೃಂಗಾಳಿಯಂ ಕುಂತಳಾ |
ವಳಿ ಚೆಂಬೊಂಗೊಪನಂ ಪೊದಱ್ದ ಮೊಲೆ ಮುಕ್ತಾನೀಕಮಂ ದಂತಮು ||

ತ್ಪುಳಮಂ ಲೋಚನವಿಕ್ಷುಚಾಪಲತೆಯಂ ಭ್ರೂವಿಭ್ರಮಂ ಪೋಲ್ವೆಯಂ |
ತಳೆಯಲ್ ಕಾಮಲದೇವಿ ಮನ್ಮಥಧನುರ್ಜ್ಯಾಲೇಖೆಯಂತೊಪ್ಪಿದಳ್ ||484||

---

## 100 ಸೊರಬ 138. ಸು. 1145

**ಈ ಆಸಮುಗ್ರಶಾಸನದಲ್ಲಿ ಚಾಳುಕ್ಯರಾಜನಾದ 2 ನೆಯ ಜಗದೇಕಮಲ್ಲನ ಸಾಮಂತ ಏಕ್ಕಲದೇವನ ಮತ್ತು ಅವನ ಹೆಂಡತಿಯ ಸ್ತುತಿ ಇದೆ.**

### ಬನವಾಸಿದೇಶ

ವರರತ್ನಾಕರದಿಂದಳಂಕರಿಸಿ ಮೆಯ್ವೆರ್ಚಿರ್ದ ಭೂದೇವಿಗಾ |
ದರದಿಂ ಕುಂತಳದಂತೆ ಕುಂತಳಸುದೇಶಂ ತೋರ್ಕುಮಾದೇಶಕಾ ||
ದರಣೀಯಂ ಬನವಾಸಿದೇಶಮದು ಭೋಗಕ್ಕಾಗರಂ ಸೌಖ್ಯಸಾ |
ಗರಮಾಹ್ಲಾದಕರಂ ನಿರಂತರವಿಳಾಸಾವಾಸಲಕ್ಷ್ಮೀಕರಂ ||485||

### ಏಕ್ಕಲದೇವ

ಕರವಾಳಿಂ ಪೊಯ್ಯೆ ಮಾಱಾಂತಹಿತರ ತಲೆಗಳ್ ಸೆಂಡುವೊಯ್ವಂತೆ ಪಾಱು |
ತ್ತಿರೆ ಮುಂಡಂ ಜೆಂಡುಮುಂದಾಗುರುಳುತಿರೆ ರಣಕ್ಷೋಣಿಯೊಳ್ ಭೂತವೇತಾ ||
ಳರ ಪರ್ವಂ ತಾನಿದೆಂದಚ್ಚರಿವಡೆ ಸುರಟೆಂದಾಂತರಂ ಕೊಲ್ವನತ್ಯು |
ದ್ಧುರವೀರಾಡಂಬರಂ ತ್ರೈಭುವನಭರಿತಮಾಗೆಕ್ಕಲಕ್ಷೋಣಿಪಾಳಂ ||486||

ಬಳವದ್ವಿಕ್ರಾಂ ದೊಳ್ ಕಾಯ್ಪಿನೊಳದಟಿನೊಳಾಕ್ಷೇಪದೊಳ್ ಭೀಮಸೇನಂ |
ಬಳವದ್ಪ್ರಮಾನುಹಂ ಜಾಡವತಿಖಿ ಹನುಮಂ ವೈನತೇಯಂ ಸಮಂ ತ ||
ನ್ನೊಳೆನಿಪ್ಪಂ ಮಾರ್ಮರಾರಾಂತರನದಟಲೆವಂ ಕೊಲ್ವನಾಟಂದು ಗೆಲ್ವಂ |
ವರವೀರಾಡಂಬರಂ ತ್ರೈಭುವನಭರಿತಮಾಗೆಕ್ಕಲಕ್ಷೋಣಿಪಾಳಂ ||487||

ಮುಳಿದಿದಿರಾಂತ ದುರ್ಧರವಿರೋಧಿಬಳಾಂಬುಧಿಗುಗ್ರಬಾಡವಾ |
ನಳನದಟಿಂದೆ ಮಚ್ಚರಿಪ ದರ್ಪದ ಮನ್ನೆಯರೆಂಬಹೀಂದ್ರಮಂ ||
ಡಳಿಗೆ ಫಣೀಂದ್ರವೈರಿಯೆನಲಾಂತು ಬಿರ್ದುಂಕುವನಾವನುದ್ಘಡೋ |
ರ್ಗಳದಿನರಾತಿವೀರಭಟನೆಕ್ಕಲವೀರನೊಳಾಜಿರಂಗದೊಳ್ ||488||

ಶರಣೆಮಗೆಂದು ಬಂದು ಮಱೆವೊಕ್ಕ ಬಿರ್ದುಂಕದೆ ಕೀೞ್ ಪಿರೀೞ್ ಮ |
ಚ್ಚರಿಸುವ ವೈರಿಮನ್ನೆಯರ ಕೋೞ್ಕೃದುಳಿಂ ಪೊಸ ಕಂಡದಿಂತೆಯಿಂ ||

ಕರುಳ ಪಿಣಿಲ್ಗಳಿಂ ರುಧಿರದಿಂದೆ ಮರುಳ್ವಡೆಗುದ್ಘರಾಗಮಂ ।
..ವಿಪನೆಂದೊಡಾಹವದೊಳೆಕ್ಕಲವೀರನಸಾಂಪ ಗಂಡರಾರ್ ‖489‖

### ಎಕ್ಕಲದೇವನ ಹೆಂಡತಿ ಬೊಪ್ಪಾದೇವಿ

ಉಮೆ ಸೌಭಾಗ್ಯದೊಳೊಳ್ಪುವೆತ್ತ ರತಿ ರೂಪಾಶ್ಚರ್ಯದೊಳ್ ಲಕ್ಷ್ಮಿ ವ ।
ಕ್ಷಮನಂಗೀಕರಿಸಿರ್ಪ ನಲ್ಮೆಯೊಳತಿಪ್ರಾಗಲ್ಭ್ಯದೊಳ್ ಸೂಕ್ತಿಲ ‖
ಕ್ಷ್ಮಿ ಮಹೀಲೋಕದೊಳೀಪ್ರಮೋದವತಿ ಬೊಪ್ಪಾದೇವಿಯೆಂಬೀಪ್ರಭಾ ।
ವಮನಾಂತೆಕ್ಕಲದೇವನಗ್ರಮಹಿಷೀತ್ವಶ್ರೀಯಿನುದ್ಯೋತಿಪಳ್ ‖490‖

---

## 101 ಹಾಸನ 130. 1147

ಇದರಲ್ಲಿ ಹೊಯ್ಸಳರಾಜನಾದ I ನೆಯ ನಾರಸಿಂಹನು ಮುಗುಳಿಯ ಗೋವಿಂದಜಿನಾ
ಲಯಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿಷ್ಣುವರ್ಧನ

ಜಿತಪಂಚೇಷುತ್ವದಿಂದೀಶ್ವರನೆನಿಸಿಯುಮುದ್ಯತ್ಸುಧಾಕಾಂತನತ್ಯೂ ।
ರ್ಜಿತತೇಜೋಲಕ್ಷ್ಮಿಯಿಂ ತೀವ್ರಕರನೆನಿಸಿಯುಂ ದೃಶ್ಯರೂಪಂ ಕಳಾಸಂ ‖
ಭೃತಭಾಸ್ವದ್ವೃತ್ತದಿಂದಂ ವಿಧುವೆನಿಸಿಯುಮಾತ್ಮೀಯನಿತ್ಯೋದಯೋತ್ಸಾ ।
ಹಿತದೋಷಾಶೇಷಸಿಂತಾವನೊಳಮಸದೃಶಂ ಧೀರವಿಷ್ಣುಕ್ಷಿತೀಶಂ ‖491‖
ಅರಿಸೇನಾಚಕ್ರಚಕ್ರಂ ಪೊರಳೆ ರಿಪುಕುಭೃತ್ಪುಂಗವಭ್ರಾಂತಿ ತಳ್ತು ।
ಸ್ಸಿರೆ ತನ್ನುಗ್ರಾಸಿಯಿಂದುಚ್ಚಳಿಸಿ ಧರೆಗುರುಳ್ತಿರ್ಪ ವಿದ್ವಿಟ್ಶಿರಂಗಳ್ ‖
ತರದಿಂ ಕುಂಭಂಗಳಂ ಪೋಲ್ತೆಸೆಯೆ ನವಘಟೀಯಂತ್ರದಿಂ ವಿಷ್ಣು ಯುದ್ಧಾ ।
ಜಿರವಾಪೀವೈರಿರಕ್ತಾಂಬುವನೆ ನಿಜಯಶೋವಲ್ಲಿಗೆತ್ತುತ್ತುಮಿರ್ಪಂ ‖492‖
ಮುಗುಮುಗುಳ್ವ ಪೊಕ್ಕು ದುರ್ಗಮ । ನಗಂಗಳಂ ಗಿಳ್ವವಾರ್ಧಿವರೆಗಮಡ್ಡಂ
ತಿಗಟಂ ? ।
ತಗುತಗುಳ್ದು ಕೊಂದನೋವದೆ । ಜಗಜಿರುದರಸರುಂ ವಿಷ್ಣುವರ್ಧನದೇವಂ ‖493‖
ಹಿಮದಿಂ ಸೇತುವರಂ ಮ । ತ್ತೆ ಮುಗುಳಿದ್ಸೇತುವಿಂ ಹಿಮುಂಬರೆಗಂ ವಿ ।
ಕ್ರಮಕೇಳಿಯಿಂ ತೊಳಿಲ್ವಂ । ಸಮದಕ್ಷತ್ರಿಯರನಟಿಸಿ ವಿಷ್ಣುನೃಪಾಳಂ ‖494‖

---

## 102 ನಗರ 37. 1147

**ಇದರಲ್ಲಿ ಚಾಳುಕ್ಯರಾಜನಾದ 2 ನೆಯ ಜಗದೇಕಮಲ್ಲನ ಆಳಿಕೆಯಲ್ಲಿ ಸಾಂತರ ರಾಜನಾದ ಶ್ರೀ ವಲ್ಲಭದೇವನು ಪಂಚಕೂಟಬಸ್ತಿಯ ಬಡಗಣ ಪಟ್ಟ ಶಾಲೆಯನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ಬಮ್ಮದೇವಸಾಂತರ

ಪರನರಪಶಿರಃಕಂಜೋ | ತ್ಕರಕರಿ ಕಮಳಾಪಯೋಧರದ್ವಯಹಾರಂ |
ಸ್ಮರಮೂರ್ತಿ ಸಕಳದಿಙ್ಮುಖ | ಪರಿಚುಂಬಿತಕೀರ್ತಿ ಬಮ್ಮದೇವಕುಮಾರಂ ||495||

### ತೈಲಸಾಂತರ

ಪುಟ್ಟಿದನಿನಂಗೆ ತೇಜಂ | ದಿಟ್ಟಿ ಮೊಗಕ್ಕಮರ್ದು ಚಂದ್ರಮಂಗುತ್ತರದಿಂ |
ಪುಟ್ಟುವವೊಲಖಿಳವೈರಿಘ | ರಟ್ಟಂ ಶರದಿಂದುಕೀರ್ತಿ ತೈಲನೃಪಾಲಂ ||496||

ನಳನೆ ಪನೋದಿ ಧರ್ಮಜನೆ ಧಾರ್ಮಿಕನಬ್ಧಿಯೆ ರತ್ನದಾಗರಂ |
ಕುಳಿಶನೆ ಶಸ್ತ್ರಮರ್ಜುನನೆ ಧನ್ವಿ ಸುರೇಂದ್ರನೆ ಭೋಗಿ ಮಂದರಾ ||
ಚಳಮೆ ಗಿರೀಂದ್ರಮಪ್ರತಿಮರಾಯರ್ಘುಳಪ್ಪನೆ ಚಕ್ರಿ ತೈಲಮಂ |
ಪಳಿಕನೆ ಪಾಸಿಯೆಂದು ಮುಡಿಗಿಕ್ಕಿದೆನಾರ್ಪವರೆತ್ತಿಕೊಳ್ವರೇ ||497||

### ಶ್ರೀವಲ್ಲಭಸಾಂತರ

ಪರಭೂಪಾಳಸಮುದ್ರದೊಳ್ ನಿಜಕರಪ್ರೋತ್ಖಾತನಿಸ್ತ್ರಿಂಶಮಂ |
ದರಮಂ ಸಂಧಿಸಿ ವಿಕ್ರಮದ್ಧ್ವಜಫಣೀಂದ್ರಾವೇಷ್ಟಿತಪ್ರಾಂತಮಂ ||
ಭರದಿಂದಂ ಕಡೆದುಗ್ರವಂಶತಿಳಕಂ ಶ್ರೀಕಾಂತೆಯುಂ ತನ್ನ ಪೇ |
ರುರದೊಳ್ ತಾಳ್ದೆ ಬುಧಾಳಿಯೇಂ ಪೊಗಳ್ದುದೋ ಶ್ರೀವಲ್ಲಭಾಖ್ಯಾನಮಂ ||498||

ವಿಕ್ರಮಗರ್ವಮಂ ತಳೆದು ತಾಗಿದ ವೈರಿನೃಪಾಳಜಾಳದಾ |
ಟ್ಟಕ್ರದೊಳಿರ್ದ ವಿಕ್ರಮವಧೂಟಿಯನಿಟ್ಟುಕಿಗೊಂಡು ಒಲ್ದಿಸಿಂ ||
ವಿಕ್ರಮವಜ್ರವೇದಿಭುಜಮಂಡಪದೊಳ್ ತಳೆದೊಲ್ದು ತಾಳ್ದಿಸಂ |
ವಿಕ್ರಮಶಾಲಿಗಳ್ ಪೊಗಳೆ ವಿಕ್ರಮಸಾಂತರನೆಂಬ ನಾಮಮಂ ||499||

ಕತ್ತುರಿಯ ಬೊಟ್ಟೊ ಮೇಣೆದು | ಪುತ್ತಳಿಗೆಯೊ ನೀಲಮಣಿಯ ತೋರ್ಗಂಬ ದೊಳೇಂ |
ತೆತ್ತಿಸಿದುದೆನಿಸಿ ಧರೆಯಂ | ಪೊತ್ತುದು ಭುಜವಜ್ರಕೋಟಿ ಸಿರಿವಲ್ಲಭನಾ ||500||

## 103 ಹಾಸನ 65. 1149

**ಇದರಲ್ಲಿ ಹೊಯ್ಸಳರಾಜನಾದ ವಿಷ್ಣುವರ್ಧನನ ಸಾಮಂತ ಶಂಕರದಂಡನಾಥನು ಹೊನ್ನವಾರದಲ್ಲಿ ಕೇಶವದೇವರನ್ನು ಪ್ರತಿಷ್ಠೆಮಾಡಿಸಿದಂತೆ ಹೇಳಿದೆ.**

**ವಿಷ್ಣುವರ್ಧನ**

ಮೊದಲೊಳ್ ಪೊಯ್ಸಳರಾಜ್ಯಲಕ್ಷ್ಮಿಯೊಡವಂ ತೋಳ್ವಲ್ಪಿನಿಂ ತಾಳ್ದಿ ತ |
ನ್ನುದಯಂ ರಂಜಿಸೆ ತನ್ನ ಬಲ್ಪೊದವೆ ತನ್ನಾರ್ಪೇಱೆ ತನ್ನಾಜ್ಞೆ ಮಿ ||
ಱೆ ದಿಶಾಚಕ್ರಮನೊತ್ತಿ ಕೊಂಡು ತಳಕಾಡಂ ಗಂಗರಾಜ್ಯಕ್ಕೆ ತಾಂ |
ಮೊದಲಾದಂ ಯದುವಂಶವರ್ಧನಕರಂ ಶ್ರೀವಿಷ್ಣುಭೂಪಾಳಕಂ ||501||

ಇವನೀತೋಳ್ಗಂಬದೊಳ್ ಪುತ್ತಳಿಯವೊಲವನೀದೇವಿ ತಾನಿರ್ಪಳೆಂದುಂ |
ತವದಿರ್ಕ್ಕುಂ ವಿಕ್ರಮಶ್ರೀ ಪೊಗರ್ವೊಲಿವನ ತೀವ್ರಾಸಿಯೊಳ್ ಬಿಟ್ಟಿವಂದಾ ||
ಜವನಿರ್ಕ್ಕುಂ ಕೋಣನಿಂದಂ ಪಗೆವರ ಪೆಣನಂ ಪೇಱಲೀ ವಿಷ್ಣುವಂಕಾ |
ದುವನಾವಂ ಗೆಲ್ವನಾವಂ ನಡುಗದಿದಿರೊಳಾಟಂದು ಬಂದಿರ್ಪನಾವಂ ||502||

---

## 104 ಶಿಕಾರಿಪುರ 103. 1149

**ಇದರಲ್ಲಿ ಶಾಂತರರಾಜನಾದ ಜಗದ್ದೇವನು ಬಳ್ಳಿಗಾವೆಯ ಕೇದಾರೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

**ಶಾಂತರರು**

ಶಾಂತತಮೋಗುಣಗಣರತಿ | ಶಾಂತಸಮಗ್ರಾರಿವರ್ಗದೋರ್ಬಲವಿಭವರ್ |
ಶಾಂತಭಯಲೋಭರದಱಿಂ|ಶಾಂತರವೆಸರಾದುದವರ್ಗೆ ಭೂಮಂಡಲದೊಳ್||503||

**ಜಗದೇವ**

ಈವ ಗುಣಕ್ಕೆ ತನ್ನ ತೊಡೆಸಕ್ಕಿ ನಿಜಾಶ್ರಿತಪಂಡಿತರ್ಕಳೊಳ್ |
ಶ್ರೀವಿದುದಗ್ರಲಕ್ಷ್ಮಿ ನಿಜದೋರ್ಬಲದೇಱಿಂಗೆ ಸಕ್ಕಿ ಶತ್ರುವೀ ||
ರಾವನಿಪಾಲಕಾಂತೆಯರ ಕರ್ಣಕರಚ್ಯುತನೂತ್ನರತ್ನಭೂ |
ಷಾವಳಿಯೆಂದೊಡಾರ್ ದೊರೆಗೆವಂದಪರೀಜಗದೇವಭೂಪನೊಳ್ ||504||

ಕುಸುಮಸ್ರಗ್ಭಾರಶೂನ್ಯೋದ್ಧತಕಚಭರಮುದ್ದಾಮಹೈಮಪ್ರಕಾಂಚೀ |
ಪ್ರಸರಾಪೇತಪ್ರಶುಂಭದ್ಘನಜಘನತಟಂ ಮೌಕ್ತಿಕೋದಾರಹಾರಾ ||
ಲಸರಂಗತ್ತುಂಗಪೀನಸ್ತನಕಲಶಯುಗಂ ಶ್ರೀಜಗದ್ದೇವಭೂಪಾ |
ಲಸುಹೃದ್ಭಾವವ್ಯಪೇತಕ್ಷಿತಿಪತಿತತಿಶುದ್ಧಾಂತಕಾಂತಾಕದಂಬಂ ||505||

ಚಾಗಮನೀಸಿಕೊಳ್ಳದ ವನೀಪಕರಿಲ್ಲವನೀಪಕರ್ ಮದೋ |
ದ್ಯೋಗಮನೊಕ್ಕು ಬಾೞಿದವರಿಲ್ಲ ಜಯೋತ್ಸುಕನಾಗಿ ಪೋಗೆ ಕೋ ||
ಳ್ಳೋಗದ ದೇಶಮಿಲ್ಲೆನಿಸುವಾಜಯಕೇಶಿ ನಿಜಾಗ್ರಜಾತನಾ |
ಶಾಗಜವರ್ತಿಕೀರ್ತಿಯೆನಲಾರ್ ಜಗದೇವನನ್ನೋಲ್ ಯಶಸ್ವಿಗಳ್ ||506||

---

## 105 ಚಿಕ್ಕನಾಯಕನಹಳ್ಳಿ 30. 1149

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಳಿಕೆಯಲ್ಲಿ ಮನಹರಸನು ಶಿವಶಕ್ತಿಮುನಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಶಿವಶಕ್ತಿ

ಉೞಿದಾಂತೀಶಿವಶಕ್ತಿಯ | ಸೆೞೆಕೋಲಿಂಗಳ್ಕಿ ಮನ್ಮಥಂ ಸತಿಯರ ಕಿ |
ಕ್ಕಿಱಿದಿರ್ದ ಕುಚದ ಸಾರ್ಕೆಯ | ಸೆೞೆಯೊಳಡಂಗಿದನಿದೇಂ ಕರಂ ವಿಸ್ಮಯಮೋ||
ಹಡೆದ ಹಣಹಾಗಮೆಲ್ಲಮ|ಜಡೆಯಿಡುಕುೞಿ ಮಡಗಿ ಮಿಂಡಿದೋೞಿಗೆಗಿರ್ಗೀವೇ|
ತುಡುಗುಣಿ ಗೊರವರ ಮೆಚ್ಚಂ|ಪೊಡವಿಗೆ ಶಿವಶಕ್ತಿ ತಾನೆ ನೈಷ್ಠಿಕಮುನಿಪಂ ||508||

---

## 106 ಚೆನ್ನಗಿರಿ 38, 39 1149

ಈ ಶಾಸನಗಳಲ್ಲಿ ಚಾಳುಕ್ಯರಾಜನಾದ ಜಗದೇಕಮಲ್ಲನ ಆಳಿಕೆಯಲ್ಲಿ ಪಾಂಡ್ಯರಾಜನಾದ ಜಗದೇಕಮಲ್ಲ ವೀರಪಾಂಡ್ಯದೇವನ ಸಾಮಂತ ಎಡವರಿಯರಸನು ಸೂಸಲಗೆರೆಯ ಶಿವಾಲಯಗಳಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಎಡವರಿಯ ತಂದೆ ಸೋಮ

ಮದವದರಿನೃಪರನಾಜಿಯೊ | ಳದಿರದೆ ಬೆಂಕೊಂಡು ಧರೆಯುನುನ್ನತಶೌರ್ಯಂ |
ಪದುಳಿಸಿ ಪಾಳಿಸಿ ಕೀರ್ತಿಯ | ನೊದವಿಸಿದಂ ಗುಣವಿಭಾಸಿ ಮನ್ನೆಯ ಸೋಮಂ||

### ಎಡವರಿ

ನುಡಿದ ನುಡಿ ರಾಮಬಾಣಂ | ತೊಡರ್ದೆಡೆಯೊಳ್ ಭೀಮನಾರ್ತು ಕುಡುವೊಡೆ ಕರ್ಣಂ |
ಪಡಿಯೆನಿಸಿ ನೆಗೞ್ದ ನಮ್ಮೀ | ಯೆಡವರಿದೇವಂಗೆ ಕುಚಿತಮನ್ನೆಯರ್ ದೊರೆಯೇ||
ಪಣೆದಂಬೊಯ್ದನ್ಯಸೈನ್ಯದ್ವಿಪಹಯಭಟಸಂದೋಹಮಂ ತನ್ನ ತೋಳೊಳ್ |
ಕುಣಿಯಲ್ಕುತ್ಸಾಹದಿಂದಂ ಜಯಸಿರಿ ಸಿರಿ ತಳ್ತಪ್ಪಿರಲ್ ತನ್ನನೀಧಾ ||

ರಿಣಿಯಂ ಪಾಂಡ್ಯಾವನೀಶಂಗಳವಡಿಸುವನೀವಾರ್ಧಿತೀರಂಬರಂ ಬಂ |
ಡಣದೊಳ್ ಮಾರ್ಕೊಂಡರಂ ತಳ್ತಿಱಿದೆಡವರಿದೇವಂ ಜಗತ್ಸ್ತುತ್ಯನಾದಂ ||511||

ಎಳೆಯನಿತುಂ ರಸಾತಳದೊಳಱಿದ್ದಿರೆ ಕಂಡು ವರಾಹವೇಷಮಂ |
ತಳೆದು ಗದಾಧರಂ ನೆಗಪಿ ಪೊತ್ತಿರೆಯುಂ ಕಲಿ ಕಾಯ್ದು ನೂಂಕಲ ||
ಗ್ಗಳಿಸಿ ದರಿದ್ರತಾರ್ಣವದೊಳಿದ್ದ ಧರಿತ್ರಿಯನೋಹೊ ತನ್ನ ಕೋ |
ಡೊಳೆ ನೆಗಹಿತ್ತು ಕೇವಳಮೆ ಭೂನುತಮಣ್ಣನ ಗಂಧವಾರಣಂ ||512||

ಒದವಿದ ದಾನದಿಂದಮೆರೆದಂಗಮರಾತಿಗಮೀವ ತೋರ್ಪ ಕೂ |
ರಿದುವೆನಿಸಿರ್ಪ ಕೋಡೆರಡಱಿಂ ನೆಗಱ್ದುನ್ನತವಂಶದಿಂ ಸಗಾ ||
ತ್ರದ ಕಡುಗಾಡಿ ನೇತ್ರದ ಮಧುಚ್ಛವಿಯಿಂದಮಗುರ್ವವೆತ್ತು ಪೋ |
ಲ್ತುದು ದಿಗುದಂತಿಯಂ ವಿಜಯಕಾರಣಮಣ್ಣನ ಗಂಧವಾರಣಂ ||513||

---

## 107 ಲಕ್ಷ್ಮೇಶ್ವರದ ಶಾಸನ

### (ಎಪಿಗ್ರಾಫಿಯಾ ಇಂಡಿಕ XVI, 37) 1152-53.

**ಇದರಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ಕಾದಂಬತ್ರೈಲನೂ ಪಾಕರಸನೂ ಪುರಿಗೆರೆಯ ಸೋಮೇಶ್ವರದೇವರಿಗೆ ದತ್ತಿಗಳನ್ನು ಬಿಟ್ಟಂತೆ ಹೇಳಿದೆ.**

### ಪುರಿಕರವಗರ (ಪುರಿಗೆರೆ)

ತೆವರೆಲ್ಲಂ ದೇವತಾಮಂದಿರನಿವಹಮೆ ನಿಮ್ನಸ್ಥಳೀರಾಜಿಯೆಲ್ಲಂ |
ಸುವಿರಾಜದ್ದೀರ್ಘಿಕಾಸಂಕುಲಭರಿತಪಯಃಪೂರನೀರೇಜಕಾಸಾ ||
ರವೆ ಮತ್ತಂ ತತ್ಸಮಾಳಂಕೃತವಸುಧೆಯದೆಲ್ಲಂ ಲಸಚ್ಛಂದನೋದ್ಯಾ |
ನವೆನಲ್ ರಮ್ಯಂ ದಲೆಂದುಂ ಪುರಿಕರನಗರೀಲೀಲೆ ಲೋಕಾವಲೋಕಂ ||514||

ಒಂದೊಂದಕ್ಷತೆಯಂ ಸಾ | ನಂದದಿನಭ್ಯರ್ಚಿಸಲ್ಕೆ ಕೊಳಗಂ ತೀವಿ |
ತ್ತೆಂದೊಡೆ ಶಿವಲಿಂಗದ ಸಮ|ಸಂದ ಮಹೋನ್ನತಿಯ ಪವಣನಱಿಯಂ ಪೊಗಱಿಲ್||

### ಕಾದಂಬತ್ರೈಲ

ಬಲಿಯೆಂಕಂತೆ ತದೀಯದೇಶಮನದಂ ನಿಜಾರ್ಥಯಿಂದಾಳ್ದು ಮೆ |
ಯ್ಗಲಿ ದಿಕ್ಕುಂಭಿಯ ಕುಂಭಸಂಭೃತಲಸತ್ಸಿಂದೂರರಾಗಾವಿಳಂ ||
ಬಲವತ್ತೇಜಮೆನಲ್ ಧರಾವಳಯಮಂ ನಿಷ್ಕಂಟಕಂಮಾಡಿದಂ |
ಪಲರುಂ ಬಣ್ಣಿಸಲುದ್ಧತಾರಿದಳನಂ ಕಾದಂಬಕಂಠೀರವಂ ||516||

### ವೀರಪಾಂಡ್ಯ

ಅಸಿಧಾರಾವ್ರತಮಂ ಸಾ | ಧಿಸಿ ಜಯವಧು ವಾಣಿ ಬಾಣಮುಖಮಂ ಸಲೆ ಸಾ|
ಧಿಸಿ ಬಂದು ಭುಜದೊಳಾಸ್ಯದೊ | ಳೆಸೆದಿರ್ಪಳ್ ವೀರಪಾಂಡ್ಯಭೂಪಾಳಕನಾ||517||

### ಬಿದ್ದರಾಜ

ಎರಡಂ ನುಡಿಯದ ಸಂಗರ | ಧರೆಯೊಳ್ ಬೆಂಗುಡದ ಪರವಧೂಕೇಳಿಯನಾ |
ಚರಿಸದ ಪೆಂಪಿನೊಳಾವಂ | ದೊರೆ ಪರಿಕಿಸೆ ಬಿದ್ದರಾಜದಂಡಾಧಿಪನೊಳ್ ||518||

### ಫಲಸ್ತುತಿ

ಗಂಗಾಸಾಗರಯಮುನಾ | ಸಂಗಮದೊಳ್ ಕೋಟಿಕವಿಲೆಯಂ ಬ್ರಾಹ್ಮಣರಂ |
ಲಿಂಗಿಗಳಂ ಸಲೆ ಪುಣ್ಯದಿ | ನಂಗಳೊಳಱಿದವರ್ಗಳಪ್ಪರಿಂತಿದನೞಿದರ್ ||519||

---

## 108 ಬೇಲೂರು 168. 1154

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನು ಚೆನ್ನಸೋಮನಾಥದೇವರಿಗೆ ವೃತ್ತಿಯನ್ನು ಬಿಟ್ಟಂತೆ ಹೇಳಿದೆ.

### ನಾರಸಿಂಹ I

ಆನರಸಿಂಹಂ ರಿಪುನೃಪ | ಸೇನಾಜಳನಿಧಿಗೆ ಬಾಡಬಂ ರಿಪುಭೂಭೃ |
ತ್ಸೇನಾಪನರಾಜಿಗೆ ದಾ | ವಾನಳನೇಕಾಂಗವೀರನತಿಗಂಭೀರಂ ||520||

---

## 109 ಹಾಸನ 57. 1155

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಹಾಪ್ರಧಾನ ಚಾವಿಮಯ್ಯನ ಹೆಂಡತಿ ಜಕ್ಕಲೆ ಹೆರಗಿನಲ್ಲಿ ಬಸ್ತಿಯನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಚಾವಿಮಯ್ಯ

ಇನನಂ ತೇಜದೊಳಿಂದ್ರನಂ ವಿಭವದೊಳ್ ಚಾಣಕ್ಯನಂ ನೀತಿಯೊಳ್ |
ಮನುವಂ ಚಾರುಚರಿತ್ರದೊಳ್ ಜಳಧಿಯಂ ಗಾಂಭೀರ್ಯದೊಳ್ ಧೈರ್ಯದೊ‍ಳ್ ||
ಕನಕಾದ್ರೀಂದ್ರಮನೆಯ್ದೆ ಪೋಲ್ವನದಟಿಂ ತ್ರೈಲೋಕ್ಯಮುಂ ಮೆಚ್ಚಿದ |
ರ್ಜುನನಂ ಶ್ರೀಪಡೆವಳ್ಳಚಾಮನೆನಿಸಲ್ಸೇವಣ್ಣಿಪಂ ಬಣ್ಣಿಪಂ ||521||

ವರವನಿತಾಜನಂಗಳ ಮನಂ ಕುಸುಮಾಸ್ತ್ರಶರಕ್ಕೆ ಸದ್ಬುಧೋ |
ತ್ಕರಕರಪಂಕಜಂ ಬಹುಸುವರ್ಣಜಯಕ್ಕಧಿನಾಥಮಂದಿರಂ ||
ಸ್ಥಿರತರರಾಜ್ಯಲಕ್ಷ್ಮಿಗೆಡೆಯಾದುವು ರೂಪವಿಳಾಸದೇಳ್ಗೆಯಿಂ |
ನಿರುಪಮದಾನದಿಂ ಪತಿಹಿತೋನ್ನತಿಯಿಂ ಪಡೆವಳ್ಳಚಾಮನಾ ||522||

ಅನುಪಮಮಪ್ಪ ಬಂಧುನಿವಹಂ ನಿಜಪಕ್ಷಮನೆರ್ಘರತ್ನಮಂ |
ಜನತತಿ ಪಂಚವರ್ಣಮಖಿಳೋಗ್ರಭುಜಾಸಿಯೆ ಚಂಚು ದುಷ್ಟದು ||
ರ್ಜನರಿಪುಭೂಭುಜರ್ ಭುಜಗರಾಗೆ ನೆಗಳ್ತೆಯನಾಂತ ಬಿಟ್ಟಿದೇ |
ವನ ಗರುಡಂ ಸಮಂತೆಸೆದನೀಧರೆಯೊಳ್ ಪಡೆವಳ್ಳಚಾಮಣಂ ||523||

ಚಾವಿಮಯ್ಯನ ಹೆಂಡತಿ ಜಕ್ಕಲೆ

ರತಿಯನ್ನಳ್ ರೂಪಿಂ ಭಾ | ರತಿಯನ್ನಳ್ ವಾಗ್ವಿಳಾಸದಿಂ ಸೌಷ್ಠವದಿಂ |
ಕ್ಷಿತಿಯನ್ನಳ್ ಪೆರ್ಮೆಗರುಂ | ಧತಿಯನ್ನಳ್ ಜಕ್ಕಿಯವ್ವೆ ಕಾಂತಾರತ್ನಂ ||524||

ಕೋಮಳವಾಗಿ ತಾನೆ ಶುಭಲಕ್ಷಣಯುಕ್ತಮೆನಿಪ್ಪ ಮೂರ್ತಿಯಿಂ |
ವ್ಯೋಮಮನೆಯ್ದೆ ಪರ್ಬಿ ದಿಗುದಂತಿವರಂ ನಿಮಿರ್ದಿರ್ದ ಕೀರ್ತಿಯಿಂ ||
ಶ್ರೀಮುಖದಿಂದಮುದ್ಭವಿಪ ಸತ್ಯದ ಮೆಲ್ನುಡಿಯಿಂದೆ ಗೋತ್ರಚಿಂ |
ತಾಮಣಿ ಜಕ್ಕಿಯವ್ವೆ ಸಲೆ ರಂಜಿಸಿದಳ್ ಶಚಿದೇವಿಯಂದದಿಂ ||525||

ತಕ್ಕಳ ಮಿಕ್ಕ ಸೋರ್ಮುಡಿಯ ವೃತ್ತಕುಚಂಗಳ....ಸೋ |
ಟಕ್ಕಲರಂಬಿವೆಂಬ ನಗೆಗಣ್ಗಳ ರೊಕ್ಕಮೆನಿಪ್ಪ ಹೊನ್ನ ಬ ||
ಣ್ಣಕ್ಕೆ ವಿಶೇಷಮಪ್ಪಧರಕಾಂತಿಯ ಜಕ್ಕಲನಾರಿಯೊಂದು ಭಾ |
ವಕ್ಕೆ ಗುಣಕ್ಕೆ ವಾಗ್ವಿಭವದುನ್ನತಿಗಾರ್ ದೊರೆ ಪೆಂದಿರುರ್ವಿಯೊಳ್ ||526||

ತಳದೊಳಶೋಕೆಯೊಪ್ಪುವ ತಳಿರ್ ಮುಖಪಂಕಜದೊಳ್ ಸರೋಜಮಾ |
ಸುಳಿಗುರುಳೋಳಿಯೊಳ್ ಮಧುಪಸಂಕುಳಮೊಳ್ನುಡಿಗಳ್ಗೆ ಮಿಕ್ಕ ಕೋ ||
ಗಿಲೆವಿಳಾಸದೊಳ್ ಗಜಸಮುಚ್ಚಯಮುದ್ಭವಯೋಧರಕ್ಕೆ ಪೊಂ |
ಗಳಸಮೆನಿಪ್ಪಿವೇಂ ದೊರೆಯೆ ಜಕ್ಕಲೆನಾರಿಯ ರೂಪಿನೇಳ್ಗೆಯೊಳ್ ||527||

---

## 110 ಶಿಕಾರಿಪುರ 104. 1156

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಮಹಾಪ್ರಧಾನ ಮಾಯಿದೇವನು ಬಳ್ಳಿಗಾವೆಯ ಕೇದಾರೇಶ್ವರದೇವರಿಗೆ ಕೆಲವು ಸುಂಕಗಳನ್ನು ಬಿಟ್ಟುಕೊಟ್ಟನೆಂದು ಹೇಳಿದೆ.

### ಮಾಯಿದೇವ

ಕುದಿದೆಲ್ಲಂದದಿನಂದು ನಂದಕುಲಮಂ ಗೆಲ್ದಾತ್ಮಮಂತ್ರಕ್ಕೆ ನಾ ।
ಣ್ಚದೆ ಚಾಣಕ್ಯನದೇಕೆ ಮಂತ್ರಿಯೆನಿಪಂ ಪೇೞಿಂದನಾಯಾಸದಿಂ ॥
ದೆ ದೃಢಾರಾತಿಕುಲಂಗಳಂ ತವಿಸಿ ತನ್ನ ಸ್ವಾಮಿಗಭ್ಯುನ್ನತಾ ।
ಭ್ಯುದಯಶ್ರೀಯನೊಡರ್ಚುತಿರ್ಪನೊಲವಿಂ ಶ್ರೀಮಾಯಿದಂಡಾಧಿಪಂ ॥528॥

ವಿದಿತಂ ಕೆಯ್ಯಾಂತು ತನ್ನಂ ಪದೆದೆರೆದ ಬುಧಂ ಪೋಗಿ ಮತ್ತೊರ್ವನಂ ಬೇ ।
ಡಿದೊಡಂ ಸಂಗ್ರಾಮದೊಳ್ ನಿರ್ಜಿತಮದನೆನಿಪಂ ಪೋಗಿ ಮತ್ತೊರ್ಮೆ ಬಿಲ್ವೊ ॥
ಯ್ದಿದಿರೊಳ್ ಬಂದಾಂತೊಡಂ ದಾನದ ಭುಜಬಲದುರ್ವಲ್ತುದೆಂದೆಂದು ನಿಚ್ಚಂ ।
ಮುದದಿಂ ವ . ಲ್ವನೆಂದಂದಿತರಜನಸಮುಸ್ಕಂಧನೇ ಮಾಯಿದೇವಂ ॥529॥

---

## 111 ಹಾಸನ 69. 1156

**ಇದರಲ್ಲಿ ಹೊಯ್ಸಳರಾಜನಾದ I ನೆಯ ನಾರಸಿಂಹನ ಸಾಮಂತ ಎರೆಯಮಯ್ಯನು ಮುದು ಗೆರೆಯಲ್ಲಿ ಎರಗೇಶ್ವರದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### 1 ನೆಯ ನಾರಸಿಂಹನ ಸೇನಾಧಿಪತಿ ಬೋಕಣ

ದಿಗುವಿಜಯಪ್ರತಾಪನಿಧಿ ಬೋಕಣನೆತ್ತಿದನೆಂದೊಡತ್ತಲಿ ।
ರ್ದಗಿಯದೆ ಚೋೞನಂಜಿ ಹೆಱಿಹಿಂಗದೆ ಮಾಳವನೋಡಿ ದುರ್ಗಮಂ ॥
ಹುಗದೆ ಕಳಿಂಗನೋಸರಿಸಿ ಹೋಗದೆ ಗುಜ್ಜರನಾಂತು ಯುದ್ಧದೊಳ್ ।
ಮಿಗುವರೆ ಬಿಟ್ಟಿದೇವಗರುಡಂಗಿದಿರಾಗಿ ಧರಿತ್ರಿಮಧ್ಯದೊಳ್ ॥530॥

### ಮಾಕಿಯಕ್ಕ

ಮುರಹರವಕ್ಷದೊಳ್ ಪೊಳೆವ ಲಕ್ಷ್ಮಿಯ ಕಾಂತಿಯನಾಂತು ಪದ್ಮದೊಳ್ ।
ಪರಿವೆರಸಿರ್ಪ ಭಾರತಿಯ ಸಾರತೆಯಂ ಗೆಡೆಗೊಂಡು ಚೆಲ್ವನಂ ॥
ಕ್ಷುರಿಸುವ ಪಾರ್ವತೀಪದಸರೋಜದ ಕೆಂಪಿನ ಸೊಂಪನಾಳ್ದು ವಿ ।
ಸ್ತರಿಸುವ ಮಾಕಿಯಕ್ಕನ ಜಸಂ ವಸುಧಾತಳಸೇವ್ಯಮಲ್ಲವೇ ॥531॥

### ಬೋಕಣನ ಮಂತ್ರಿ ಎರಗ

ಪಡೆವಳಬೋಕಣಂ ಕುಡೆ ನಿಯೋಗಮನೂರ್ಜಿತತೇಜದೆಱ್ತರಂ ।
ಪೊಡವಿಗಪೂರ್ವಮಾಗೆ ಮಱಿವೊಕ್ಕೊಡೆ ಖೇಚರಚಕ್ರಿ ನನ್ನಿಯಂ ॥
ನ್ನುಡಿವೊಡೆ ಕರ್ಣನಾಂತೊಡೆ ಕೃತಾಂತನೆನಲ್ಕೆ ಪೊಗೞ್ವೆತ್ತ ಹೆ ।
ಗ್ಗಡೆಯೆರಗಂ ಪ್ರತಾಪನಿಧಿ ಶೋಭಿಸುವಂ ಶಶಿಸೂರ್ಯರುಳ್ಳಿನಂ ॥532॥

ನುಡಿ ಕನಕಾದ್ರಿಯೊಳ್ ಪದುಮಜಂ ಕೆಡೆದಕ್ಕರಮಾಪ್ಪುರ್ ಬೇೞ್ಪುದಂ |
ಕುಡುವ ಸುರದ್ರುಮಕ್ಕೆ ಪಡಿ ಮಾೞ್ಪ ಪರಾರ್ಥಗತಿ ಖೇಚರಂಗೆ ನೊ ||
ರ್ಮಡಿ ಪತಿಭಕ್ತಿ ಮಾರುತಸುತಂಗೆ ಪದಿರ್ಮಡಿಯೆಂದೊಡಣ್ಣ ಹೆ |
ಗ್ಗಡೆಯೆಱಗಂಗೆ ಪಾಸಟಿಯೆ ಮತ್ತಿನ ಮಾನವರೀಧರಿತ್ರಿಯೊಳ್ ||533||

ಎರಗನ ಹೆಂಡತಿ ಬಾಚವ್ವೆ

ಶೃಂಗಾರದ ಕಣಿ ಮದನನ | ಜಂಗಮಲತೆ ಸಿರಿಗೆ ತಾನೆ ಕೆಯ್ಗನ್ನಡಿ ಲೇ |
ಸಿಂಗೆ ನೆಲೆಯೆನಿಸಿ ನೆಗೞ್ದ | ರ್ದಂಗನೆ ಬಾಚವ್ವೆಗೆಣೆಯೆ ಮತ್ತಿನ ಮನುಜರ್ ||534||

ಹರನರ್ಧಾಂಗದೊಳದ್ರಿಜೆ | ಹರಿಯುರದೊಳ್ ಲಕ್ಷ್ಮಿ ಶೋಭಿಪಂತಿರೆ ವಿಶ್ವಂ |
ಭರೆಗೆಸೆವೆಱಗನೊಪ್ಪುವ | ವರವಧು ಬಾಚವ್ವೆಯೆಸೆವಳವನೀತಳದೊಳ್ ||535||

ಎರಗನ ಹೆಂಡತಿ ಮಾಚಲದೇವಿ

ದೆಸೆಯಂ ಕಣ್ಗಳ ಕಾಂತಿಯಿಂ ಧವಳಿಪಳ್ ಲಾವಣ್ಯದಿಂ ಸೋಲಿಪಳ್ |
ವಸುಧಾಚಕ್ರಮನುದ್ಘಯೌವನವನಶ್ರೀಯೊಳ್ ಮನಃಕಾಂತನಂ ||
ಸಸಿಯಂ ಸೂರ್ಯನ ಮಾರನಂ ನಿಲಿಸುವಳ್ ಸೌಭಾಗ್ಯದೊಳ್ ರೂಪಿನೊಳ್ |
ಜಸದೊಳ್ ಮಾಚಲದೇವಿ ಮಾೞ್ಪಳೆಱಗಂಗಾನಂದಸಂದೋಹಮಂ ||536||

ಭೂವಿಯೊಳುಳ್ಳ ಚೆಲ್ವನಬುಜೋದ್ಭವನೀನತಿಯಂಗಭಿತ್ತಿಯೊಳ್ |
ಕಾಮಿಸಿ ತಿಟ್ಟವಿಟ್ಟನೆನೆ ಪಾದಯುಗಂ ಕಟಿ ನಾಭಿ ಲೇಸಿನು ||
ದ್ದಾಮತೆನೆತ್ತ ವೃತ್ತಕುಚಮಿಂದುನಿಭಾನನಮಬ್ಜಲೋಚನಂ |
ಕೋಮಲೆಗೊಪ್ಪುಗುಂ ನೆಗೞ್ದ ಮಾಚಲದೇವಿಗೆ ಭೂತಳಾಗ್ರದೊಳ್ ||537||

ಎರಗನ ಮಗ ಬಮ್ಮದೇವ

ಅತಿಶಯರೂಪದಿಂದತನುವಲ್ಲದ ಕಂತು ಕಳಂಕಮಿಲ್ಲದೂ |
ರ್ಜಿತಕುಮುದಪ್ರಿಯಂ ನೆಗೞ್ದ ಬಂಧುಜನಪ್ರಿಯನಿಷ್ಟಶಿಷ್ಟನಂ ||
ತತಿಖಗಕಲ್ಪಭೂಜನಿನತೇಜನೆಱಗತನೂಜನೆಂಬುದು |
ನ್ನತಸಿರಿಗಾಣ್ಮನಂ ಧರೆ ನೆಗೞ್ತೆಯ ಹೆಮ್ಮೆಯ ಬಮ್ಮದೇವನಂ ||538||

---

## 112 ಷಿಕಾರಿಪುರ 185. 1157

**ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ದಂಡನಾಯಕ ಕೇಶಿಮಯ್ಯನು ತಾಳಗುಂದದೇಗ ದೇವರಿಗೂ ಕನ್ನಡಕ್ಷರಶಿಕ್ಷೆಯ ಉಪಾಧ್ಯಾಯಛಾತ್ರರ ಗ್ರಾಸವಸ್ತ್ರಗಳಿಗೂ ತಗುಳಿದ್ದಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.**

ಬಿಜ್ಜಳ

ಜಗಮಂ ಕೆಯ್ಯಾನಿಸಿತ್ತಾರ್ತಹಿಮಕರಸಮಸ್ಪರ್ಧಿಯಾದತ್ತು ತೇಜಂ |
ಮಿಗೆವಂದತ್ತಬ್ಧಿಯಂ ಗುಣ್ಪಲೆದುದು ಕಲಿಯಂ ಚಾರುಚಾರಿತ್ರಮುಗ್ರಾ ||
ರಿಗಣಪ್ರಾಣಾಂಬುವಿಂದಂ ತಣಿದುದಸಿಲತಾಯಷ್ಟಿ ದಿಗ್ದಂತಿದಂತಾ |
ನುಗಮಾದತ್ತುದ್ಧಕೀರ್ತಿಪ್ರಸರಮೆನಿಸಿದಂ ಬಿಜ್ಜಳಕ್ಷೋಣಿಪಾಳಂ ||539||

ಕೇಶಿಮಯ್ಯ

ತನುಸೌಂದರ್ಯದೊಳಿಂದ್ರಜಂ ಸೊಬಗಿನೊಳ್ ಪುಷ್ಪಾಯುಧಂ ನೀತಿಯೊಳ್ |
ಮನು ಚಾತುರ್ಯದೊಳಬ್ಜಜಂ ಪರಹಿತವ್ಯಾಪಾರದೊಳ್ ಖೇಚರಂ ||
ಘನಶೌರ್ಯೋನ್ನತಿಯೊಳ್ ನೆಗೞ್ದ ರಘುರಾಮಂ ತಾನೆನುತ್ತುಂ ಜಗ |
ಜ್ಜನಮೀಕೇಶವದಂಡನಾಥನನನೂನಪ್ರೀತಿಯಿಂ ಬಣ್ಣಿಕುಂ ||540||

ರೇಚರಸ

ಸರಸೀರುಹತತಿ ದಿನಕರ | ಕರದಿಂದಲರ್ವಂತೆ ಜನದ ಮನಮಲರ್ವಿನೆಗಂ |
ಸರಸೋಕ್ತಿಯುಕ್ತಿಯಿಂ ರೇ | ಚರಸಂ ಧರ್ಮಪ್ರಸಂಗಮಂ ಪುಟ್ಟಿಸಿದಂ ||541||

---

√113 ಸೊರಬ 369. 1157

ಈ ವೀರಗಲ್ಲಿನಲ್ಲಿ ಚಾಳುಕ್ಯರಾಜನಾದ ತ್ರೈಲೋಕ್ಯಮಲ್ಲನ ಆಳಿಕೆಯಲ್ಲಿ ಕನ್ನೆಯನು ಕಾತಿಕವಳ್ಳಿಯ ತುರುಗೋಳಿನಲ್ಲಿ ಕಾದಿ ಸತ್ತನೆಂದು ಹೇಳಿದೆ.

ಎತ್ತಿದ ಪೂರ್ವಲಕ್ಕಿ ದಿರ್ದಸಳ್ಕದೆ ತಾಗಿಯೆ ವೀರರೆಲ್ಲರಂ |
ಮುತ್ತಿದನೊತ್ತಿದಂ ಪೆಣನನಂಬರಕೆತ್ತಲು ಭೂತಕೋಟಿ ಪಾ ||
ಡುತ್ತಿರೆ ಮಂಗಳಂ ಜಯಜಯಧ್ವನಿ ಘೂರ್ಣಿಸೆ ವೀರಲಕ್ಷ್ಮಿ ಮೆ |
ಯ್ವತ್ತಿದ ಸಾಹಸಂಬಡೆದ ಕನ್ನೆಯನೀಗಳಿದೇಂ ಕೃತಾರ್ಥನೋ ||542||

ರಣದೊಳ್ ತಾಗಿದ ಸುಭಟರ | ಪೆಣಮಯಮುಂ ಮಾಡಿದಾಗಳರಿಬಲಮೆಲ್ಲಂ |
ಕಣೆಯಮಯಮಾಗಿ ಕಱಿದೊಡೆ | ಕಣೆಹಂಜರದಲ್ಲಿ ಕನ್ನ ಮಱಗೊಱಗಿರ್ದಂ ||543||

---

√114 ಶಿಕಾರಿಪುರ 123. 1158

ಇದರಲ್ಲಿ ಕಳ್ಳುಕುರ್ಯರಾಜನಾದ ಬಿಜ್ಜಳನ ದಂಡನಾಯಕ ಕೇಶವರಾಜನು ತಾನು ಮಾಡಿಸಿದ ಕೇಶವಪುರವೆಂಬ ಅಗ್ರಹಾರದ ವೃತ್ತಿಗಳಿಗಾಗಿ ಬೆಳುವಣಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

## ಬ್ರಹ್ಮೋತ್ಪತ್ತಿ

ಅಮೃತಾಂಭೋರಾಶಿಶಯ್ಯಾಸದನದೊಳುರುಪೀಚೀಸಮುತ್ತುಂಗಮಂಚಾ |
ಗ್ರಿಮಶೇಷಾನಲ್ಪತಲ್ಪಸ್ಥಳದೊಳಘಹರಂ ಶ್ರೀಧರಂ ಯೋಗನಿದ್ರೋ ||
ದ್ಯಮದಿಂದಿರ್ದಿಲ್ಕು ವಿಶ್ವೋಜ್ಜನನವಿಧಿಗೆ ಚಿತ್ತಂದರಲ್ ತನ್ನ ಸಾಮ |
ರ್ಥ್ಯಮೆ ರೂಪಾದಂತೆ ನಾಭ್ಯಂಬುರುಹದಿನೊಗೆದಂ ಚಿನ್ಮಯಂ ಪದ್ಮಸದ್ಮಂ ||544||

## ತೈಲಪ

ಶಿವುನೆಱಿದುಯ್ದು ಭೂತಳಮನೆಯ್ದೆ ರಸಾತಳದಿಂದೆ ತಂದ ತ |
ದ್ರಿಪುವ ಪರಾಕ್ರಮಕ್ಕೆ ನಿಜವಿಕ್ರಮಮುರ್ಮಡಿಯಾಗೆ ರಟ್ಟರಿಂ ||
ದಪಹೃತವಾದ ವಿಶ್ವಧರಣೀತಳಮಂ ಬಿಡದಿಱಿದು ಕೊಂಡ ತೈ |
ಲಪನೃಪನಾದಮುದ್ಧರಿಸಿದಂ ದಲತರ್ಕ್ಕಜಳುಕ್ಯವಂಶಮಂ ||545||

## ಆಹವಮಲ್ಲ

ಇಳೆಯುಂ ತಮಾಳಕುಳಕುಂ | ತಳೆಯುಂ ನವಪೂಗಕಾಂಡಮಂಡಿತಗಳಕಂ |
ದಳೆಯುಂ ಭೂಭೃತ್ಕಟಕಮುಂ | ಡಳೆಯುಂ ತತ್ತನಯನಾಳ್ದನಾಹವಮಲ್ಲಂ ||546||

## ಜಗದೇಕಮಲ್ಲ

ಮಾಲವಮಾಲವಾದಿಪರಣಂ ಧೃತಪಲ್ಲವಪಲ್ಲವಾವನೀ |
ಪಾಲಕಮಂಡಲಂ ಮುಕುಳಹಸ್ತಯುಗಾತ್ತಲಲಾಟಲಾಟಭೂ ||
ಮೀಲಲನಾಧಿಪಂ ವಿಸದನೂನಕಳಿಂಗಕಳಿಂಗನೆಂಬುದಾ |
ಭೀಲಪರಾಕ್ರಮಕ್ರಮಮನೆಯ್ದೆ ಜಗಂ ಜಗದೇಕಮಲ್ಲನಾ ||547||

## ಕೇಶವರಾಜನ ಪಿತಾಮಹಿ ಪಂಪಾದೇವಿ

ರತಿಯುಂ ಪಾರ್ವತಿಯನರುಂ | ಧತಿಯುಂ ಭಾರತಿಯನೆಸೆವ ರೂಪಿಂ ಪೆಂಪಿಂ |
ಪತಿಹಿತದಿಂ ಜಡುರಿಂ ತ ' ತ್ಸತಿ ಪಂಪಾದೇವಿ ನಾಡೆಯುಂ ಧಿಕ್ಕರಿಪಳ್ ||548||

## ಕೇಶವರಾಜ

ಶ್ರೀಕಾಂತಾಪತಿ ವಿಕ್ರಮಾರ್ಜಿತಬಲಿಕ್ಷೋಣೀತಳಂ ವಿಶ್ವಲೋ |
ಕೈಕಸ್ತುತ್ಯದಶಾವತಾರಯುತನುದ್ಯಚ್ಚಂಖಚಕ್ರಾಬ್ಜಲ||
ಕ್ಷ್ಮೀಕೀರ್ಣಾತ್ಮಕರಾಗ್ರನೆನ್ನವೊಲಿವಂ ತಾನೆಂದು ಸಾನಂದದಿಂ |
ದಾಕಲ್ಪಾಯುವನೀಗೆ ಕೇಶವಚಮೂಪಂಗಾಗಳುಂ ಕೇಶವಂ ||549||

ಉದಯಿಸಿದಂ ಪ್ರತಾಪನಿಧಿ ಕೇಶವದೇವನುದಾತ್ತಸತ್ಕ್ಷರಿ |
ತ್ರದ ನೆವದಿಂದೆ ತತ್ಕೃತಯುಗಂ ಪರಿವರ್ತಿಸೆ ತನ್ನತರ್ಕ್ಯವಾ ||
ಕ್ಯದ ನೆವದಿಂದೆ ರಾಮವಿಶಿಖಂ ಪರಿವರ್ತಿಸೆ ಕೀರ್ತಿ ರುಂದ್ರಭಾ |
ವದ ನೆವದಿಂದೆ ವಾಸರದೊಳಂ ಪರಿವರ್ತಿಸೆ ಚಂದ್ರಿಕೋತ್ಕರಂ ||550||

ಪುಸಿಯಲ್ಕು ಬೇಡಿಪ್ಪರಂ ಪು | ಟ್ಟಿಸುವ ಬೆಸಂ ಬರ್ಮನದು ಸಮಂತವರಂ ರ |
ಕ್ಷಿಸುವ ಬೆಸಂ ತನ್ನದು ಗಡ | ನಿಸದಂ ಕೇಶವನಿದೇನುದಾತ್ತನೊ ಧರೆಯೊಳ್ ||551||

ಇನಜಂ ಕೊಟ್ಟ ತೊವಲ್ ಶಿಬಿ|ಮುನಿ ಕೊಟ್ಟಡಗಾದಧೀಚಿ ಕೊಟ್ಟೆಲ್ವುಗಳೇಂ|
ಧನದಂತೆ ಸೇವ್ಯಮೇ ಪೇ | ಳೆನುತುಂ ಹೊಂಗಳನೆ ಕೇಶವಂ ಕುಡುತಿರ್ಪಂ ||552||

ಧುರದೊಳ್ ಕೇಶವದಂಡನಾಥನ ಭುಜೋತ್ಖಾತಾಸಿಘಾತಕ್ಕೆ ಪಿ |
ಶ್ವರಿಪೂರ್ವೀಶ್ವರರಂಜಿ ಪುತ್ತಡದರ್ು ಜೀವಂಬೆತ್ತೊಡೆಮ್ಮೆಮ್ಮ ಕಾಂ ||
ತರನೊಲ್ದಿಂತಿದು ರಕ್ಷಿಸಿತ್ತಿದುವೆ ದೈವಂ ತಾನೆನುತ್ತಾನಥೂ |
ತ್ಕರದಿಂದಾದುದು ಪುತ್ತನೂದುವ ಕೃತವ್ಯಾಪಾರಮೀಧಾತ್ರಿಯೊಳ್ ||553||

## ದೋಣರಾಜ

ತದಮಾತ್ಯಂ ಕೀರ್ತಿವೆತ್ತಂ ಧರೆಯೊಳನುಪಮಂ ದೋಣರಾಜಂ ಬುಧೇಷ್ಟ |
ಪ್ರದಚಂಚತ್ಕಲ್ಪಭೂಜಂ ನಿಜಕುಲಕುಮುದಾನಂದರಾಜಂ ವಧೂಪ |
ದ್ಮದಭೃಂಗೀಹರ್ಷಸಂಪಾದಕವದನಸರೋಜಂ ಸುಶೀಲಾಂಗರಾಜಂ |
ವಿದಿತೋದ್ಯತ್ಸತ್ಯಭಾಜಂ ರಿಪುಗಜಮೃಗರಾಜಂ ನವಗ್ರೋಗ್ರತೇಜಂ ||554||

## ನರಸಿಂಗನಾಯಕ

ಪುಸಿ ನೆಲಸದ ನುಡಿ ಲೋಭದ | ದೆಸೆ ಪೊರ್ದದುದಾರನೊಳ್ಪು ಕುಂದದ ಚರಿತಂ|
ಮಸುಳದ ಜಸದೆಸಕಂ ಭಾ | ವಿಸುವೊಡೆ ನರಸಿಂಗನಾಯಕಂಗಿವು ಸಾಜಂ ||555||

## ರೇಚರಸ

ಅಮಳಗುಣನಮಳಕುಳನ | ತ್ಯಮಳಚರಿತ್ರೈಕನಿಳಯನಮಳನಯಪ್ರ |
ಕ್ರಮನಮಳಯಶೋರೋಚಿ | ಸ್ಸಮಾವೃತಾಶಾಳಿಯೆನಿಸಿದಂ ರೇಚರಸಂ ||556||

## ಪೋತರಸ

ಪರಿಚಿತಬಹುನಾಟಕಕಥಾ | ಪ್ಯರಸಂ ಬುಧಜನಮನೋಮಧುವ್ರತನುತತಾ |
ಮರಸಂ ಕರಣಾಗ್ರಣಿ ಪೋ | ತರಸಂ ಸ್ವಕುಲಪ್ರಭೂಃ ಜನಸಿದ್ಧರಸಂ ||557||

### ಕೇಶವಪುರ

ಇದು ಕೃತಕಲ್ಪಜನ್ಮಸಿಲಯಂ ದಿಟಮಿಂತಿದು ವಿಶ್ವವೇದದ |
ಭ್ಯುದಯನಿವಾಸಮಿಂತಿದು ಪವಿತ್ರಚರಿತ್ರಗುಣಾಕರಂ ಸಮಂ ||
ತಿದು ಘನಪುಣ್ಯಸಂಪದನಿಕೇತನಮೆಂಬಿನಮೊಪ್ಪಿ ತೋಱುತಿ |
ರ್ಪುದು ಸಲೆ ವೀರಕೇಶವಪುರಂ ಧರಣೀನವರತ್ನನೂಪುರಂ ||558||

### ಕೇಶವದೇವಾಲಯ

ತರುಪಾಷಾಣಾದಿಕರ್ಮಾಂತರಪರಿಣತಿಯಂ ಪದ್ಮಜಂ ಲೋಕದೊಳ್ ವಿ |
ಸ್ತರಿಸಲ್ವೇೞ್ಕುಂ ದಲೆಂದಿಂತಿದಱೊಳೆ ಪಡಿಯಚ್ಚಾಗಿ ಮಾಡಿಟ್ಟನೆಂಬಂ ||
ತಿರೆ ಚೆಲ್ವಂ ತಾಳ್ದಿ ದೃಬ್ಧಂಡನಮೆಸೆವ ಲಸತ್ಕೇಶವಾವಾಸಮಂ ನಿ |
ರ್ಭರಭಕ್ತಿಭ್ರಾಜಿತಂ ಮಾಡಿಸಿದನೆಸೆಯೆ ದಂಡಾಧಿಪಂ ಕೇತಿರಾಜಂ ||559||

---

## 115 ಅರಸಿಯಕೆರೆ 141. 1158

**ಇದರಲ್ಲಿ ಹೊಯ್ಸಳರಾಜನಾದ Iನೆಯ ನಾರಸಿಂಹನ ದಂಡನಾಯಕ ಶಾಂತಿಯಣ್ಣನು ಕರಿಗುಂದದಲ್ಲಿ ಬಸದಿಯನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿನಯಾದಿತ್ಯ

ಬಲಿದೊಡೆ ಮಲೆದೊಡೆ ಮಲೆಪರ|ತಲೆಯೊಳ್ ಬಾಳೆಡುವನುಚಿತಭಯರಸವಶದಿಂ|
ಬಲಿಯದ ಮಲೆಯದ ಮ ಲೆಪರ | ತಲೆಯೊಳ್ ಕೈಯಿಡುವನೊಡನೆ ವಿನಯಾ
ದಿತ್ಯಂ ||560||

### ಎರೆಯಂಗ

ಅನತರಾಗದ ರಿಪುನೃಪ | ರಾನನಸರಸಿರುಹನಾಳಮಂ ಖಂಡಿಸಲೆಂ |
ದಾಸಿಳ್ಕುಮದಾಸಿಳ್ಕುಮ | ದಾಸಿಳ್ಕುಮದೆಱಗನೃಪನ ಭುಜದಸಿಪಂಸಂ ||561||

### ತೈಲದಂಡಾಧಿಪ

ಎರೆದಟ್ಟಿದನ್ನವಧುಗಂ | ಸೆರೆದಾಂತ ವಿರೋಧಿಜನಕೆ ಕಣ್ಣಂ ಮನಮುಂ |
ಪರಿಕಿಸೆ ಸೋಲವೆಸಲ್ಕಂ | ಧರೆಯೊಳ್ ದೊರೆಯಾರೊ ತೈಲದಂಡಾಧಿಪನೊಳ್||562||
ವರವನಿತೆಯರ್ಗೆ ರಿಪುಗ | ಳ್ಗೆರೆದರ್ಥಿಜನಕ್ಕೆ ತೈಲದಂಡಾಧೀಶಂ |
ಘರಿಣಿಯಂ ಹರಿಣಯಂ | ಹರಿತನಯಂ ಧರೆಯೊಳೆಂದು ಪೊಗೞದರೊಳರೇ||563||

### ಚಾವುಂಡ

ಆವಾವ ಗುಣಂಗಳೊಳಂ । ಭಾವಿಸುವೊಡೆ ನೋಡ ಜಗದೊಳುತ್ಪರವಟ್ಟಂ ।
ಕೇವಳಮೆ ಸಂಧಿವಿಗ್ರಹಿ । ಚಾವುಂಡಂ ಗುಣಕರಂಡನಮೃತದ ಪಿಂಡಂ ॥564॥

### ಜಿನದೇವ

ಜಿನ್ನಂ ಸಮಸ್ತಗುಣಸಂ । ಪನ್ನಂ ಶಿಷ್ಟೇಷ್ಟತತಿಗೆ ಕೈ ತೀವಿರೆ ಪೆಂ ।
ಜೊನ್ನಂ ಕುಡುವೆಡೆಗಿನಸುತ । ನನ್ನಂ ಪರಹಿತದೊಳಾಪಿಯುಕ್ಚಾರನನ್ನಂ ॥565॥

### ಜಗದೇಕಮಲ್ಲ ವಾದಿರಾಜ

ಆದಿತ್ಯನ ಕೆಲದೊಳ್ ಚಂ।ದ್ರೋದಯಮೆಸೆಯದವೊಲ್ ಧರಾಮಂಡಳದೊಳ್ ।
ವಾದಿಗಳೆನೆಂಬ ಟುಂಟುಕ । ವಾದಿಗಳೆಸೆದಪರೆ ವಾದಿರಾಜನ ಸಭೆಯೊಳ್ ॥566॥

### ಶ್ರೀಪಾಲತ್ರೈವಿದ್ಯ

ಆವನ ವಿಷಯಮೊ ಷಟ್ತ । ರ್ಕಾವಿಳಬಹುಭಂಗಿಸಂಗತಂ ಶ್ರೀಪಾಲ ।
ತ್ರೈವಿದ್ಯಗದ್ಯಪದ್ಯವ । ಚೋವಿನ್ಯಾಸಂ ನಿಸರ್ಗವಿಜಯವಿಳಾಸಂ ॥567॥

---

## 116 ಶಿಕಾರಿಪುರ 18. 1158

**ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಣದೇವನ ಸಾಮಂತ ನನ್ನಿಯ ಗಂಗನ ಆಳಿಕೆಯಲ್ಲಿ ಸೇನಬೋವ ಸೋವನು ಬೇಗೂರ ಮಲ್ಲಿಕಾರ್ಜುನದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ನನ್ನಿಯ ಗಂಗ

ಬೇಡಿದೊಡಲ್ಲದೀಯದು ನಿಳಿಂಪಕುಜಂ ಕರೆವೀವ ದಾನದಿಂ ।
ನೋಡೆ ಸುರಾವನೀಜವುದು ಪೇಟ್ ದೊರೆಯೇ ಮಣಿ ಚಿಂತಿನಲ್ಕೆ ಕೈ ॥
ಯ್ಗೂಡುವುದಲ್ಲದಿರ್ದೊಡದು ತಾಂ ಕುಡದರ್ಥಿಜನಕ್ಕೆ ರಾಗದಿಂ ।
ನೀಡಿರದೀವನೀವಸುಧೆಯೊಳ್ ನಲೆ ನನ್ನಿಯ ಗಂಗಭೂಭುಜಂ ॥568॥

### ಬೇಗೂರ ಮಹಾಜನಗಳು

ಪ್ರತ್ಯೇಕಮಾಧರಾಮರ । ಸತ್ಯದ ಶೌಚದ ಕುಲಾಭಿಮಾನದ ಜಸದೊಂ ।
ದತ್ಯುನ್ನತಿಕೆಯನಜನುಂ । ನಿತ್ಯಸ್ಥಿತನೆಯ್ದೆ ಪೊಗಳಲೇಂ ನೆಱೆದಪನೇ ॥369॥

### ಭಾಸ್ಕರದೇವ

ಮುನಿಸಿಂದಂ ಕಡಲಂ ಕಡಂಗಿ ಕುಡಿದಂತಾದಾಪಿ ಪಾತಾಳಿಯುಂ ।
ಘನಮುಪ್ಪೊಂದುದರಾಗ್ನಿಯಿಂ ಕಿಡಿಸಿ ಸಿಂಧ್ವಾವ್ರೀಂದ್ರನುಂ ತಪ್ಪಿಲೋ ॥
ಜನದಿಂ ನೋಡಿ ನಿಜಾಷ್ಟ್ರಿಯಿಂ ಸಿಸಿಸಿದಾಕುಂಭೋದ್ಭವಂ ಕೋಪಸಂ ।
ಜನಿತಂ ಭಾಸ್ಕರದೇವನೊಳ್ ಸಮನೆ ಶೌಚಾಚಾರಸಂಪೂರ್ಕಿಯೊಳ್ ॥570॥

## 117 ಸೊರಬ 328. 1159

ಇದರಲ್ಲಿ ಚಾಳುಕ್ಯರಾಜನಾದ ಸೂರ್ಯದಿತ್ಯನ ಆಳಿಕೆಯಲ್ಲಿ ಬೀರಿಸೆಟ್ಟಿ ಕಾದಂಬ ಸೋಯಿದೇವನ ಸಮ್ಮತಿಯಿಂದ ಕೇದಾರೇಶ್ವರದೇವರಿಗೆ ವೃತ್ತಿಯನ್ನು ಬಿಟ್ಟಂತೆ ಹೇಳಿದೆ.

### ಸೋಯಿದೇವ

ಪೆಸರ್ವೆತ್ತಂ ತೋಳ ಕೂಪಾರ್ನವನ್ನಮರ ಕುಲಧ್ವಂಸಮಂ ಮಾಡೆ ನಾಕ್ಕ ।
ಪ್ಪನರಂ ಶ್ರೀರಾಮಬಾಣಕ್ಕ ಧಿಕತಯಶನಾಂ ರಾಕ್ಷಿ ಭಾಸ್ವದ್ವ್ರತೇಶಂ ॥
ಜನಜಪ್ರೋದ್ಭೂತನಂ ಧಿಕ್ಕರಿಸಿ ಜಿತರಣಾಂ ಪಂಬನಂದೋಜವಮಂ ರ
ಕ್ಷಿಸಿ ತನ್ನಾಚಾರದೇಕಪ್ರಿಯನಲೆಯ ಧರಾಧೀಶ್ವರಂ ಸೋಯಿದೇವಂ ॥571॥

### ಬೀರಿಸೆಟ್ಟಿ

ಅರಗಜರಾಜನಕ್ಕರೆದ ಪಂಬಗೆ ಬೀರಬನಾದ್ಯರೂಪನುಂ
ದರತೆಯಿನಾರ್ಪಿನಿಂ ಪಲವು ಕೂಗನನೆಯುಂ ನನೆಯುಂಬನೋಕೆಯುಂ ॥
ಸುರುಚಿರಕಾಂಚನಪ್ರಕರಮಂ ನಲೆ ತನ್ನುಮ ಪಸ್ತುಯುಗ್ಮದಿಂ ।
ಸುರಿದಪನೆಂದೊಡಾರಾ ಜಗದು ಜಿಣ್ಣಿನರಸುತಬೀರಸೆಟ್ಟಿಯುಂ ॥572॥

## 118 ಶ್ರವಣಬೆಳ್ಗೊಳ 345. ಸು. 1159

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಂತ್ರಿ ಹುಳ್ಳನು ಬೆಳ್ಗೊಳದಲ್ಲಿ ಚತುರ್ವಿಂಶತಿತೀರ್ಥಕರಬಸ್ತಿಯನ್ನು ಕಟ್ಟಿಸಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

### ಹುಳ್ಳ

ಧರೆಯಂ ಗೆಲ್ದಿರ್ದ ತಿಣ್ಪುಳ್ಳನನುಪಧಿಯನೇನೆಂಬ ಗುಣ್ಪುಳ್ಳನಂ ಮಂ ।
ದರಮಂ ಮಾರ್ಕೊಳ್ವ ಪೆಂಪುಳ್ಳನನಮರನುಹೀಜಾತಮಂ ಮಿಕ್ಕ ಲೋಕೋ ॥

ತ್ತರಮಪ್ಪಾಪೂರ್ವನಂ ಪೂರ್ವನನೆನಿಪ ಜಿನೇಂದ್ರಾಂಘ್ರಿಪಂಕೇಜಪೂಜೋ |
ತ್ಕರದೊಳ್ ತನ್ನೊಪ್ಪುಲಂಪೂರ್ವನನನುಕರಿಸಲ್ ಮರ್ತ್ಯನಾವೊಂ ಸಮರ್ಥಂ ||573||

ಸತತಂ ಪ್ರಾಣಿವಧಂ ಪ್ರಸೋದಮನೃತಾಳಾಪಂ ವಚಃಪ್ರೌಢಿ ಸಂ |
ತತಮನ್ಯಾರ್ಥನಾಸೆಯಿಂ ಕೊಳ್ಳುದೆ ಪಲಂ ತೇಜಂ ಪರಸ್ತ್ರೀಯರೊಳ್ ||
ರತಿ ಸೌಭಾಗ್ಯಮನೂನಕಾಂಕ್ಷೆ ಮತಿಯಾಯ್ತೆಲ್ಲಗರ್ಮಾರ್ ಪೋಲ್ತಪರ್ |
ವ್ರತರತ್ನಪ್ರಕರಕ್ಕೆ ಪೇಳ್ ಘಟಿಯೊಳ್ಳಾಮಲ್ಲನಂ ಮಲ್ಲನಂ ||574||

ಮಲ್ಲಜನೂಪನ ಗುಣಗಣಮುಳ್ಳಸಿತಮಮನಾರೊ ನೆಱೆಯೆ ಪೊಗೞಲ್ ನೆಱೆವರ್ |
ಬಳ್ಳದೊಳಳೆದುದಧಿಯ ಜಳಮುಳ್ಳಸಿತಮನಾರೊ ಪವಣಿಸಲ್ ನೆಱೆವನ್ನರ್ ||575||

---

## 119 ಸಾಗರ 159. 1159

ಇದರಲ್ಲಿ ಚಾಳುಕ್ಯರಾಜನಾದ ಸೂರ್ಯಾದಿತ್ಯೈಲನ ಆಳಿಕೆಯಲ್ಲಿ **ಸಾಂತರ ಕಾಮನ** ಮಗಳಾದ ಅಳಿಯಾದೇವಿ ಸೇತುವಿನಲ್ಲಿ ಜಿನಬಸ್ತಿಯನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ತೈಲಸಾಂತರ

ಅದಟಿನಳುರ್ಕೆ ಸ್ಯೆಮೆಯ ಪಿರ್ಕೆ ಯಶೋಧನದಿರ್ಕೆ ರಾಜಮಂ |
ಬದ ಕಡುಗೆಯ್ಮೆ ದಾನಗುಣದೊಳ್ಪು ಗುಣಂಗಳ ತಳ್ಪು ಗಾಂಭ್ಯನಂ ||
ಪದದ ಪೊದಟಿಕ್ಕೆ ತೇಜದ ತರಕ್ಕೆ ಪರೋಧಿಯ ಬಾಱಿಕ್ಕೆ ತನ್ನದೆಂ |
ಬುದನೆನೆ ಪೆರ್ಚಿಯಂ ತಳೆದನಾನ್ಯನದೊಳ್ ನೃಪತೈಲಸಾಂತರಂ ||576||

### ಅಳಿಯಾದೇವಿಯ ಅಣ್ಣ ಜಗದೇವ

ಅಬಿರದ ಪೇರಲ್ಲಿ ನೃಪಗುಂಡದ ಮನ್ನೆಯರಿಲ್ಲ ಕೂಗಡಂ |
ಗದ ನರನಾಥರಿಲ್ಲ ನಡೆವೆನ್ನದ ರಾಜಕುಮಾರರಿಲ್ಲ ಚಾ ||
ಗದ ಬಳವಂತರಿಲ್ಲ ಕಡೆಮೊಟ್ಟಿಸಿ ಪೋಗದ ದುರ್ಗವರ್ಗಮಿ |
ಲ್ಲೊದವಿದ ಶೌರ್ಯಶಕ್ತಿಗೆ ಬಟಂ ಜಗದೊಳ್ ಜಗದೇವಭೂಪನಾ ||577||

ಉನ್ನತಿ ಮೇರುವಿಂಗೆ ಮಣಿಮಾಲಿಕೆಯಾದುದು ಸರ್ವಶಾಸ್ತ್ರಸಂ |
ಪನ್ನತೆ ಭಾರತೀವದನಮಾದುದು ದಾನಗುಣಂ ಸಮಸ್ತವಿ ||
ದ್ವನ್ನಿಕರಕ್ಕೆ ಕೆಯ್ಪುಡಿಪೂಲಾದುದು ತನ್ನ ಜಸಂ ಜಗಕ್ಕೆ ಕೆ |
ಯ್ಯನ್ನಡಿಯಾದುದೇನೆನೆವನೋ ಜಗದೊಳ್ ಜಗದೇವಭೂಭುಜಂ ||578||

## 120 ತುಮಕೂರು 9. 1160

**ಇದರಲ್ಲಿ ಹೊಯ್ಸಳರಾಜನಾದ** 1 ನೆಯ ನಾರಸಿಂಹನ ಸಾಮಂತ ಬಾಚಿದೇವನು ಕೈದಾಳ ದಲ್ಲಿ ಗಂಗೇಶ್ವರದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ನಾರಸಿಂಹ I

ದಿನಕೃತ್ತೇಜಕ್ಕೆ ತೇಜಂ ಸಮನೆನಿಸೆಪಡೆದುದ್ವೃತ್ತಕೋದಂಡಚಕ್ರಂ |
ತೆನಸುಂ ಸಾದೃಶ್ಯಮಾರ್ಪಂತಮರಕುಜಕೆ ಮಾಱಂತೆಲಂ ನೋೞ್ಪೊಡಂತಾ ||
ಘನಬಾಹಾಟೋಪ ಭೀಮಾರ್ಜುನನ್ನವನೆಳ್ದೊಮಾಜಿಯೊಳ್ ಪಾಟಿಯೊಂದೇ |
ಜನಮೆಲ್ಲಂ ಕೀರ್ತಿಸಲ್ ಧಾತ್ರಿಗೆ ಪತಿಯೆನಿಸಿದಂ ನಾರಸಿಂಹಕ್ಷಿತೀಶಂ ||579||

ಬಾಚಿದೇವ

ಸಿಂಗದ ಶೌರ್ಯಮಂಗಜನ ರೂಪು ಪುರಾರಿಯ ಭಕ್ತಿಯಾಗಮುಂ |
ಪಿಂಗದೆ ಕರ್ಣನೀವ ಗುಣಮಿಂದ್ರನ ಶ್ರೀಪತಿ ಭುಜಂಗರಾಜನೊಳ್ ||
ಸಂಗಳಿಸಿರ್ದ ಪೆರ್ಮೆ ಸುರಶೈಲದ ಬಣ್ಣನೊಱಲ್ಲು ಸಿಂದುಪೀ |
ಗಂಗನ ಪುತ್ರನೊಳ್ ಸುಭಟಬಾಚಿಯೊಳೊಂದಿನಿತಪ್ಪ ಸಾಜದೊಳ್ ||580||
ಸಾಮಂತಂ ಸುರಧೇನುಮತ್ತು ತಣಿಪಲ್ ಸಂಪ್ರಾರ್ಥರಾಭಾಗಮಂ |
ಸಾಮಂತಂ ರಿಪುಸೈನ್ಯಮಂ ತಱಿಯಲಾಪ್ಪಂತೆ ಕೃಷ್ಣಾರ್ಜುನಂ |
ಸಾಮಂತಂ ಶರಣೆಂದವಂಗೆ ದಯೆಯಿಂ ಗಂಭೀರರತ್ನಾಕರಂ |
ಸಾಮಂತಂ ಕಲಿಬಾಚಿಯಾರ್ಗಮಧಿಕಂ ಸ್ವೈರೀಭಪಂಚಾನನಂ ||581||

ಬಾಚಿಯ ತಂದೆ ಗಂಗ

ಭೀಮಂಗೆಣೆ ಭುಜಬಳದಿಂ | ರಾಮಂಗೆಣೆ ಶೌರ್ಯದೇಳ್ಗೆಯಿಂ ರೂಪಿನೊಳಾ |
ಕಾಮಂಗೆಣೆಯೆನಿಪೊಪ್ಪಿದ | ಸೀಮಣಿಯೊಳ್ ಗಂಗನೆನಿಪ ಧಾತ್ರಿ ಗಂಗಂ ||582||

ಕೈದಾಳ

ತುಱುಗಿದ ಮಾಮರದಿಂ ಬೆಳೆ | ದೆಱಗಿದ ಸಾರಂಗಪಾನಿಯಿಂ ಪೂಗೊಳದಿಂ |
ಕೆಱೆಯಿಂ ದೇವಾಲಯದಿಂ ನೆಱೆ ಸೊಗಯಿಸಿ ತೋರ್ಕುಮಾಗಳುಂ ಕೈದಾಳಂ ||583||

---

## 121 ದಾವಣಗೆರೆ 35. ಸು. 1160

**ಇದರಲ್ಲಿ ಕಳಚುರ್ಯರಾಜನಾದ** ಬಿಜ್ಜಳನ ಆಳಿಕೆಯಲ್ಲಿ ಕಾದಂಬಸೋಯಿದೇವನ ಆಜ್ಞೆಯಿಂದ ನಾಳ್ಪ್ರಭು ಸಂಕಗಾವುಂಡ ಮುಂತಾದವರು ಹರಿಹರ ದೇವರಿಗೆ ವೃತ್ತಿಯನ್ನು ಬಿಟ್ಟಂತೆ ಹೇಳಿದೆ.

### ಬಿಜ್ಜಳ

ಧರಣೀಚಕ್ರಕ್ಕಧಿಷ್ಠಾನಮಿದೆನಿಸಿದುದಾತ್ಮೀಯದೋರ್ದಂಡಮುನ್ಮ |
ತ್ತರಿಪುವ್ರಾತಾಸುವಾತಾಶನದೆ ತಣಿದುದಾಶಾತಖಡ್ಗಾಹಿ ವಿದ್ವ ||
ದ್ವರಚೇತಃಪ್ರೀತಿಸಂತರ್ಪಣದೆ ಸಫಲಮಾಯ್ತರ್ಥಮಾಶಾಕರೀಂದ್ರೋ |
ತ್ಕರಕರ್ಣೋತ್ಕೀರ್ಣಮಾಯ್ತುಜ್ವಳಯಶಮೆನಿಪಂ ಬಿಜ್ಜಳಕ್ಷೋಣಿಪಾಳಂ ||591||

ತೊಡರ್ದೊಡರಾತಿಭೂಭುಜರ ಬೆನ್ನೊವಲಂ ಹೆಡಮುಂಡೆಗೆತ್ತಿ ಕೂ |
ಗಿಡಿಸದೆ ಕೆತ್ತಿ ಮುನ್ನಡಿಗುರುಳ್ಚಿ ಕರುಳ್ಗಳನೆಯ್ದೆ ಸಾಜಿ ಗೋ ||
ಳಿಡಿಸದೆ ಗಂಟಲಿಂ ನೆಱೆಯೆ ಕಣ್ ಪೊಱಪಾಯ್ದಿನಮೆತ್ತಿ ಮುತ್ತಿ ಬಾ |
ಯ್ವಿಡಿಸದೆ ಮಾಣ್ಬನೇ ಸಮರದೊಳ್ ಕಲಿಬಿಜ್ಜಳದೇವಭೂಭುಜಂ ||592||

ಪುಸಿಯಲ್ತು ವೀರಭೋಜಸ್ಯ ! ವಸುಂಧರಾ ಎಂಬ ವಾಕ್ಯಮೆನೆ ಧರೆಯಂ ಸಾ |
ಧಿಸಿದಂ ತೆಂಕಬ್ಧಿಯ ಬಡ ! ಗ ಸೀಮೆ ಚಾಳುಕ್ಯಕಟಕಮೆನೆ ಬಿಜ್ಜನೃಪಂ ||593||

### ಬನವಾಸಿ

ಇದು ಸುಖದಾಗರಂ ಸಿರಿಯ ಪುಟ್ಟಿದ ಸಾಗರಮಾರಯಲಾ ಸಮು |
ಭ್ಯುದಯದ ಗೊತ್ತು ಸತ್ಯದ ತವರ್ಮನೆ ಚಿತ್ತಜನಿರ್ಕೆದಾಣಮು ||
ನ್ಮದಯುವತೀಜನಂಗಳೆಱೆವಟ್ಟು ಬುಧಾಳಿಯ ಜನ್ಮಭೂಮಿಯೆಂ |
ಬುದನೆನೆ ಶೋಭೆಯಂ ತಳೆದುದಿಂತನಿಶಂ ಬನವಾಸಿಮಂಡಲಂ ||594||

ದೆಸೆಯಂ ಪೊಂಬಣ್ಣದಿಂ ತಿಂಬುವ ಕಳಮವನಂ ದಿವ್ಯಸೌರಭ್ಯದಿಂದಾ |
ಗಸಮಂ ನಿರ್ವ್ಯಾಕುಳಂ ಪೂರಿಪ ಕುಸುಮವನಂ ಧಾತ್ರಿಯಂ ನಿಷ್ಯದಂಭಃ ||
ಪ್ರಸರಸ್ರೋತಂಗಳಿಂದಂ ಜಳಮಯಮೆನಿಪಾ ನಾಳಿಕೇರೀವನಂ ಸ |
ದ್ವಿಸದಿಂ ಹಂಸಾಳಿಯಂ ರಕ್ಷಿಪ ಜಳಜವನಂ ರಮ್ಯಮಾನಾಡೊಳಿಲ್ಲಂ ||595||

ನಿಱೆದಳಿರ್ದೊಂಗಲಂ ತಳೆದಶೋಕೆ ತಗುಳ್ದೆಳನೀರ ತಂದಲಂ |
ಕಱೆವೆಳದೆಂಗು ಬಿಣ್ಪೊನೆಗಳಿಂ ತೊನೆದಾಡುವ ಕೌಂಗು ಜೇರ್ಗಳಿಂ ||
ತುಱುಗಿರೆ ಕಾತ ಬಕ್ಕೆ ಸಲೆ ಕಱ್ತಲೆ ತಾಂ ನೆಲೆಗೊಳ್ವಿನಂ ದ.. |
ಡಿಱ್ದೆಳೆವಳ್ಳಿ ಕಣ್ಗೆಸೆವುವೆಲ್ಲಿಯುಮಲ್ಲಿಯ ನಂದನಂಗಳೊಳ್ ||596||

### ನಾಗರಖಂಡ

ಮದಮಧುಪಾಳಿ ಸುತ್ತದಲರ್ದೋಂಟಮಗುರ್ವಿನ ಗಂಧಶಾಲಿ ಸು |
ತ್ತದ ಬಯಲಂಚೆವಿಂಡು ನೆಱೆ ಸುತ್ತದ ಪೂಗೊಳನಿಕ್ಕುವಾಟಿ ಸು ||

ತ್ತ್ರದ ಪುರಮಂಬುಜಪ್ರತತಿ ಸುತ್ತ್ರದ ಪೆರ್ಗೆಱೆ ಕಾವನಾಜ್ಞೆ ಸು |
ತ್ತ್ರದ ಬನಮಿಲ್ಲೆನಲ್ ಸೊಗಯಿಸಿರ್ಪುದು ನಾಗರಖಂಡಕಂಪಣಂ ||597||

ಆಗಳುಮೆಸೆದಿರ್ಪುದು ಪು | ನ್ನಾಗವನದಿನೆಸೆವ ನಾಗಚಂಪಕವನದಿಂ |
ನಾಗಲತಾವನದಿಂ ಸಲೆ | ನಾಗರಖಂಡಂ ವಿಳಾಸರತ್ನಕರಂಡಂ ||598||

ಪರಿಕಿಪೊಡನೂನಸೌರಭ | ಭರಿತಶ್ರೀಖಂಡಮುಂ ದಿಟಂ ಪ್ರತಿಪದ್ವಿ |
ಸ್ಫುರಿತಶಶಿಖಂಡಮುಂ ನಾ | ಗರಖಂಡಮುಮಾರ ಮನಮುಮಂ ಸೋಲಿಸವೇ||599||

## ಕಾದಂಬ ಬರ್ಮದೇವ

ಜಗಮಂ ತನ್ನಾರ್ಪು ನಿಚ್ಚಂ ತಣಿಪೆ ದಶದಿಶಾಚಕ್ರಮಂ ತನ್ನ ಕೀರ್ತ್ತಿಗಂ |
ಱುಗಳಾದಂ ಪರ್ವೆ ತನ್ನಾಕೃತಿ ಜನನಯನಾನಂದಮಂ ಮಾಡೆ ದುಷ್ಟಾ ||
ರಿಗಳಂ ತನ್ನುಗ್ರಶೌರ್ಯ್ಯಂ ನೆಱೆ ಮಸುಳಿಸಿ ಕೀಱ್ಕಾಡೆ ತನ್ನುಜ್ವಳಕ್ಷ್ಮಾ |
ತ್ರಗುಣಂ ಮತ್ತಾದ್ಯರಂ ಧಿಕ್ಕರಿಸೆ ನೆಗೞ್ದನುರ್ವ್ವೀಶ್ವರಂ ಬರ್ಮದೇವಂ ||600||

## ಕಾದಂಬ ಬೊಪ್ಪದೇವ

ತತ್ತ್ನಯಂ ಘನಶೌರ್ಯ್ಯನು | ರುತ್ತ್ನಯಂ ವಿತರಣಾಂಶುಮತ್ತ್ನಯಂ ಲೋ |
ಕೋತ್ತ್ರರಕೌಚಗುಣೇಂದ್ರಸ | ರಿತ್ತ್ನಯಂ ಬೊಪ್ಪದೇವಭೂಪಂ ನೆಗೞ್ದಂ ||601||

ಹೋಗೆಡೆಗೆಟ್ಟು ಬಂಟನೊಳಕೆಯ್ದು ವಿರೋಧಿಯನಾಂಪ ವಂದಿಯಂ |
ನೀಗಲದೆಂತುಮಾಱದಱುತೀವ ನಿಜೇಪ್ಸಿತಕಾರ್ಯ್ಯವೊಂದನು ||
ದ್ಯೋಗಿಸಿ ಸತ್ಯಮಂ ನುಡಿವ ಭೂಭುಜರಂ ದಿಟಮಪ್ಪ ವೀರದಿಂ |
ಚಾಗದಿನೊಪ್ಪುವೊರ್ನುಡಿಯಿನಾಂ ಸರಿದರ್ಪೆನೆ ಬೊಪ್ಪದೇವನೊಳ್ ||602||

ಶರನಿಧಿ ಗುಣ್ಪಿನೊಳ್ ದೊರೆ ಸುರೇಂದ್ರಧರಾಧರಮುನ್ನತಿಕ್ಕೆಯೊಳ್ |
ದೊರೆ ಹರಿ ಶೌರ್ಯ್ಯದೊಳ್ ದೊರೆ ಸುರಾವನಿಜಂ ಘನದಾನವೃತ್ತಿಯೊಳ್ ||
ದೊರೆ ಶಶಿ ಕೀರ್ತಿಯೊಳ್ ದೊರೆ ಮನೋಭವನಂಗವಿಲಾಸದೇಱಿಗೆಯೊಳ್ |
ದೊರೆಯಿನಿತಕ್ಕುಮಲ್ಲದೆ ನೃಪರ್ ದೊರೆಯಪ್ಪರೆ ಬೊಪ್ಪದೇವನೊಳ್ ||603||

## ಬೊಪ್ಪದೇವವ ಹೆಂಡತಿ ಸಿರಿದೇವಿ

ಪರಿವಾರಕಲ್ಪಲತೆ ಪತಿ | ಸಿರೀಕ್ಷಣಭ್ರಮರಮಲ್ಲಿಕಾಲತೆ ವಿದ್ವ |
ತ್ಪರಪುಷ್ಪಚೂತಲತೆಯೆನೆ | ಸಿರಿದೇವಿಗವಲ್ತೆ ಸಾರ್ಥಪರ್ಯ್ಯಾಯಂಗಳ್ ||604||

### ಕಾದಂಬಸೋಯಿದೇವ

ಸ್ತ್ರೀಜಯಶೇಷಮಾಯ್ತು ರಿಪುರಾಜಕುಲಂ ನಿಜವೀರದಿಂದೆ ನಿ ।
ರ್ವ್ಯಾಜಕಮಾಯ್ತು ಧಾತ್ರಿ ನಿಜದಾನಗುಣೋನ್ನತಿಯಿಂದೆ ಪೂರ್ವಕ ॥
ಲ್ಪೋಚಿತಮಾಯ್ತು ಕಲ್ಕಿ ನಿಜಚಾರುಚರಿತ್ರದಿನೆಂದೊಡಣ್ಣ ವಾ ।
ಗ್ಗೋಚರಮೇ ಗುಣಾವಳಿ ನೃಪಾಳಶಿಖಾಮಣಿಸೋವಿದೇವನಾ ॥605॥

ಪೆಸರ್ವಡೆದಂ ನಿಜಾಚರಣಮಂ ಮಱೆವೆತ್ತು ಯುಗಂ ಕೃತಾಹ್ವಯಂ ।
ನಿಸದಮದೆಯ್ದೆ ವರ್ತಿಸೆ ನಿಜೋಜ್ವಳಕೀರ್ತಿಯನೊತ್ತುವೆತ್ತು ವ ॥
ರ್ತಿಸೆ ಹಗಲುಂ ಶಶಾಂಕರುಚಿ ರಾಮಶರಪ್ರಕರಂ ನಿಜೋದ್ಭವಾ ।
ಕ್ಪ್ರಸರಮನಿಂಬುವೆತ್ತು ಪರಿವರ್ತಿಸೆ ಸೋಮನೃಪಾಲನುರ್ವಿಯೊಳ್ ॥606॥

---

## 122 ತುಮಕೂರು 38. ಸು. 1160

**ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಪ್ರಧಾನ ಎರೆಯಂಗನ ಆಶ್ರಿತನಾದ ಈಶ್ವರನ ಹೆಂಡತಿ ಮಾಚವ್ವೆ ಜಿನಾಲಯವನ್ನು ಎತ್ತಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ನಾರಸಿಂಹ I

ಶ್ರೀಯಂ ಶ್ರೀವಕ್ಷದೊಳ್ ಸುಸ್ಥಿರಮೆನಿಸಿ ಜಗಂ ಬಣ್ಣಿಸಲ್ ತಾಳ್ದಿ ವೀರ ।
ಶ್ರೀಯಂ ದೋರ್ದಂಡದೊಳ್ ಶಾಶ್ವತಮೆನೆ ತಳೆದೀಲೋಕಸಂಸ್ತುತ್ಯವಾಣೀ ॥
ಶ್ರೀಯಂ ವಕ್ತ್ರಾಬ್ಜದೊಳ್ ವಾಗ್ವರನೆನೆ ಮೆಱೆದಂ ಯಾದವಾಮ್ನಾಯರಾಜ್ಯ ।
ಶ್ರೀಯಂ ಸ್ವಾಂಗೀಕೃತಂಮಾಡಿದ ನೃಪತಿಳಕಂ ನಾರಸಿಂಹಕ್ಷಿತೀಶಂ ॥607॥

### ಮಾಚವ್ವೆ

ಲಾವಣ್ಯಾಂಭೋಧಿಯ ವೇ । ಳಾವನವನಲತೆ ಸುಧಾಬ್ಧಿಸಂಭವಲಕ್ಷ್ಮೀ ।
ದೇವತೆಯೆನಿಸುವಳೀಶ್ವರ । ದೇವನ ವಧು ಮಾಚಿಯಕ್ಕನಬಳಾರತ್ನಂ ॥608॥

ದ್ವಿಗುಣಿಸುತಿರ್ಪುದಾದ ದರಹಾಸವಿಳಾಸನವೀನಚಂದ್ರಿಕಾ ।
ಪ್ರಗುಣಗುಣಂಗಳಿಂ ಕುವಳಯಕ್ಕೆ ವಿಳಾಸಮನೆಂದೊಡುದ್ಧಲೀ ॥
ಲೆಗೆ ನೆಲೆಯಾದ ಮಾಚಲೆಯನೂನಲಸದ್ವದನೇಂದು . ಯ ರೂ ।
ಢಿಗೆ ನೆಗೞ್ದಿಂದುಮಂಡಳದೊಳಿರ್ದ ಕಳಂಕಮನಾಗಲೀಗುಮೇ ॥609॥

---

## 123 ಹಾಸನ 72. 1160

**ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಂತ್ರಿ ಗೋವಿಂದರಾಜನು ಕೋರವಂಗಲದಲ್ಲಿ ಗೋವಿಂದೇಶ್ವರದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಗೋವಿಂದರಾಜ

ಕಲಿಕಾಲಕ್ಕಾಗಿದೋಡಿದಾಸುಚರಿತಂ ಮಾಕಾಂಬಿಕಾಗರ್ಭನಿ |
ಶ್ಚಲದುಗ್ಧಾಬ್ಧಿಯೊಳೊಂದಿ ಸಿಂದು ಒಱೆಯಂ ಮೆಯ್ಗೊಂಡು ಗಂಡೇಱೆ ತ ||
ತ್ಕಲಿಯಂ ತಾಂ ಬಿಡೆ ಬೆಂಕೊಳಲ್ಕೆ ತಲೆದೋಱಿತ್ತೆಂದು ಸರ್ವೋರ್ವರಾ |
ತಲಮೆಲ್ಲಂ ಪೊಗೞ್ವಂತದೇಂ ನೆಗೞ್ದನೋ ಗೋವಿಂದನಾನಂದದಿಂ ||610||

ನಡೆಗಲ್ಪಲ್ಲಿಯೆ ಧರ್ಮದಲ್ಲಿ ನಡೆಯಲ್ ಕಲ್ತಂ ಕಳಾಳಾಪದಿಂ |
ನುಡಿಗಲ್ವಲ್ಲಿಯೆ ಸತ್ಯಮಂ ನುಡಿವುದಂ ಕಲ್ತಂ ಪರಾರ್ಥಾರ್ಥಮಂ ||
ಪಡೆವಂಧೇ ಜಸಮಂ ತೆರಳ್ಚಿ ಪಡೆಯಲ್ ಕಲ್ತಂ ದಲೆಂದಂದು ಪೆ |
ರ್ಗಡೆ ಗೋವಿಂದನವೋಲದಾರ್ ಸುಕೃತಿಗಳ್ ವಿಶ್ವಂಭರಾಭಾಗದೊಳ್ ||611||

ನದಿಗಳ್ ಗಂಗೆಗಳಾದುವೆಯ್ದೆ ಗಿರಿಗಳ್ ಕೈಲಾಸಮಾಗಿರ್ದುವು |
ನ್ಮದಮಾತಂಗಕುಳಂ ಸುರೇಂದ್ರಗಜಮಾಯ್ತಂಭೋಧರಂ ಶಾರದಾಂ ||
ಬುದಮಾಯ್ತಬ್ಧಿಗಳೆಯ್ದೆ ದುಗ್ಧಸಿಧಿಯಾಯ್ತೆಂದಂದು ಗೋವಿಂದನಂ |
ದದಿಸಾರ್ ಕೀರ್ತಿಯನಿಂತುಪಾರ್ಜಿಸಿದವರ್ ಸನ್ಮಾನದಾನಂಗಳಿಂ ||612||

### ಗೋವಿಂದರಾಜನ ಹೆಂಡತಿ ಸಾಂತವೆ

ಪೊಗೞೆ ಜಗಮಿಂತಸಾರತ| ಮಗಣಿತಗುಣಮಣಿಗಣಾಂಗಭೂಷಣೆ ಬಗೆಯೊಳ್|
ಬಗೆಯದೆ ಪೆಱತಂ ಪತಿರೇ|ವ ಗುರುಃ ಸ್ತ್ರೀಣಾಮೆನುತ್ತೆ ಸಾಂತವೆ ನೆಗೞ್ದಳ್||613||

---

## 124 ಬೇಲೂರು 171. ಸು. 1160

**ಇದರಲ್ಲಿ ಹೊಯ್ಸಳರಾಜನಾದ 1 ನೆಯನಾರಸಿಂಹನ ಆಳಿಕೆಯಲ್ಲಿ ಜನ್ನಮಯ್ಯಹೆಗ್ಗಡೆ ಬೆಳವಾಡಿಯ ಜನ್ನೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಎರೆಯಂಗ

ಯಾದವವಂಶಕ್ಕಮರೆ ಪ | ಹೋದಯಮೆಱೆಯಂಗನೃಪತಿ ವಿನಯಾದಿತ್ಯಂ |
ಗಾವಂ ತನಯಂ ವಿನಯಂ | ಸೋದರಮೆನೆ ತನಗೆ ನೆಗೞ್ದ ಧೀರೋದಾತ್ತಂ ||614||

ವಿಷ್ಣುವರ್ಧನ

ಇಱಿದ ನೆಲಂಗಳಾಂತವರ ನೆತ್ತರಸಱಿಕ್ಕೆಸಲಾಱಿದೀಗಳುಂ।
ದುಱಿತೊಱೆಯುತ್ತುಮಿರ್ದಪುವು ತೀಂಬ ಕಟಂಗಳನೆಂಟುಮಾನೆಗಳ್ ॥
ತಱಿಱಿನಪ್ಪಿನಂ ಜಯದ ಲಚ್ಛಣಗಂಬದೊಳುರ್ದಿಕೊಳ್ವವಾ।
ವಱಿವೆವೆ ವಿಷ್ಣುವಿಕ್ರಮದುಪಕ್ರಮಮಂ ಪೊಗೞಲ್ ಕುಬುದ್ಧಿಗಳ್ ॥615॥

ಮದವದ್ವೈರಿಯನಾಂತು ಪೊಯ್ಯೆ ಜಯಶೀಲಂ ವಿಷ್ಣು ಪದ್ವಿಷ್ಟನು।
ರ್ಬಿದ ಕತ್ತಾಱದೆ ಪಾಱಿ ಬಿಟ್ಟ ತನಿಗಂಡಂ ಕಪ್ಪೆಗೂಂತಿರ್ಕುತಿ ॥
ರ್ದುದು ವೀರರ್ಕಳ ಬಿಟ್ಟ ತೋಳ್ ಪಿಡಿದ ಖಿಟ್ಗಂ ಪೊಯ್ವ ಸೂಱೆಗ್ರೀಱುತಿ।
ರ್ದುದಿದೇನದ್ಭುತಮಾಯ್ತೊ ವೀರವಿಭವಂ ಸಂಗ್ರಾಮರಂಗಾಗ್ರದೊಳ್ ॥616॥

ಮುಕ್ಕುಱಿಸಿರ್ಪಳಾದಿನರಪಾಳರ ಕೀರ್ತಿಯನಾತ್ಮಕೀರ್ತಿ ತಿಂ।
ದಕ್ಕುಳಿಸಿರ್ಪಳನ್ಯಬಳಮಂ ಒಸಿಱಿಂ ನಿಜಖಡ್ಗಕಾಳಿ ಕೆ ॥
ಯ್ಮಿಕ್ಕುದು ತೇಜಮಾಂ ಬಿರುದನೆಂಬನ ಪೀಸೆ ಕರಂಪುನಾರ್ಪಿನಂ।
ಮೊಕ್ಕಳಮಾಯ್ತು ರಾಜಗುಣಮೀಕ್ಷಿಸಲೀಕಲಿವಿಷ್ಣುಭೂಪನೊಳ್ ॥617॥

ಓರೆ ಅಗಲಾದ (?) ಭೂಮಿಗೆ। ಸೀರೆಱಿಗುವುದುಚಿತಮೆಱಗದುನ್ನತಭೂಭೃ।
ದ್ಧಾರಿಣಿಗೆ ಕೀಱಿ ಪರಿವುದು। ಭೋರೆನೆ ತರವಾರಿವಾರಿ ಬಿಟ್ಟಿಗನೃಪನಾ ॥618॥

ಕರವಾಳವಾಡೆ ಪಾಂಡ್ಯಂ। ಕರವಾಳಿಂ ಪೊಯ್ಸಳೇಶನಿಱಿಯಲ್ ನೋಡ।
ಲ್ಕರವಾಳಲ್ಲದೆ ಕಾದ।ಲ್ಕರವಾಳಿಲ್ಲಾಯ್ತು ನೋಡೆ ತಿಗುಳನ ಪಡೆಯೊಳ್ ॥619॥

ಕಮಠೇಂದ್ರಾದಿಗಳಾಂತು ಪರ್ಬಿದ ನೆಲಂ ನಿಷ್ಕಂಪದಿಂದಿರ್ದ ನಿ।
ನ್ನ ಮಹಾಬಾಹುವ ತೀನರ್ಸಿಂ ಕಳೆಗುಮೇ ಪಾಂಡ್ಯಂ ಕುಭೃನ್ಮಾತ್ರನ ॥
ಕ್ಕುಮೆಲೇ ಹೊಯ್ಸಳ ಮೇರುವಲ್ಲಿ ಭುಜಮಂ ಮಾಱುರ್ದ ದಿಗ್ದಂತಿದಂ।
ತಮನಿಂತಂತೊರಸಲ್ಕದುಂತೆ ಕಳೆವೈ ದೋರ್ದಂಡಕಂಡೂತಿಯುಂ ॥620॥

ಧುರದೊಳ್ ಬಂದೊಡ್ಡಿ ವೈರಿಪ್ರಕರಮಿರಲವಷ್ಟಂಭದಿಂ ಬಿಟ್ಟಿದೇವಂ।
ಕರವಾಳಂ ತೋಡಿಕೊಂಡಿಂಬಱಿಕಮೆಲೆ ಮಹಾದೇವ ಕಾಲಾಗ್ನಿರುದ್ರಂ ॥
ಗುರಿಗಣ್ ಬಂದಂತೆ ಮಾಕಾಳಿಗೆ ಗರವಿಡಿದಂತಿಂದ್ರದಿಗ್ದಂತಿ ಕಾಯ್ವಂ।
ಪರಿಘಂಗೊಂಡಂತಗುರ್ಬುರ್ಬಿದುದೆನೆ ಭರದಿಂ ಮೀಱಿ ಮಾಱಾಂಪನಾವಂ ॥621॥

ಒದವಲ್ ರಾಗರಸಪ್ರವಾಹಮುದಟಿಂ ಪೃಷ್ಣೋಂಜನಂ ಪೊಯ್ಯೆ ಕೂ।
ಡಿದ ತಾಳಂ ಲಯಮಂ ನೆಗೞ್ಚೆ ಜಡಿದಂ ಸೋಲಿಕ್ಕೆ ಗಂಡಾಜಿರಂ ॥

ಗದೊಳಂದಾಂತಿರಳೊಪ್ಪೆ ಬಾಹು..ಶಿಕ್ಷಾ ಯುಕ್ತ ಚಂಡಾಸಿದು |
ರ್ಮದವೀರಾರಿಸಿವಾರಣಾಭಿನಯಮಂ ಶ್ರೀವಿಷ್ಣು ಭೂಪಾಳನಾ ||622||

### ವಿಷ್ಣುವರ್ಧನನ ಮಹಿಷಿ ಲಕ್ಷ್ಮಿ

ನಗೆ ಸುಧೆಯೊಳ್ ಸಿಶಾರಮಣನೊಳ್ ವದನಂ ಸುರಕುಂಭಿಕುಂಭದೊಳ್ |
ಬಿಗಿದ ಕುಚಂ ಸುರದ್ರುಮದ ಪಲ್ಲವದೊಳ್ ಪದಪಲ್ಲವಂ ತಳ ||
ದೊಗೆದುವೆನಿಪ್ಪ ಪಟ್ಟದ ಮಹಾಸತಿ ಲಕ್ಷ್ಮಿಗೆ ಶೇಷನಾಂತ ಭೂ |
ಮಿಗೆ ಪತಿಯಪ್ಪ ವಿಷ್ಣು ಪತಿಯೆಂದೊಡದೊಪ್ಪುವುದೆಂತು ನೋಱಿಕ್ಕೊಡಂ ||623||

### ಜನ್ನಮಯ್ಯ

ಉತ್ತಮಜೀವನಕ್ಕೆ ಕುಮುದಕ್ಕೆ ಗಭೀರಗುಣಕ್ಕೆ ಸತ್ವಸ |
ದ್ವೃತ್ತಿಗತಿಪ್ರಸನ್ನತೆಗೆ ತನ್ನವೊಲಾಶ್ರಯಮಾಗಿ ಪೆರ್ಮೆಯಂ ||
ಪೆತ್ತುಗನಿಪ್ಪುದೊಂದು ಕೆಱೆಯಂ ನೆಱೆ ಕಟ್ಟಿಸಿ ದೇವಪೂಜನಾ |
ವೃತ್ತಿಗೆ ಜನ್ನಮಯ್ಯವಿಭು ತಾನದನಿತ್ತನಿದೇನುದಾತ್ತನೋ ||624||

---

## 125 ಬೇಲೂರು 193. 1160

ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಚಟ್ಟನು ಚಟ್ಟಸಮುದ್ರವೆಂಬ ಕೆರೆಯನ್ನೂ ಚಟ್ಟೇಶ್ವರವೆಂಬ ದೇವಸ್ಥಾನವನ್ನೂ ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿನಯಾದಿತ್ಯ

ವಿನಯಸ್ಫೂರ್ತಿನಿಧಾನಂ | ವಿನಯಾದಿತ್ಯಾಭಿಧಾನನರ್ಥಿನಿಧಾನಂ |
ವಿನತಜನಜಳನಿಧಾನಂ | ಜನಿಯಿಸಿದಂ ಶತ್ರುಘಾತಶರಸಂಧಾನಂ ||625||

### ಎರೆಯಂಗ

ಬಱಿಗಿದಗೆ ಹೊನ್ನ ಮಱಿಯೆನ| ಲೆಱಿವಂ ಮಾಱಾಂತ ಭೂಮಿಪಾಳರ ತಲೆಯೊಳ್|
ಬಱಿಪಿಡಿಬಂದದೆ ತೊಟ್ಟೆನ | ಲೆಱಿಗುವನೆಱೆಯಂಗದೇವನದಟರ ಗೋವಂ ||626||

### ವಿಷ್ಣುವರ್ಧನ

ಪಡುವಲ್ ಪಶ್ಚಿಮವಾರ್ಧಿ ಮೂಡ ನೆಗಱ್ದಾ ಕಾಂಚೀಪುರಂ ತೆಂಕ ನೋ |
ಱ್ಕೊಡೆ ಸಚ್ಛಂದನಮಂದಮಾರುತಚಳಶ್ರೀಖಂಡಷಂಡಾಚಲಂ ||

ಬಡಗಲ್ ಪೆರ್ದೊರೆಱೆ ಪೇರೆಯಾಗೆ ನೆಲನಂ ವಿಕ್ರಾಂತದಿಂದಾಳ್ದನೆಂ |
ದೊಪ್ಪೆ ಪ್ಪೋಳ್ಪನ್ನನದಾವನೀಭುಜಬಳಭ್ರಾಜಿಷ್ಣುವಂ ವಿಷ್ಣುವಂ ||627||

ತರದಿಂ ತಪ್ಪದೆ ತಾರಕಾತತಿಗಳಂ ತಾರಾಧ್ವದೊಳ್ ತಳ್ವದೊಂ |
ದೆರಪೆಂದಿಂತೆಣಿಸಲ್ಕನುಪ್ಪುದುಱುದಾಂತೀವಿಷ್ಣುಭೂಪಾಳನೊಳ್ ||
ಶರಣಾಯಾತರನಣ್ಮಿ ಸತ್ತ ನೃಪರಂ ಬೆನ್ನಿತ್ತರಂ ಲೆಕ್ಕಿಪ |
ಲ್ಕರಿದಿಂದ್ರಾರ್ಚಿತವಾಸುಕಿಪ್ರಭೃತಿಗಂ ಮೇಲಾದರಾರಾರ್ಪವರ್ ||628||

ವಿಷ್ಣುವರ್ಧನನ ಮಹಿಷಿ ಲಕ್ಷ್ಮಾದೇವಿ

ಪವಳಂ ಬಾಯ್ ನವಮೌಕ್ತಿಕಾಳಿ ಸುಲಿಪಲ್ ಶಂಖಂ ಕೊರಲ್ ಚಂದ್ರನೊ |
ಪ್ಪುವ ಭಾಳಂ ನವಮೇಘಜಾಳಮಳಕಂ ಸ್ವಚ್ಛಾಂಬು ಲಾವಣ್ಯಮು ||
ಣ್ಮುವ ಪೀಯೂಷರಸಂ ತೊಡಳ್ನುಡಿ ಜಳದ್ವೀಚೀಚಯಂ ತೋಳೆನಲ್ |
ನವದುಗ್ಧಾಬ್ಧಿವಿಳಾಸಲಕ್ಷ್ಮಿಯೆನೆ ಲಕ್ಷ್ಮಾದೇವಿ ಕಣ್ಗೊಪ್ಪುವಳ್ ||629||

ಧರಣೀಕಾಮಿನಿ ತನ್ನ ಪೇೞ್ದುದನೆ ಗೆಯ್ವಾಯತ್ತೆಯಾಗಿರ್ಪಳಾ |
ಗಿರಿರಾಜಾತ್ಮಜೆಯಪ್ಪ ಪೆಂಪಿನುಮೆಯುಂ ತನ್ನಾಕೆ ವಾಕ್ಕಾಂತೆಯುಂ ||
ಪಿರಿದುಂ ತಾಂ ನುಡಿದಂತೆ ಕಾಮಸತಿಯುಂ ತನ್ನನ್ನಳೆಂದಂದು ಸುಂ |
ದರಿಯರ್ ಭಾಗ್ಯವಿಳಾಸವಿಭ್ರಮದೆ ಲಕ್ಷ್ಮಾದೇವಿಗಾರಗ್ಗಳಂ ||630||

ನಾರಸಿಂಹ I

ಭುವನೈಕಾಶ್ಚರ್ಯಮಾಯ್ತಾತನ ಚರಿತಮದೆಂತೆಂಬೆ ಕಾದಂಬಸೈನ್ಯಂ |
ಕವಿಯೇೞಂಗೆಂದು ಬಂಕಾಪುರದೊಳಿರಲದಂ ಕೇಳ್ದು ಗರ್ಭಸ್ಥನಾಗಿ ||
ರ್ದವತಾರಂಗೆಯ್ದು ತಂ ತದ್ಬಳಮನರೆದು ತತ್ಸಾಮ್ರಾಜ್ಯಸಾಮ್ರಾಜ್ಯಸರ್ವ |
ಸ್ವವನಾದಂ ತಂದೆಗಿತ್ತಂ ಜಸಮೆಸೆವಿನೆಗಂ ನಾರಸಿಂಹಕ್ಷಿತೀಶಂ ||631||

ನಳನಾಭಾಗಾಂಬರೀಷಪ್ರಭೃತಪೃಥುಹರಿಶ್ಚಂದ್ರತಚ್ಚಂದ್ರಗುಪ್ತೋ |
ಜ್ವಳಕೀರ್ತ್ಯಾರಾಮರಾಮಾರ್ಜುನಪುರುಸಗರಖ್ಯಾತದುಷ್ಯಂತಧಾತ್ರೀ ||
ತಳಪಾಳರ್ ಕೂಡಿ ಬಂದೀಕಲಿಯುಗದೊಳಗೊಂದಾದವೋಲ್ ಕ್ಷತ್ರಧರ್ಮಂ |
ತೊಳಗಲ್ ವಿಖ್ಯಾತಿವೆತ್ತಂ ಯದುಕುಳತಿಳಕಂ ನಾರಸಿಂಹಕ್ಷಿತೀಶಂ ||632||

ಧುರದೊಳ್ ಶೂದ್ರಕನೂರ್ಜಿತಾರ್ಧಚಯದಿಂ ಧೈರ್ಯಕ್ರಮಕ್ಷತ್ರಿಯಂ |
ಪರಸೈನ್ಯಾಂಬುಧಿಬಾಡವಂ ದಲಿದಱೆಂ ತಾಂ ವರ್ಣಸಾಂಕರ್ಯಮಂ ||

ನರಸಿಂಹಂ ತಳೆದಿರ್ದನಿರ್ದುಮಿದು ಮತ್ತಾಶ್ಚರ್ಯಕಂ ವರ್ಣಸಂ |
ಕರಮೀರಾಷ್ಟ್ರದೊಳೇನುಮಿಲ್ಲೆನಿಸಿ ಧಾತ್ರೀಚಕ್ರಮಂ ರಕ್ಷಿಪಂ ||633||

ನುತಧರ್ಮಂ ರಿಪುಭೀಮನರ್ಜುನಯಶಂ ವಿದ್ವಿಷ್ಟಭೂಭೃದ್ಯಮಂ |
ಕ್ಷಿತಿರಾಮಂ ಕೃತಸೀಮಗೀತಭರತಂ ಭಾಸ್ವತ್ಸುಮಿತ್ರೋದ್ಭವಂ ||
ಕ್ಷಿತಿಪಾಳಂ ನರಸಿಂಹದೇವನವನೀಶತ್ರುಘ್ನನಂತುದ್ಭಭಾ |
ರತರಾಮಾಯಣಪೂರ್ವಪುಣ್ಯಪುರುಷಪ್ರಖ್ಯಾತಿಯಂ ತಾಳ್ದಿದಂ ||634||

ಸಬಳಂ ಜಂಜು ತುರಂಗಮಂಗಮೆರಡುಂ ಪಕ್ಷಂಗಳೆಂಬಂತಿರಲ್ |
ಸಿಬಿಡಂ ಪೊಣ್ಮಿದ ಪಕ್ಕರಕ್ಕೆ ಕುಡುಕಾಗಲ್ಕನ್ಯಸೈನ್ಯಂಗಳಾ ||
ತ್ರಬಲಂ ಪಕ್ಷದೊಳಿಕ್ಕಿ ರಕ್ಷಿಸಿದನಿಂತೀಗಂಡಭೇರುಂಡಸೈ |
ನ್ಯಬಲಂಬೆತ್ತಿರೆ ನಾರಸಿಂಹನೃಪನಾತ್ಮಾವಾಪ್ತಸಪ್ತಾಂಗಮಂ ||635||

ಉಱದಾಂತೊಡ್ಡಿದರಾತಿರಾಜಬಳಮಂ ತನ್ನೊಂದು ಮೆಯ್ಯಿಂದೆ ನಿಂ |
ದಿಱದೀವೀರನೃಸಿಂಹನಂತು ಜಸಮಂ ಪೆತ್ತಂದದೇಂ ತಪ್ಪೆ ಕಂ ||
ದೞಿಯಲ್ ಕಾಳಗಮಂ ಪೊಗೞ್ತೆಗೆಳಸುತ್ತಿರ್ಪರ್ ಕೆಲರ್ ಪೇೞದೇಂ |
ತೆಱೆಯೋ ಸುಂಕವೊ ಸೂಱೆಯೋ ಪರಕೆಯೋ ಪನ್ನಾಯಮೋ ಬಿಟ್ಟಿಯೋ||636||

ಸಿರಿಗೆಡೆಯಾದ ಪುಷ್ಕರದೊಳೊಂದಿದ ದೀರ್ಘಸುವೃತ್ತಹಸ್ತದಿಂ |
ಪರಿಣತಮಾದ ಕೋಪದಿನನುಗ್ರಹದಿಂ ಸ್ಥಿರಪದ್ಮವಕ್ತ್ರದಿಂ ||
ದುರುತರವಂಶದಿಂದೆಸೆವ ದಾನದಿನೀನರಸಿಂಹಭೂಭುಜಂ |
ಪರಿಚಿತಭದ್ರಲಕ್ಷಣದಿನೊಪ್ಪುವ ಬಪ್ಪನ ಗಂಧವಾರಣಂ ||637||

ಸಮರದೊಳಿಷ್ಟಮಾದ ಕವಳಂ ತನಗಾಗಿರಲನ್ಯಸೈನ್ಯದಿಂ |
ಸಮನಿಸೆ ಹಸ್ತಿನೀಸಹಿತ ಪದ್ಮಿನಿಯಲ್ಲಿ ವಿನೋದವಿಶ್ರಮಂ ||
ಸಮುಚಿತದಾನಲಕ್ಷ್ಮಿವೆರಸೊಲ್ದುವೊಲಾಡುವುದೊಕ್ತಿ ತನ್ನ ನಾ |
ಕ್ರಮಿಸುವೆನೆಂಬನಂ ನೆಲಕೆದರ್ಪುದು ಬಪ್ಪನ ಗಂಧವಾರಣಂ ||638||

ನೆಣದ ಬಣಂಬೆ ಪೆರ್ವೆಣದ ಬೆಟ್ಟು ಕರುಳ್ಗಳ ಬಳ್ಳವಳ್ಳಿ ಸಂ |
ದಣಿಸಿದ ಕಂಡ ವರ್ಧಿಸುವ ಪಂದಲೆ ನೆತ್ತರನೀಂಟೆ ರಾಗದಿಂ ||
ಕುಣಿಕುಣಿದಾಡಿ ಪಾಡುವ ನಿಶಾಟಿಯರೆಂಬಿವಱಂದೆ ಸಂಗರಾಂ |
ಗಣಮತಿರೌದ್ರಮಾಗಿಱದು ಕೊಲ್ವುದು ಬಪ್ಪನ ಗಂಧವಾರಣಂ ||639||

ಇವನ ಮಹಿಷಿ ಚಾಗಲೆ

ಪರಿವಾರಸುರಭಿಯೆನಿಸುವ | ನರಸಿಂಹನರೇಂದ್ರಮಹಿಷಿ ಚಾಗಲೆ ನಿಚ್ಚಂ |
ಪರಿಜನವತ್ಸಸ್ನೇಹದೆ | ತೊರೆದಮೃತಮನಱದು ಕಱಯುತಿರ್ಪುದು ಸಹಜಂ||640||

ಸಿರಿಸದ ಹೂವಿನ ಮಾಲೆಯ|ಸರಿಯೆನಿಸುವ ಸಿರಿಯನೆಸೆಯೆ ತಾಳ್ದಿದ ನಳಿತೋಳ್|
ನರಸಿಂಹಂಗಿದು ವಜ್ರ | ಸ್ಥಿರಪಂಜರಬಂಧಮೆನಿಸಿದುದು ಚಾಗಲೆಯಾ ||641||

ಚಟ್ಟ

ನರಸಿಂಹಕ್ಷೋಣಿಪಾಳಂಗಣುಗನಣುಗನೆಂತಂತಿರಲ್ ಸ್ವಾಮಿಸಂಪ |
ತ್ಪರಿಪೂರ್ಣಂ ಕರ್ಣನೆಂತಂತಧಿಕವಿತರಣಂ ದುಗ್ಧವಾರಾಶಿಯೆಂತಂ ||
ತಿರೆ ಗಂಭೀರಂ ಪ್ರತಾಪಾಸ್ಪಿತನುದಿತದಿನಾಧೀಶನೆಂತಂತೆನಲ್ ತಾಂ |
ಸಿರಿಗಂ ಬರ್ಮಂಗಮುರ್ವೀಜನಪನುತಗುಣಂ ಪುಟ್ಟಿದಂ ಕೂಸಚಟ್ಟಂ ||642||

ಭೃಗುಮತದೊಳಾದ ಪರಿಣತಿ | ಪೊಗೞಲ್ ದೇವಂಗಮರಿದು ನೆಟ್ಟನೆ ಚಟ್ಟಂ|
ತ್ರಿಗುಣಿಸುವ ತಿರುಗಿ ಪಾಯಿಪ|ನಿಗತಂದಿನಿನೆಡೆಯೊಳಾದಿಷ್ಟಗುವಂ ಮಿಗುವಂ ||643||

ಭೃಗುವಿಂ ನಾಕಪನಿಂದಂ | ನೆಗೞ್ದ ಬೇತಾಳನಿಂದೆ ಶೂದ್ರಕನಿಂದಂ |
ಬಿಗಿವೊಟ್ಟಜೆಯಿಂ ಚಟ್ಟಂ|ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ||644||

ಎಡೆಗಡಿವ ಬಿಡುವ ಬಿಡಿಸುವ | ಪಿಡಿದೊತ್ತುವ ಪೊತ್ತು ಪರಿವ ಕುತ್ತುವ ಬಲ್ಪು|
ಗ್ಗಡಮೊಟ್ಟಜೆಯಿಂ ಚಟ್ಟಯ|ನೊಡನಾರ್ ಮಾರ್ಕೊಲಸಿಲ್ಲಿ ಬಿಡಲೊಡಲಿಸು
ವರ್ ||645||

ಧರೆಗಾಳಂಬನಮಾಗಿ ಪೆಂಪು ಮುಗಿಲಂ ಮುಟ್ಟಿತ್ತೆನಲ್ ಕೊಟ್ಟು ಬೇ |
ಱ್ಪರ ಬೇಱ್ಪಂತುಟನೆನ್ನ ಪೊನ್ನ ಕೆಱದಿಂ ಸಾಫಲ್ಯಮಂ ತಾಳ್ದದಾ ||
ದರದಿಂ ಸದ್ವಿಜರಾಜಮಿತ್ರನಿಕರಂ ತನ್ನಂ ಸಮಾಶ್ರೈಸಿಯುಂ |
ಕಿರಿಯುತ್ತಿರ್ದಪುದಿನ್ನುಮೆಂದು ನಗುವಂ ಪೊಂಜೆಟ್ಟಮಂ ಚಟ್ಟಯಂ ||646||

ಕೂಸನೊಡನಾಡುವೆಡೆಯೊಳ್ | ಭಾಸುರಸುರಮಂತ್ರಿ ಮಂತ್ರದೊಳ್ ರಿಪು
ತಂತ್ರೋ |
ಗ್ರಾಸುರರಣರಂಗಾಗ್ರದೊ | ಳಾಸುರಕೇಸರಿವಿಳಾಸಿ ನೆಟ್ಟನೆ ಚಟ್ಟಂ ||647||

ರಂಬೆಗಮೂರ್ವಶಿಗಂ ಮಿಗಿ | ಲೆಂಬನಳೇಕಾಂತದಲ್ಲಿ ಪರವಧು ಸಲೆ ತ |
ನ್ನಂ ಬಯಸಿ ಬಂದು ನಿಲಲವ|ಳಂ ಬಗೆಯಿಂ ನೋಡನಳಿಪ ಮುಟ್ಟಂ ಚಟ್ಟಂ ||648||

ಕಲಿಯುಗಬಲಿ ಕಲಿಯುಗಶಿಬಿ । ಕಲಿಯುಗವಿದ್ಯಾಧರೇಶಿ ಕಲಿಯುಗಕರ್ಣಂ ।
ಕಲಿಯುಗಕಲ್ಪಕ್ಷ್ಮಾಜಂ । ಕಲಿಯುಗಸುರಧೇನುವೆನಿಸಿ ಕೊಟ್ಟಂ ಜಟ್ಟಂ ||649||

ಎಣಿಕೆವೆರಸೊಂದು ಪೊೞ್ತಿನ|ಗುಣದಿಂದಂ ಕುಡುವ ಕರ್ಣನೇಂ ಗಳ ಜಟ್ಟಂ|
ಗೆಣೆಯೆ ಧನಕನಕರಾಶಿಯು । ನೆಣಿಸದೆ ಕುಡುತಿರ್ಪನೀತನೊಲ್ದಾಪೊೞ್ತುಂ ||650||

ಪಿರಿದುಂ ಚಿತ್ರಾನ್ವಿತಮುಂ । ಬರಸಂಗತಮುತ್ತರೋತ್ತರಂ ತಾನೆನಲು ।
ರ್ವರೆ ತಣಿಯಲ್ ಮುದದಿಂ ಪೊಂ|ಗಱ್ವುದು ಜಟ್ಟಯನ ಹಸ್ತಮಪ್ರತಿಹಸ್ತಂ||651||

ಪಿರಿದುಂ ಭ್ರಾಂತಿಂದೆ ನಾಲ್ಕುಂ ಕಡಲ ಕಡೆವರಂ ನೋಡಿದೆಂ ನೋಡ ಬಂದೆಂ|
ಸಿರಿಯಿಂದಂ ಶೀಲದಿಂದಂ ಸನಯವಿನಯದಿಂ ದಾನದಿಂ ಧರ್ಮದಿಂದಂ ||
ಗುರುದೇವಬ್ರಾಹ್ಮಣಾಳೀಪರಿಜರಣಭವದ್ಭಕ್ತಿಯಿಂ ಶಕ್ತಿಯಿಂದಂ ।
ದೊರೆಯಂ ಜಟ್ಟಂಗೆ ಕಾಣೆಂ ಗಱಪಲಱಯೆನಾಂ ಚಾಗದಿಂ ಭೋಗದಿಂದಂ||652||

ಹರಹಾಸಂ ದರಹಾಸಮಾಗೆ ಹಿಮವತ್ಕ್ಷಿತಿಕ್ರೀಳಮುಂ ಶಂಭುಭೂ ।
ಧರಮುಂ ತುಂಗಕುಚಂಗಳಾಗೆ ಮುಖಮಾಗಲ್ ಚಂದ್ರಮಂ ಚಿನ್ನದಾ ||
ವರಣಂ ದುಗ್ಧಸಮುದ್ರಮಾಗೆ ದಶನಂ ದಿಗ್ದಂತಿದಂತಂಗಳಾ ।
ಗಿರೆ ತಾರಾನಖೆ ಕೂಸಜಟ್ಟನ ಯಶಶ್ರೀ ಲೋಕದೊಳ್ ವರ್ತಿಪಳ್ ||653||

ಕೆಱಗಂ ದೇಗುಲಕಂ ತಾ । ನಱಸಿದ ಧನಮನಿತುಮೆನಿಸಿ ಬಸದಿಂ ಜಟ್ಟಂ ।
ನೆಱದಂಬಱದೊಱವೋದುದು|ಕೆಱಗಂದೇಗುಲಕಮಾಗದುಱದವರರ್ಥಂ||654||

ಮಣ್ಣಾಸಮನೆನಿಸಿ ಹೊನ್ನಂ । ಮಣ್ಣಂಗೆಯ್ವವಗೆ ನೆಱಯೆ ಕೊಟ್ಟುಂ ಜಟ್ಟಂ।
ಮಣ್ಣುಂಡು ಪೋದುದೆನಿಸದೆ । ತಣ್ಣನೆ ತಣಿಪಿದನಶೇಷಮಂ ಜೀವನದಿಂ ||655||

ಸೀತಾಪ್ರಾಪ್ತಿಯೆ ಫಳಮಾ । ಸೇತುಗೆ ಜಟ್ಟಯನ ಧರ್ಮಸೇತುಗೆ ಫಳಮಾ ।
ಸೇತುಹಿಮಾದ್ರಿಸಮುದ್ರ । ಖ್ಯಾತಿಸುಪುಣ್ಯಂ ವಿಶಾಲಶಾಲಕ್ಷೇತ್ರಂ ||656||

ರಸಭಾವೋಜ್ಜ್ವಳಮೂರ್ತಿ ಪದ್ಮವದನಂ ಕಲ್ಯಾಂಘ್ರಿ ಚಕ್ರಸ್ತನಂ ।
ಬಿಸದೋರ್ವಲ್ಲರಿ ರಾಜಹಂಸಗಮನಂ ಮೀನಾಂಬಕಂ ನೀಳಿಕಾ ||
ವಿಸರತ್ಕುಂತಳಮೊಪ್ಪೆ ಕನ್ನೆಗೞಯುಂ ಜಟ್ಟಂ ಧನಂಗೊಟ್ಟು ಕ ।
ಟ್ಟಿಸಿ ಜಟ್ಟೇಶ್ವರಸದ್ವರಂಗೆ ಫಳಿಸಲ್ ಹಸ್ತೋದಕಂಮಾಡಿದಂ ||657||

### ಜಟ್ಟಸಮುದ್ರ

ಪಿರಿದಾಯಾಮದಿನರ್ಥಮುಂ ನೆರೆಪಿದಂ ಜಟ್ಟಂಬೊಲಿಂತೀಶಮುಂ ।
ದಿರಮುಂ ಪೂರ್ಣತಟಾಕಮುಂ ನಿಜಯಶೋರ್ಥಂ ಮೇರುವಾರಾಶಿಸು ||

ಸ್ಥಿರಮಪ್ಪಂತಿರೆ ಮಾೞ್ಪುದುಂತು ಚಪಳಂ ತಾನರ್ಥಮೆಂದಾಗಳುಂ ।
ನಿರತಂ ಚಟ್ಟಸಮುದ್ರಪೂರ್ದಱಿವುಗುಂ ವ್ಯಾಲೋಲಕಲ್ಲೋಲದಿಂ ॥658॥

ನಾಡೆನ್ನಂ ನಡುವಿಟ್ಟುಕೊಂಡುದದಱಿಂ ಮಜ್ಜೀವನಂ ಸಾರ್ಥಕಂ ।
ನಾಡಿಂದಂ ಪೊಱಗಾಯ್ತುಸೇವ್ಯಸಲಿಲಂ ತಾನುಪ್ಪುನೀರೆಂದು ಱೋ ॥
ಡಾಡುತ್ತಿರ್ಪ್ಪುದು ನಿರ್ಮಳಾಂಬುಭರಿತಶ್ರೀಸಾರಸಾರೋವರಂ ।
ನೋಡೀಚಟ್ಟಸಮುದ್ರಮಿಲ್ಲಿ ಲವಣಾಂಭೋರಾಶಿಯಂ ಪೆರ್ಮೆಯಿಂ ॥659॥

ಎಳನೀರಂ ಸವಿ ಲಾಘವಂ ಗಗನಮಂ ತಣ್ಪಾಪಿಮಾದ್ರೀಂದ್ರಮಂ ।
ತಳಿರಂ ಬಣ್ಣಿಗೆ ಶುದ್ಧಿ ಬಾಂದೊಱೆಯನಾಗಾಂಭೀರ್ಯಮಂಭೋಧಿಸಂ ॥
ಕುಳಮಂ ಕೀೞ್ಪಡಿಸುತ್ತಿರಲ್ಕೆ ಪಿಸರತ್ಸೌರಭ್ಯಸೌಲಭ್ಯಸಂ ।
ಕಳಿತಂ ಚಟ್ಟಸಮುದ್ರಮುದ್ಧೃತಜಗತ್ತಾಪಂ ಸಮಂತೊಪ್ಪುಗುಂ ॥660॥

ಫಳಮಂ ಪೊಗಱ್ಪೊಡಳುಂಬಂ । ಬೆಳೆವುದು ಮುಂದತ್ತ ಭುಕ್ತಿಯಂ
ಮುಕ್ತಿಯುಮಂ ।
ಜಳದಿಂ ಚಟ್ಟಸಮುದ್ರಂ । ಬೆಳೆವುದು ಪಿಂತಿತ್ತ ಕರ್ಪ್ಪುಮಂ ಕಱಿವೆಯುಮಂ ॥661॥

## ಚಟ್ಟೇಶ್ವರದೇವಾಲಯ

ನರತುರಗಾಳಿಯಿಂ ಗಜರಥಾವಳಿಯಿಂ ಪೊಸಪೊನ್ನರಾಶಿಯಿಂ ।
ಸ್ಥಿರಪರಿಪೂರ್ಣಮಾಯ್ತುದುಪೆ ರಾಜ್ಯಮದೇವುದು ಬೆಳ್ಳಿಕಟ್ಟ ಬೆ ॥
ಳ್ಕರಿಪುದು ಕೆಮ್ಮನೆಂದು ರಜತಾದ್ರಿಯಿಸಿಲ್ಲಯೆ ಬಂದು ನಿಲ್ವಿನಂ ।
ಗಿರಿಪತಿ ಶಂಭುಮಂದಿರಮನೆತ್ತಿಸಿದಂ ಗುಣಿ ಕೂಸಚಟ್ಟಯಂ ॥662॥

ಪಲರಂ ರಕ್ಷಿಸಿ ಮತ್ತಂ । ಪಲವಂ ಸಪದೇಗುಲಂಗಳಂ ಮಾಡಿಸಿದಂ ।
ನೆಲನೆಲ್ಲಮಱಿಯೆ ಚಟ್ಟಂ । ನೆರೆದೇಗುಲಮುಮನಿದೊಂದನೊಲ್ದೆತ್ತಿಸಿದಂ ॥663॥

## ಚಟ್ಟನ ಹೆಂಡತಿ ಮಹಾದೇವಿ

ಅಂತೆಸಿಸಿ ನೆಗೞ್ದ ಚಟ್ಟನ । ಕಾಂತೆ ಮನಃಕಾಂತೆ ಕಂತುಕಾಂತೆಯ ರೂಪಿಂ ।
ಕಾಂತತನುಕಾಂತಿಜಿತಶಶಿ । ಕಾಂತೆ ಮಹಾದೇವಿ ದೇವಿಯೆಸಿಸಳ್ ಗುಣದಿಂ ॥664॥

ಚರಣಾಬ್ಜಂ ಬೆರಲುಂಗುಟಂ ನಖಕುಳಂ ಮೋಂಗಾಲ್ ಮಡಂ ಜಂಘೆಗಳ್ ।
ವರವೃತ್ತೋರುನಿತಂಬಬಿಂಬಮಧರಂ ವಕ್ಷೋರುಹಂ ತೋಳ್ ತಳಂ ॥

ಕೊರಲೋಷ್ಠಂ ಸುಲಿಪಲ್ ಕಪೋಲಫಲಕಂ ಕಣ್ಪೂರ್ವ ಕರ್ಣಂ ನೊಸಲ್ |
ವರನೀಲಾಳಕಮೊಪ್ಪೆಯೊಪ್ಪಿದಪಳೀಮಾದೇವಿ ಮಾದೇವಿವೋಲ್ ||665||

---

## 126 ದಾವಣಗೆರೆ 84. 1160

**ಇದರಲ್ಲಿ ಕಳಚುರ್ಯ ರಾಜನಾದ ಬಿಜ್ಜಳನ ಆಳಿಕೆಯಲ್ಲಿ ಪಾಂಡ್ಯರಾಯನ ದಂಡನಾಯಕ ಸೇನಾಪತಿಯ ಹೆಂಡತಿ ಮಹಾದೇವಿದಣ್ಣಾಯಕಿತಿ ಅರಸಿಯಕೆರೆಯ ಮಾದೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಪಾಂಡ್ಯವಂಶ

ಸುರಪತಿಯ ಮಕುಟದೊಳ್ ನಿಜ | ಕರವಳಯಮನೊಡೆದು ಮೀನಲಾಂಛನ ಮನಳಂ |
ಕರಿಸಿದುದು ಮೇರುಗಿರಿಯೊಳ್ | ಪರಿಭಾವಿಸೆ ಪಾಂಡ್ಯನನ್ವಯಂ ಕೇವಳಮೇ||666||

### ಅರಸಿಯಕೆರೆ

ಸಿರಿಯ ತವರ್ಮನೆಯೆನಿಪುದು | ಧರಣೀದೇವತೆಗೆ ತಿಳಕಮೆನಿಪುದು ಪುಣ್ಯಾ |
ಕರಮೆನಿಪುದು ಸೇನಾಪತಿ | ಯರಸಿಯಕೆರೆಯಚ್ಚಿಗೌಂಡನೊಳ್ಪಿನಿಂದಂ ||667||

---

## 127 ಅರಸಿಯಕೆರೆ 117. 1161

**ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಳಿಕೆಯಲ್ಲಿ ಕೆಲ್ಲಂಗೆರೆಯ ಮಹಾಜನಂಗಳು ಧರ್ಮೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿಷ್ಣುವರ್ಧನ

ಮಲಿರಾಜರಾಜನೆನಿಪಂ | ಕಲಿಕಾಲಯುಧಿಷ್ಠಿರಂ ಚರಿತ್ರದಿನೆನಿಪಂ |
ಬಲಿಶಿಬಿಖಚರೇಶ್ವರರಿಂ | ಸಲೆಯಧಿಕಂ ದಾನದೆಡೆಗೆ ವಿಷ್ಣುನೃಪಾಲಂ ||668||

### ನಾರಸಿಂಹ I

ಅರಿನರಪಾಲಕೋಗ್ರಮದಕುಂಭಿವಿಷಾಣಮನೊತ್ತಿ ಕಿೞ್ತು ಮಾ |
ಣ್ದಿರದೆ ಕಱುತ್ತು ಪೊಯ್ದು ಜಮುವಿಂ ? ತ್ರಿಗುಮೌಕ್ತಿಕಮುಣ್ಮೆ ಪಾಯೆ ಭೀ ||
ಕರತರಮಪ್ಪ ತನ್ನ ನಖಶಾಖೆಗಳಿಂದಮೆ ನೀಳ್ದ ನಾಗಳುಂ |
ನರಹರಿಯಂತಿರನ್ಯನೃಪಸಿಂಧುರಮಂ ನರಸಿಂಹಭೂಭುಜಂ ||669||

### ಕೆಲ್ಲಂಗೆರೆ

ಭೃಂಗನಿನಾದದಿಂ ಪಿಕನಿನಾದದಿನೊಳ್ಗಿಳಿವಿಂಡಿನೋಳಿಯಿಂ |
ಮಂಗಳಲಕ್ಷ್ಮಿಯಿರ್ಪ ವನದಂತಿರೆ ಶೋಭಿಸುವಾ ಬನಂಗಳಿಂ ||
ತುಂಗತರಂಗದಿಂದೆಸೆದು ತೋರ್ಪ ತಟಾಕದಿನೊಳ್ಪುವೆತ್ತ ಕೆ |
ಲ್ಲಂಗೆಱೆಯಿಂದಮಿಂದ್ರನಮರಾವತಿಯಂತೆ ಬಸಂತಮಾಗಳುಂ ||670||

---

## 128 ದಾವಣಗೆರೆ 42. ಸು. 1162

**ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಆಳಿಕೆಯಲ್ಲಿ ಬಮ್ಮರಸದಂಡನಾಯಕನು ಹರಿಹರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ಕನ್ನಮದೇವ

ಪೆಸರ್ವಡೆದಂ ನಿಜಾಕೃತಿ ವಿದಗ್ಧವಧೂಜನವಶ್ಯವಿದ್ಯೆಯಿಂ |
ಬೆಸಕಮನಪ್ಪುಕೆಯ್ಯೆ ನಿಜವಿಕ್ರಮಮುದ್ಧತನಾಶಹೇತುವೆಂ ||
ಬೆಸಕಮನಪ್ಪುಕೆಯ್ಯೆ ನಿಜಕೀರ್ತಿಯಪೂರ್ವಸುಧಾಂಶುರೋಚಿಯಿಂ |
ಬೆಸಕಮನಪ್ಪುಕೆಯ್ಯೆ ಧರಣೀಪತಿಕನ್ನಮದೇವನುರ್ವಿಯೊಳ್ ||671||

### ಬಿಜ್ಜಳ I

ಅವರೊಳಗಗ್ರಜಂ ನೆಗೞ್ದ ಬಿಜ್ಜಳದೇವನನೂನಸಾಹಸೋ |
ದ್ಭವನಿಧಿ ಶತ್ರುಮಂಡಳಿಕಮಂಡಳಿಯಂ ನಿಜಮಂಡಳಾಗ್ರದಿಂ ||
ದವನತವೃತ್ತಿಗಾಳ್ದೆಸಕೆದಂದು ಜಗದ್ವಿಜಿಗೀಷುವೃತ್ತಿ ಭೂ |
ಭುವನದೊಳೆಕ್ಕಲಾವಣಮವಂಗೆನೆ ನಿಂದನಿಳೇಜ್ಯರಾಜ್ಯದೊಳ್ ||672||

### ಬೋಗಮ

ಅಂತರನಂತಕಾನನದೊಳಟ್ಟಿಸಿ ಮತ್ತುಱೆನೋಡಿದನ್ಯಭೂ |
ಕಾಂತರನಂತಕಾನನದೊಳಟ್ಟಿರೆ ಶಾಸಿಸಿ ಲೀಲೆಯಿಂ ಪದಾ ||
ಕ್ರಾಂತರನಾಢ್ಯವೃತ್ತಿಗೆ ಸಮಂತು ನಿಯೋಜಿಸಿ ಧಾತ್ರಿ ಬಣ್ಣಿಪ |
ನ್ನಂ ತಱೆಕಾಡ ಬೋಗಮನೃಪಂ ಮೆಱೆದಂ ನಿಜರಾಜನೀತಿಯಿಂ ||673||

### ಪೆರ್ಮಾಡಿ

ಅರಿಭೂಪಾಳರ ಮೀಸೆ ಭೋಂಕೆನೆ ಕಱಂಕೇಱಿ ವ್ವನ್ನೆಗಂ ತೇಜಮಾ |
ವರಿಸಿತ್ತುರ್ವಿಯನಾಪದಬ್ಧಿ ಪಿಸಿಮಗ್ನೋನ್ಮಗ್ನರಂ ದಾನಮಾ ||

ದ್ಧರಿಸಿತ್ತರ್ಥಿಜನಂಗಳಂ ಮನುಪವಿತ್ರಾಚಾರಮಂ ತಾಂ ತಿರ |
ಸ್ಕರಿಸಿತ್ತಾತ್ಮಚರಿತ್ರಮೇನಧಿಕನೋ ಪೆರ್ಮಾಡಿಭೂಪಾಳಕಂ ||674||

## ಬಿಜ್ಜಳ II

ಉದಯಿಸಿದಂ ಪ್ರತಾಪನಿಧಿ ಬಿಜ್ಜಳದೇವಧರಾಧಿನಾಥನಿ |
ತ್ತುದಯಿಸೆ ಯೌವನೋದ್ಧತವಧೂಕ್ಷತಿಗುತ್ಕಳಿಕಾಪ್ರಪಂಚಮು ||
ತ್ತುದಯಿಸೆ ದುರ್ಮದಾರಿಧರಣೀಶ್ವರಮಾಲೆಗನೂನಭೀತಿ ಮು |
ತ್ತುದಯಿಸೆ ಬಾಂಧವಕ್ಷಿತಿತಳೇಶ್ವರಸಂತತಿಗುತ್ಸವೋತ್ಸವಂ ||675||

ಸಲೆ ಸಿಲೆ ವೇಳೆಯೆಂದು ಭಯದಿಂ ಕಡಿದಂಗುಳಿ ಮೆಲ್ದ ಬಾಯ ತಂ |
ಬುಲಮೆಳಕೊಂಡು ಮಂಡ ಮಡಗೂಡಿರದಂಕುಸವಾಗಿ ಕೊಯ್ದ ಸು ||
ಗ್ಗಿಲೆಯಿವು ಕಾಗುಮಲ್ಲದೆ ವಿರೋಧಿನೃಪರ್ ಜಲದಂಕರಾಮನೊಳ್ |
ಮಲೆದಿದಿರಾದೊಡಾಳ್ ಕುದುರೆಯಾನೆ ರಥಂ ನೆಱೆ ಕಾಯಲಾರ್ಪವೇ ||676||

ನೊಸಲೊಳ್ ಸಾಮ್ರಾಜ್ಯಪಟ್ಟಂ ನೆಲಸಲೊಡನೆ ದೋರ್ಗರ್ವದಿಂ ಮನ್ನೆಯರ್ಗುರ್ |
ಬ್ಬಸಮಂ ಮುಂ ಮಾಡಿದಂ ಮತ್ತಿರೆಯಿರೆ ಜಲದಿಂ ಮಂಡಳೀಶರ್ಗೆ ಬೇರೊಳ್ ||
ಬಿಸಿನೀರಂ ಪೊಯ್ದನಂತಂತಿರೆಯಿರೆ ಒಱೆಯಂ ರಾಯರಂ ಕೂಡೆ ನಿರ್ಮೂ |
ಳಿಸಿದಂ ಚಕ್ರಾಧಿನಾಥೋಜ್ಜ್ವಳಮುಕುಟತಿಳಕಂ ಬಿಜ್ಜಳಕ್ಷೋಣಿಪಾಳಂ ||677||

ಬದವಿದ ಗರ್ವದಿಂ ಬೆಸೆವ ರಾಯರ ಬೆನ್ದೊವಲಂ ಪದಿರ್ಚಿ ರಾ |
ಗದಿ ಸಿಱಿತಂದ ದಂತಿಹಯಸಂತತಿಯಲ್ಲದೆ ಹೊನ್ನನಿತ್ತು ಕ ||
ಟ್ಟಿದ ಕರಿ ವಾಜಿ ಸಾಹಣದೊಳೆಲ್ಲಿಯುಮಿಲ್ಲೆನಿಪೊಂದು ಸಾಹಸಾ |
ಭ್ಯುದಯಮನೊಂದೆ ನಾಲಗೆಯೊಳೇವೊಗಳ್ವೆಂ ಗಿರಿದುರ್ಗಮಲ್ಲನಾ ||678||

ಮುನಿದಿದಿರಾಂತ ಭೂಭುಜರ ನೆತ್ತಿಯನಟ್ಟೆಯೊಳಾೞಿ ಪೊಯ್ಯುದಿ |
ರ್ಪನೆ ಸುಲಿಪಲ್ ಘಳಿಲ್ಲೆನುಗೆ ಬಾಳಿನ ಕೀಱ್ವರಜಿಂದೆ ಮೋದದಿ ||
ರ್ಪನೆ ನಡುಬೆನ್ನೊಳಗ್ಗರುಳನೊರ್ಮೆಯೆ ನೆಯ್ದಲ ಕಾವನುರ್ಚುವಂ |
ತನಿ[illegible]ಮನುರ್ಚದಿರ್ಪನೆ ರಣಾಗ್ರಣಿ ಬಿಜ್ಜಳದೇವಭೂಭುಜಂ ||679||

ಕೊಡದಿನುದಯಿಸಿದಗಸ್ತ್ಯಂ | ಕಡಲಂ ಪೀರ್ದಂತೆ ಮಂಡಳೇಶ್ವರರಾಜ್ಯ |
ಕ್ಕೊಡೆಯನೆನೆ ಪುಟ್ಟಿ ಪೀರದಿ | ನೆಡೆಗೊಂಡಂ ಸಕಲಧಾತ್ರಿಯಂ ಬಿಜ್ಜನೃಪಂ ||680||

### ಕಸಪಯ್ಯನಾಯಕ

ಚತುರುಪಧಾವಿಶುದ್ಧಮತಿ ಚಿತ್ತಭವಪ್ರತಿರೂಪಸುಂದರಾ |
ಕೃತಿ ಸುರಶೈಲಸನ್ನಿಭಮಹೋನ್ನತಿ ವಿಪ್ರಜನೇಷ್ಟದಾನಸಂ ||
ಗತಿ ರಿಪುವೃಂದದುರ್ಮ್ಮದಸಿವಾರಣಕಾರಣಚಾರುಸಾಹಸ |
ಸ್ಥಿತಿ ಕಸಪಯ್ಯನಾಯಕನೊಳೆಯ್ದೆ ಜಗನ್ನುತಿವೆತ್ತು ತೋಱುಗುಂ ||681||

---

## 129 ಶಿಕಾರಿಪುರ 102. 1162

**ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನು ಒಳ್ಳಗಾವೆಯ ಕೇದಾರೇಶ್ವರದೇವರಿಗೆ ಕಿರುಗೇರಿಯನ್ನು ಬಿಟ್ಟಂತೆ ಹೇಳಿದೆ.**

### ಬಿಜ್ಜಳ

ಅಸುಹೃದುದಗ್ರಭೂಭುಜರ ತೇಜದ ದಳ್ಳುರಿಯಂ ಸಮಂತು ಮು |
ಱಿಗ್ಗಿಸೆ ನಿಜದೋರ್ಬ್ಬಲಪ್ರಥಿತಖಡ್ಗಸಮುಜ್ಜಲದುಜ್ಜವಾರಿಸಂ ||
ಪ್ರಸರಮಶೇಷಭೂತಲಮನಿಲ್ಲ ಮಹೀಭುಜರನ್ಯರೆಂಬಿನಂ |
ಪೆಸರ್ವಡೆದೀಗ ಬಿಜ್ಜಳಮಹೀಭುಜನೊರ್ವ್ವನೆ ತಾನೆ ತಾಳ್ದಿದಂ ||682||

ವೀರಾರಾತಿನೃಪೋತ್ತಮಾನನಲಸದ್ವಲ್ಮೀಕಸಂಚಾರಿ ದು |
ರ್ವ್ವಾರೋದಗ್ರತದೀಯರಕ್ತಜಳಧಾರಾಕ್ಷೀರಸಂಸೇವಿ ತ ||
ಜ್ಜಾರಪ್ರಾಣಸಮೀರಪಾಯಿ ಪಿರಿದುಂ ಮತ್ತಂ ಕ್ಷುಧೋಗ್ರಾನಳಾ |
ಧಾರಂ ಭೀಕರಖಡ್ಗಕಾಳಭುಜಗಂ ಶ್ರೀಬಿಜ್ಜಳಕ್ಷ್ಮಾಪನಾ ||683||

ಕೆದಱಿದರಾತಿಭೂಪರ ಶಿರೋಮಣಿಗಳ್ ನೆಗಱ್ದಾಲಿಕಲ್ಗಳು |
ರ್ವ್ವಿದ ಭಟಶಸ್ತ್ರಸಂಚಯದ ಮಿಂಚುಗಳೊಪ್ಪುವ ಮಿಂಚುಗಳ್ ಸಮಂ ||
ತೊದವಿದ ರಕ್ತಜಾಳಜಳದಾರೆಗಳಾಗಿರೆ ವರ್ಷಮಿಂತು ಪೊಂ |
ಲ್ತುದು ಮಱಿಗಾಲಮಂ ನೆಗಱ್ದ ಬಿಜ್ಜಳದೇವನ ಸಂಗರಾಂಗಣಂ ||684||

ಸುರಿದ ಕರುಳ್ ಕರುಳ್ ತೊಡರೆ ಬಿಱ್ದ ಭಟರ್ ಭಟರಸ್ತ್ರಘಾತದಿಂ |
ದುರುಳ್ದ ಹಯಂ ಹಯಂಗಳೆಡೆಯೊಳ್ ಕುಣಿವಟ್ಟೆಗಳಟ್ಟೆಯಂ ಭಯಂ ||
ಕರತರಮಾಗೆ ನೋಱ್ಪ ಮರುಳಾಮರುಳಂ ಗೆಲೆ ಸೋವ ತನ್ನಿಶಾ |
ಚರಿಯರೆನಲ್ಕೆ ನೋಡಲರಿದಾಯ್ತು ರಣಂ ಗಿರಿದುರ್ಗ್ಗಮಲ್ಲನಾ ||685||

ನುಡಿದನೆ ಮೇರುಮಂದರಶಿಲಾಕ್ಷರಮಿತ್ತನೆ ಬೇಡಿ ಬಂದವಂ |
ಗೆಡಱಿನ ಕೇಡು ಕಾದನೆ ಸರಣ್ಬುಗುತಂದ ನೃಪಾನ್ವಯಕ್ಕೆ ಬೆಂ ||
ಬಿಡದಜರಾಮರತ್ವಮೆನಲಿನ್ನನನನ್ಯನರೇಂದ್ರರೊಳ್ ಸಮಂ |
ನುಡಿಯದಿರಣ್ಣ ಬಿಜ್ಜಳಮಹೀಪನಸಾಹಸರೌದ್ರರೂಪನಂ ||686||

### ಬಿಜ್ಜಳನ ಮಂತ್ರಿ ಕಸಪಯ್ಯನಾಯಕ

ಕಸಮೆನಿಸಿತ್ತಿರ್ದೊಡಂ ನಿಜನಿರೀಕ್ಷಣಮಾತ್ರದೆ ತತ್ಕ್ಷಣಂ ಕರಂ |
ಕಸವರಮಾಗಿ ತೋರ್ಪುದು ನಿಜೇಷ್ಟವಿಶಿಷ್ಟಜನಕ್ಕೆ ಸತ್ಕುಲ ||
ಪ್ರಸವಜನಕ್ಕೆ ತದ್ಗೃಹಗೃಹಂಗಳೊಳಂತದಱಿಂದಮೆಲ್ಲಿಯುಂ |
ಕಸಪಯನಾಯಕಾಖ್ಯೆ ಪೆಸರ್ವೆತ್ತುದು ವಾರ್ಧಿಪರೀತಧಾತ್ರಿಯೊಳ್ ||687||

### ಬಮ್ಮರಸ

ತನ್ನಧಿಕಾರಮೆಂಬಮೃತವೃಷ್ಟಿಗಳಿಂ ಬೆಳೆಯಿಪ್ಪನೆಯ್ದೆ ವಿ |
ದ್ಯೋನ್ನತವಿಪ್ರಶಿಷ್ಟಜನಸಸ್ಯಚಯಂಗಳನೆಂದು ಸಂತತಂ ||
ಸನ್ನುತಿಗೆಯ್ಕೆ ತೀರ್ಪುದವನೀತಳಮುದ್ಧಕಳಾಪಿಶೇಷಸಂ |
ಪನ್ನನನೊಲ್ದು ಕೆಯ್ಮುಗಿದು ಬರ್ಮನನಾಶ್ರಿತಶರ್ಮಕರ್ಮನಂ ||688||

ಅಧಿಕಾರಿಗಳರೆಬರ್ ಬುಧ | ರ್ಗಧಿಕಾರಿಗಳೆನಿಪರಲ್ಲದಿಂತೀತನವೋ |
ಲಧಿಕಾರಿಗಳೆನಿಸಪರಾರ್ | ಬುಧರ್ಗೆನಿಪಂ ಬರ್ಮನಖಿಳಬುಧಜನಶರ್ಮಂ ||689||

### ಬಮ್ಮರಸವ ಕರಣಂಗಳ್

ಪರಹಿತಕಾರ್ಯರಪ್ಪ ಸಮಷ್ಟೈಶ್ವರಬಾಧಿತಮಂತ್ರವೀರ್ಯರು |
ದ್ಧುರತರಸಿಂಹಶೌರ್ಯರುಪಧಾಚತುರಾಧ್ವರವಾರ್ಯಕಾರ್ಯರು ||
ತ್ಸ್ಫುರಿತಯಶೋನದತ್ತ್ರಬಳತೂರ್ಯರುಪಾರ್ಜಿತಪುಣ್ಯವರ್ಯರೀ |
ಶ್ವರಪದಭಕ್ತಿಧುರ್ಯರೆನಿಪರ್ ಕರಣಂಗಳಿದೇಂ ಮಹಾತ್ಮರೋ ||690||

### ರವಿದೇವ

ಅಲರ್ಗೆಮ ಮಂತ್ರಿಮುಖ್ಯರ ಮುಖಾಂಬುರುಹಂ ರವಿದೇವಮಂತ್ರನಿ |
ರ್ಮಲಕಿರಣಂಗಳಿಂ ಮುಗಿವುವೇಕೆಯೊ ಹಸ್ತಸರೋರುಹಂಗಳು ||
ಳ್ಕಲರ್ದಪುವೇಕೆ ಬಮ್ಮರಸನುದ್ಧತರಾಜ್ಯಸಮಗ್ರದೇವತಾ |
ಲಲಿತವಿಲೋಚನೋತ್ಪಲಮುದಚ್ಚರಿ ಸೊಱಿಕ್ಕೊಡಶೇಷಧಾತ್ರಿಯೊಳ್ ||691||

### ವಾಮಶಕ್ತಿಪಂಡಿತ

ವದನಂ ವಾಣೀನರ್ತನ ಸದನಂ ನಿಜಹೃದಯಮಮಳಮಣಿಮಯಸದನಂ |
ಮದನಹರಂಗೆನೆ ಭೂತಳ | ವಿದಿತಯಶಂ ವಾಮಶಕ್ತಿಪಂಡಿತದೇವಂ ||692||

---

## 131 ಹುಣಸೂರು 137. 1162

**ಇದರಲ್ಲಿ ಹೊಯ್ಸಳರಾಜನಾದ ನಾರಸಿಂಹನು ಧರ್ಮಾಪುರದ ಕೇಶವದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.**

### ವಿಷ್ಣುಸ್ತುತಿ

ಶ್ರೀಯುವತಿಯುಮವನಿವಧು | ಶ್ರೀಯುವತಿಯುಮುರದ ಕೆಲದೊಳಂ
ಸೋಂಕಿರೆ ನಾ |
ರಾಯಣನಾಗಳ್ ಕಲ್ಪಲ | ತಾಯುಗ್ಮದ ನಡುವೆ ಕಲ್ಪಕುಜದಂತಿರ್ದಂ ||693||

### ವಿಷ್ಣುವರ್ಧನ

ಜವನುಂ ತನ್ನಯ ಗಂಡಲಕ್ಷಣಮೆನಿಪ್ಪಾ ಮೀಸೆಯುಂ ತಿರ್ದಲಿಂ |
ಜವಿನಂ ಕಂದುಗುಮೆಂದು ಕಾಲುಗುರ್ಗಳಾನಮ್ರಾರಿಗಳ್ ಸುಯ್ಯಲಿಂ ||
ಜವಿನಂ ತೇಜದ ಬೆಂಕೆಯಿಂದಮೆಮೆ ಸೀಗೆಂದುದ್ಧತರ್ ನೋಡಲಿಂ |
ಜವಿನಂ ವಿಕ್ರಮವಿಭ್ರಮಂ ನೊಗಯಿಸಿತ್ತೀವಿಷ್ಣುಭೂಪಾಲನೊಳ್ ||694||

### ನಾರಸಿಂಹ |

ಮಾಳವನಕ್ರಿದುಕ್ಕಿ ಬಿಡಸೀಲಿಗೆ ಪಾಂಡ್ಯನ ಕಾಳಿಜಕ್ಕೆ ನೇ |
ಪಾಳನ ಬೆನ್ನ ನುಂಟಿಗೆಗೆ ಚೋಳನ ಕಾರಡಗಿಂಗೆ ವಂಗಭೂ ||
ಪಾಳನ ಜಿಕ್ಕುಗಂಧ್ರನರಪಾಳನ ಮೂಳೆಗೆ ಕಾಯ್ದು ಬಿಳ್ದಮಾ |
ಕಾಳಿಯಡುರ್ತು ಸಿಕ್ಕುವಳು ನಾಲಗೆಯಿಂ ನರಸಿಂಗಭೂಪನಾ ||695||

ಹಡಿಗೆಱೆದಂದವಾದುದೆರ್ದೆ ಪಾಂಡ್ಯನ ಚೋಳನ ಗಂಡವಾಳು ನೂ |
ರ್ಮಡಿ ಕುಸಿದತ್ತು ಚೇರನೆರ್ದೆ ಹವ್ವನೆ ಹಾಱಿದುದಂಧ್ರನುಬ್ಬೆಗಂ ||
ಬಡುತವೆ ಕಂಪಿದಂ ಕುಸಿದನಾಳ್ವರನಾಲಿಸಿ ಪೊಯ್ವ ಭೇರಿಯಂ |
ನಡೆದೆಡೆಯೊಳ್ ಪ್ರತಾಪನರಸಿಂಗನೃಪಂ ರಣರಂಗರಾಕ್ಷಸಂ ||696||

### ವಿಷ್ಣು ದಂಡಾಧಿಪ

ಮೇರುವಿನ ತೂಕಮಱಿವೊಡೆ| ವಾರಾಸಿಯ ಗುಣ್ಪನಱಿವೊಡಂ ಸಿಟ್ಟಿಸಿಯುಂ |
ತಾರಗಣಮೆಣಿಸಲಱಿವೊಡೆ| ಬಾರದು ಬಿಟ್ಟಿಗನ ಸಹಜಗುಣಮಂ ಪೊಗೞಲ್||697||

### ಆರಿದವಾಳ್ಕೆ

ಅಱಿದೆಱೆವಟ್ಟು ರಾಗದ ತವರ್ಮನೆ ಕುಂದದೆ ಲಕ್ಷ್ಮಿಯಿರ್ಪ ಠೇ |
ರಱೆಕೆಯತೇಷಸೌಖ್ಯಸಿಳಯಂ ಬೆಳೆಗೆಯ್ವಳ ಗೊತ್ತು ಸಂದ ಪೆ ||
ರ್ಗೆಱೆಗಳ ಜನ್ಮಭೂಮಿಯೆಳಗೌಂಗಿನ ಬಾಱಿಕ್ಕಲಸೆಂದೂಡಿನ್ನದಂ |
ಸೆಱೆಯನದಾವನುಂ ಪೊಗೞಲಾರಿದವಾಳ್ಕೆಯ ಸೆಂಪಸಾವಗಂ ||698||

## ✓ 132 ಅರಸಿಯಕೆರೆ 172. 1162

ಇದರಲ್ಲಿ ಹೊಯ್ಸಳರಾಜನಾದ ೧ನೆಯ ನಾರಸಿಂಹನ ಮಹಾಪ್ರಧಾನ ಶ್ರೀಕರಣದ ಬೂಚಿರಾಜನು ಹುಲ್ಲೆಯಕೆರೆಯನ್ನು ಸೋಮನಾಥಪುರವೆಂದು ಹೆಸರಿಟ್ಟು ಅಗ್ರಹಾರವನ್ನು ಮಾಡಿ ಬ್ರಾಹ್ಮಣರಿಗೆ ಬಿಟ್ಟಂತೆ ಹೇಳಿದೆ.

### ನಾರಸಿಂಹ I

ಭುವನೈಕಾಶ್ಚರ್ಯಮಾಯಿತ್ತಾತನ ಚರಿತಮೆಂದೆಂಬ ಕಾದಂಬಸ್ಮೈಸ್ಯಂ |
ಕವಿಯೇಱಂಗೆಂದು ಬಂಕಾಪುರದೊಳಿರಲದಂ ಕೇಳ್ದು ಗರ್ಭಸ್ಥನಾಗಿ ||
ರ್ದವತಾರಂಗೆಯ್ದುತುಂ ತದ್ಬಲಮನಳೆದು ತತ್ಸಾಮ್ರಾಜ್ಯಸಾಮ್ರಾಜ್ಯಸರ್ವ |
ಸ್ವವನಾದಂ ತಂದೆಗಿತ್ತಂ ಜಸಮೆಸೆವಿನೆಗಂ ನಾರಸಿಂಹಕ್ಷಿತೀಶಂ ||699||

ನುತಧರ್ಮಂ ರಿಪುಭೀಮನರ್ಜುನಯಶಂ ವಿದ್ವಿಷ್ಟಭೂಭೃದ್ಧ್ವಮಂ |
ಕ್ಷಿತಿರಾಮಂ ಕೃತಸೀಮಗೀತಭರತಂ ಭಾಸ್ವತ್ಸುಮಿತ್ರೋದ್ಭವ ||
ಕ್ಷಿತಿಪಾಳಂ ನರಸಿಂಹದೇವನವಸೀಶತ್ರುಘ್ನನಂತುದ್ಯಭಾ |
ರತರಾಮಾಯಣಪೂತಪೂರ್ವಪುರುಷಪ್ರಖ್ಯಾತಿಯಂ ತಾಳ್ದಿದಂ ||700||

### ಬೂಚಿರಾಜ

ಶ್ರೀಯ ಮನಃಪ್ರಿಯಂ ಜನಿತಕಾಮಸಿಕಾಪ್ರಿಯನಬ್ಜಶಂಖಲ |
ಕ್ಷ್ಮ್ಯಯತಹಸ್ತನಾತ್ತವಿಜಯಂ ದ್ವಿಜರಾಜಸುಸೇವಿತಂ ಬಲ ||
ಜ್ಯಾಯನಭೇದ್ಯಮಂತ್ರಕುಶಲಂ ಬಲಿಬಂಧನನಂತೆ ರಾಯನಾ |
ರಾಯಣನೆಂಬುದುರ್ವಿ ನರಸಿಂಹನರೇಂದ್ರನ ಮಂತ್ರಿ ಬೂಚನಂ ||701||

ಪರಭೂಪಾಳಕಜಿಷ್ಣು ಶತ್ರುದಹನಂ ದುಷ್ಟಾರಿಕಾಲಂ ಮನೋ |
ಹರಮಂತ್ರೋನ್ನತಿರಾಕ್ಷಸಂ ಭುವನಪಂ ಸಮ್ಯಗ್ಗುಣಸ್ಪರ್ಶನಂ ||
ವರಪಿತ್ರೀಶನುಮೇಶನಂತಪಿಳದಿಕ್ಪಾಳಪ್ರಭಾವಾನ್ವಿತಂ |
ನರಸಿಂಹಪ್ರಿಯಮಂತ್ರಿ ಮಂತ್ರವಿಳಸದ್ವಿದ್ಯಾಜಣಾಂ ಬೂಜಣಂ ||702||

ವಿನಯದ ಜೆಟ್ಟಿ ವೀರರಸಸಾಗರವೊಳ್ಪಿನ ಕೂರ್ಪು ಮುಕ್ಕಮಾಂ |
ತನದ ತವರ್ ವಿಧಾನನಿಳಯಂ ಜಯಲಕ್ಷ್ಮಿಯ ರಮ್ಯಹರ್ಮ್ಯಮಾ ||
ಳ್ದನ ಮನಮಾಶ್ರಿತಾಳಿಕವಚಂ ಬುಧಬಾಂಧವಕಾಮಧೇನು ಸ |
ಜ್ಜನನಿಧಿಯೆಂಬುದುರ್ವಿ ವಿಭುಬೂಚಿಯಸಾಹಸಸಪ್ತಸಾಚಿಯಂ ||703||

---

## 133 ಶಿಕಾರಿಪುರ 242. 1163

**ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಆಳಿಕೆಯಲ್ಲಿ ಕಾದಂಬಸೋಮದೇವನ ಸಾಮಂತ ಮಾಚಿಯನಾಯಕನು ಬಂದಣಿಕೆಯಲ್ಲಿ ಸೋಮೇಶ್ವರದೇವಸ್ಥಾನವನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಕಾದಂಬಸೋಮದೇವ

ಶರಣಾರ್ಥಿವ್ರಾತರಕ್ಷಾಕರಣಪರಿಣತಂ ತನ್ನ ತೀವ್ರಾಸಿ ಪಿಟ್ಟಿ |
ಟ್ಟರುಣೀನ್ಯೈಧಪ್ಪದೀಕ್ಷಾಕರಣಪರಿಣತಂ ತನ್ನ ದೋರ್ಮಂಡಲಂ ಬಂ ||
ದೆರೆದಂಗಿಷ್ಟಾರ್ಥತುಷ್ಟೀಕರಣಪರಿಣತಂ ತನ್ನದಾರತ್ವಮಾಯ್ತೆಂ |
ಬರ ಮಾತಂ ನಿಸ್ನಿಮಾಳ್ಪಂ ನಿರುಪಮಮಹಿಮಂ ಸೋಯಿದೇವಕ್ಷಿತೀಶಂ ||704||

ದೆಸೆದೆಸೆಯೊಳ್ ತರಂಗಿಡಿದು ಪಾಱುವ ವೀರರ ಸೆಕ್ಕೆಗಂಡದಿಂ |
ಪಿಸಸನಭೂಮಿ ಕೋಂಬಿಟ್ಟುದುರ್ವ ನೆತ್ತರಿ ರಾಕ್ಷಸಱಿಂ ನಗುಳ್ಚು ಸ |
ತ್ತಿಸುವ ಕಬಂಧವಿಂದೊಱೆವ ಲೋಹಿತಧಾರೆಗಳಿಂ ನಭಂ ಪಿಗು |
ಪಿಸುವುದಿದೇಂ ವಿಚಿತ್ರಮೊ ಕದಂಬರ ಸೋಮನಿದಿರ್ಚಿದಾಜಿಯೊಳ್ ||705||

ತನು ತನುವಂ ತಱುಂಬೆ ಮಿಗೆ ಕೂರಸಿ ಕೂರಸಿಯಂ ಪಳಂಚೆ ಥೊ |
ಪ್ಪೆನೆ ಕರುಳಿಂಪೆಗೊಂಡಡಗು ಥಪ್ಪೆನೆ ಜೋರೆನೆ ರಕ್ತವಾರಿ ಬಾ |
ಪ್ಪೆನೆ ಮರುಳಾರ್ದು ವೈರಿನೃಪರಂ ಜಲದಿಂದಮೆ ಕಾದಿ ಗೆಲ್ದ ವೀ |
ರನೊಳಿದಿರಾಂತು ಗೆಲ್ದಡಟನಾವನೊ ಸೋಮನೊಳಾಜಿರಂಗದೊಳ್ ||706||

### ಸೋಮದೇವನ ಹೆಂಡತಿ ಮಾಳಲದೇವಿ

ಜಗಮಂ ರಕ್ಷಿಸಿದತ್ತು ಕೀರ್ತ್ತಿ ಮುಗಿಲಂ ಮುಟ್ಟಿತ್ತು ಪೆಂಪಾತ್ಮದಾ |
ನಗುಣಂ ಜೀಯೆನಿಸಿತ್ತು ವಿಶ್ವಜನತಾಸಂಸ್ತುತ್ಯಮಾದತ್ತು ಸ ||
ತ್ಯಗುಣಂ ತಾನೆನೆ ಸೋವಿದೇವನೃಪರಾಜ್ಯಶ್ರೀ ಜಯಶ್ರೀಯೆನಲ್ |
ನೆಗೞ್ದೀ ಮಾಳಲದೇವಿಯುನ್ನತಿಯನಿನ್ನೇವಣ್ಣಿಪೊಂ ಬಣ್ಣಿಪೊಂ ||707||

### ಮಾಚಿಯನಾಯಕ

ವಿನಯಂ ಸಜ್ಜನಹರ್ಷದಂ ಪ್ರಭುತೆ ಲೋಕಸ್ತುತ್ಯಮೊಳ್ಪಿಷ್ಟವಿ |
ಷ್ಟನಿಕಾಯೋತ್ಸವಕಾರಿ ಧರ್ಮ್ಮಚರಿತಂ ಸತ್ಪೂಜಿತಂ ವಿಶ್ವವ ||
ಗ್ಪಸಿತಾಚಂದನಲಿಪ್ತಕೀರ್ತ್ತಿ ಪರನಾರೀದೂರಮಾಚಾರಮಾ |
ಯ್ತೆನಲೇವೇೞ್ವುದೊ ಮಾಚಿಗಾಂಕನೆ ವಲಂ ಧನ್ಯಂ ಮಹೀಚಕ್ರದೊಳ್ ||708||

ಪತಿಗರ್ಥಾರ್ಜ್ಜನೆಯಿಂ ಪ್ರಜಾಪ್ರತತಿಗಂ ಮರ್ಯ್ಯಾದೆಯಿಂ ದಾಂಟದು |
ನ್ನತಿಯಿಂ ಸ್ವಪ್ನದೊಳಪ್ಪೊಡಂ ಪುಸಿಯನೆಂತುಂ ಪೊರ್ದ್ದದಾತ್ಮೀಯಸ ||
ನ್ನುತಸತ್ಯವ್ರತದಿಂ ವಿರೋಧಿಬಳಮಂ ಬೆಂಕೊಳ್ವ ವಿಕ್ರಾಂತದಾ |
ಯತಿಯಿಂ ನಾಯಕಮಾಚಿಗಾಂಕನೆ ವಲಂ ವಿಖ್ಯಾತಿಯಂ ತಾಳ್ದಿದಂ ||709||

ಪರವಧುಗಾಸೆಗೆಯ್ಯದ ಮನಂ ಜಗಮಂ ಪೊರೆವಾರ್ಪ್ಪಸತ್ಯದೊಳ್ |
ಪೊರೆಯದ ವಾಣಿ ವೈರಿಜಯಮಂ ಪಡೆವಾಚರಣಂ ಕಳಂಕದೊಳ್ ||
ನೆರೆಯದ ಕೀರ್ತ್ತಿ ಪೂಜಿತಮಹೇಶಪದಾಂಬುಜಭಕ್ತಿ ತಾನದ |
ಚ್ಚರಿಯೆನೆ ಬಣ್ಣಿಸಲ್ಕಳವೆ ಮಾಚಿಯಸಾಹವಸವ್ಯಸಾಚಿಯಂ ||710||

---

### 134 ಶ್ರವಣಬೆಳ್ಗೊಳ 63. 1163

ಇದರಲ್ಲಿ ದೇವಕೀರ್ತ್ತಿಮುನಿ ಸತ್ತನೆಂದೂ ಅವನ ಶಿಷ್ಯರು ನಿಸಿದಿಗೆಯನ್ನು ಮಾಡಿಸಿದರೆಂದೂ ಹೇಳಿದೆ.

ಚತುರತೆ ಸತ್ಕವಿತ್ವದೊಳಭಿಜ್ಞತೆ ಶಬ್ದಕಳಾಪದೊಳ್ ಪ್ರಸ |
ನ್ನತೆ ಮತಿಯೊಳ್ ಪ್ರವೀಣತೆ ನಯಾಗಮತರ್ಕ್ಕವಿಚಾರದೊಳ್ ಸುಪೂ ||
ಜ್ಯತೆ ತಪದೊಳ್ ಪವಿತ್ರತೆ ಚರಿತ್ರದೊಳೊಂದಿ ವಿರಾಜಿಸಲ್ ಪ್ರಸಿ |
ದ್ಧತೆ ಮುನಿದೇವಕೀರ್ತ್ತಿವಿಬುಧಾಗ್ರಣಿಗೊಪ್ಪುವುದೀಧರಿತ್ರಿಯೊಳ್ ||711||

## 135 ಶ್ರವಣಬೆಳ್ಗೊಳ 64. 1163

ಇದರಲ್ಲಿ ಮಹಾಪ್ರಧಾನ ಹುಳ್ಳರಾಜನು ತನ್ನ ಗುರು ದೇವಕೀರ್ತಿ ಪಂಡಿತರಿಗೆ ಪರೋಕ್ಷ ವಿನಯವಾಗಿ ನಿಸಿದಿಗೆಯಂ ಮಾಡಿಸಿದಂತೆ ಹೇಳಿದೆ.

### ಕೊಲ್ಲಾಪುರದ ಮಾಘಣಂದಿ

ಎಳೆಮಾವಿಂ ಬನಮುಬ್ಬದಿಂ ತಿಳಿಗೊಳಂ ಮಾಣಿಕ್ಯದಿಂ ಮಂಡನಾ |
ವಳಿ ತಾರಾಧಿಪನಿಂ ನಭಂ ಶುಭದಮಾಗಿರ್ಪಂತಿರಿರ್ದತ್ತು ಪ್ರಸಿ |
ದ್ಧಮದಾಗಳ್ ಕುಳಚಂದ್ರದೇವಚರಣಾಂಭೋಜಾತಸೇವಾಪ್ರಸಿ |
ದ್ಧಸ್ಸೈದ್ಧಾಂತಿಕಮಾಘಣಂದಿಮುನಿಯಿಂ ಶ್ರೀಕೊಂಡಕುಂದಾನ್ವಯಂ ||712||

ಹಿಮವತ್ಕುತ್ಕೀಲಮುಕ್ತಾಫಲತರಳತರತ್ತಾರಹಾರೇಂದುಕುಂದೋ |
ಪಮಕೀರ್ತಿವ್ಯಾಪ್ತದಿಙ್ಮಂಡಳನವನತಭೂಮಂಡಳಂ ಭವ್ಯಪದ್ಮೋ ||
ಗ್ರಮರೀಚೀಮಂಡಳಂ ಪಂಡಿತತತಿವಿನುತಂ ಮಾಘಣಂದ್ಯಾಖ್ಯವಾಚಂ |
ಯಮಿರಾಜಂ ವಾಗ್ವಧೂಟೀಸಿಟಿಲಿತಪಟನ್ಯೂತ್ನಸದ್ರಕ್ಷಪಟ್ಟಂ ||713||

### ಶ್ರುತಕೀರ್ತ್ತಿ

ಆವೊಂ ವಾದಿಕಥಾತ್ರಯಪ್ರವಣದೊಳ್ ವಿದ್ವಜ್ಜನಂ ಮೆಚ್ಚೆ ವಿ |
ದ್ಯಾವಷ್ಟಂಭಮನಪ್ಪುಕೆಯ್ದು ಪರವಾದಿಕ್ಷ್ಮಾಭೃತ್ಪಕ್ಷಮಂ ||
ದೇವೇಂದ್ರಂ ಕಡಿವಂದದಿಂ ಕಡಿದೆಲೇ ಸ್ಯಾದ್ವಾದವಿದ್ಯಾಸ್ತ್ರದಿಂ |
ತ್ರೈವಿದ್ಯಶ್ರುತಕೀರ್ತ್ತಿದಿವ್ಯಮುನಿವೊಲ್ ವಿಖ್ಯಾತಿಯಂ ತಾಳ್ದಿದೋಂ ||714||

ಶ್ರುತಕೀರ್ತ್ತಿತ್ರೈವಿದ್ಯ | ವ್ರತಿ ರಾಘವಪಾಂಡವೀಯಮಂ ವಿಬುಧಚಮ |
ತ್ಕೃತಿಯೆನಿಸಿ ಗತಪ್ರತ್ಯಾಗತದಿಂ ಪೇಳ್ದು ನುತಕೀರ್ತ್ತಿಯಂ ಪ್ರಕಟಿಸಿದಂ ||715||[1]

---

## 136 ದಾವಣಗೆರೆ 43. 1164

ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಆಳಿಕೆಯಲ್ಲಿ ಸಿಂದವಂಶದ ಈಶ್ವರದೇವನು ಶಂಕರನಾರಾಯಣದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಸಮುದ್ರ

ಪರಿಧಾವನ್ನಕ್ರಚಕ್ರಕ್ರಮಣರಮಣಸಂಜಾತಕಲ್ಲೋಲಮಾಲಾ
ಸ್ಫುರದುದ್ಯಚ್ಛೀಕರೌಘಸ್ಥಗಿತಗಗನದಿಙ್ಮಂಡಲಂ ಚಾರುವಾರ್ಧೀ ||

---

1. ರಾಘವಪಾಂಡವೀಯ I, 24, 25.

ಕರರತ್ನವ್ರಾತಸಾಸಾರುಚಿನಿಪಯವಿಲಾಸಾಸ್ಪದಂ ಶೋಭಿಕುಂ ಭಾ |
ಸುರಜಂಬೂದ್ವೀಪಮಂ ಸುತ್ತಿದುದತಿಬಹಳಧ್ವಾನರೌದ್ರಂ ಸಮುದ್ರಂ ||716||

ಮಂದರಾಚಲ

ಅಮರಗಣಸೇವ್ಯಮತಿತುಂ | ಗಮಣಿಖರಭ್ರಾಜಿ ನಿಖಿಲತಾರಾಚಕ್ರ |
ಭ್ರಮಣಾವಳಿ .. ದಿವಿಜೋ | ತ್ತಮನಿಳಯಂ ಮಂದರಾಚಲಂ ರಂಜಿಸುಗುಂ ||717||

ಕುಂತಳದೇಶ

ಸಂತತವಿಲಾಸ . ತಭೂ | ಸ್ವಾಂತಂ ಕಮನೀಯನಗರನಂದನಲಕ್ಷ್ಮೀ |
ಕಾಂತಂ ಧಾತ್ರೀಕಾಂತೆಯ | ಕುಂತಳಮೆನೆ ತೋರ್ಪುದೊಪ್ಪಿ ಕುಂತಳದೇಶಂ ||718||

ಚಟ್ಟಭೂಪ

ಸಿಡಿಲ ಪೊಡರ್ಪಿನೊಳ್ ದೊರೆಗೆವರ್ಪುದು ದಳ್ಳಿಪ ತೇಜದೇಳಿಗೆ ಪಾ |
ಲ್ಗಡಲ ಗಭೀರವೃತ್ತಿಗೆಣೆಯಾಮದು ತನ್ನ ಗಭೀರವೃತ್ತಿ ಸಾ ||
ಲ್ವಡಿ ಕನಕಾಚಳಕ್ಕೆ ಮಿಗಿಲುನ್ನತಿ ಕಲ್ಪಮಹೀರುಹಕ್ಕೆ ಸೂ |
ರ್ಮಡಿ ಮಿಗಿಲಾಯ್ತು ಚಾಗದೆಸಕಂ ದೊರೆಯಾವನೊ ಚಟ್ಟಭೂಪನೊಳ್ ||719||

ತಳರೆ ತಳರ್ದುವಂಗೆ ಕನಕಾಚಳಮೊತ್ತುವವಂಗೆಲೇ ವಿಯ |
ತ್ತಳಮಲರ್ದಂಗೆ ತೀವಿ ತೆಗೆದಂಬು ತಡಂಬಱಿವಂಗೆ ಕಂಟಕ ||
ಪ್ರಳಯಮವುಂಕುವಂಗೆ ಜವನಂಕಿಸುವಂಗೆ ಸಿಡಿಲಾ ಸಿಡಿಲಾ ದಿಟಂ |
ಸೆಳೆದಪೆನೆಂಬವಂಗಳುರ್ವ ದಳ್ಳುರಿ ಚಟ್ಟಮನೆಂಬ ಚಟ್ಟಿಗಂ ||720||

ಸಿಂದವಂಶದ ಮಾಚರಸ

ಕಾದಿದ ಕಾಳೆಗಂಗಳನದೇವೆಸಗೊಂಡಪೆ ಮಾಚಿದೇವಶ |
ಸ್ತ್ರೋದಿತವೈರಿಭೂಪರುಧಿರಪ್ರದಮಗ್ನಮಣಿವ್ರಜಂಗಳಂ ||
ಛೇದಿಸಿಕಾಣ್ಬರಿನ್ನುಮರಿರಾಜಪುರಂಗಳ ಸೀಮೆಯಲ್ಲಿ ಸಂ |
ಪಾದಿತಪೋತಯಾತ್ರಿಕಜನಂ ಪುಗಲೊಲ್ಲದೆ ವಾರ್ಧಿಮಧ್ಯಮಂ ||721||

ಕಲಿಯುಂ ಮೂದಲಿಪಂತೆ ಪಂದೆಯನೆಲೇ ಪೋಗೆಂದು ಸಂಗ್ರಾಮದಿಂ |
ತೊಲಗಿಪ್ಪಂತೆವೊಲುನ್ನತಾಂಸಯುಗದೊಳ್ ವಕ್ಷಸ್ಥಳೋದ್ದೇಶದೊಳ್ ||
ಸಲೆ ಪೂರ್ವಾಂಗದೊಳಾವಗಂ ತುಱುಗಿ ತೋಱುತ್ತಿರ್ಪ್ಪ ಶಸ್ತ್ರವ್ರಣಾ |
ವಳಿ ವೀರಾಂಗನೆ ಕೂಡೆ ಕಣ್ಣೆಱಿದಳೆಂಬಂತೊಪ್ಪುಗುಂ ಸಂತತಂ ||722||

ಕ್ಷೀರಸಮುದ್ರದಂತೆ ಕಮಳೋದ್ಭವನೀಶ್ವರನಂತುಮಾಪರಂ ।
ಮೇರುಗಿರೀಂದ್ರನಂತೆ ವಿಬುಧಾಶ್ರಯನಂಬುಜನಾಭನಂತೆ ವಿ ॥
ಸ್ತಾರಿತವಿಕ್ರಮಂ ದ್ಯುಮಣಿಯಂತಿರೆ ಸತ್ಪ್ರಥವರ್ತಿಯೆಂಬುದೀ ।
ಧಾರಿಣಿ ಮಾಚಿದೇವನರಪಾಳನನೂರ್ಜಿತಪುಣ್ಯಶೀಳನಂ ॥723॥

**ಈಶ್ವರದೇವ**

ಅರಸಂಕಗಾಳನೆಂಬುದು । ಪರಬಳಕೆ ಗಜೇಂದ್ರವೈರಿಯೆಂಬುದು ಮತ್ತಂ ।
ಬಿರುದರ್ಗೆ ಬಿರುದನೆಂಬುದು । ಧುರದೊಳಗೀಶ್ವರನೃಪಾಳಕಹಳಾಸಿನದಂ ॥724॥

---

## 137 ಹಾಸನ 76. ಸು. 1165

**ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಸಾಮಂತ ನಾಕರಸನು ಕೋರಮಂಗಲದಲ್ಲಿ ನಾಕೇಶ್ವರದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

**ನಾಕರಸ**

ಲೋಕೈಕಪ್ರಿಯದಿವ್ಯಸೇವ್ಯಸುಧೆಯಿಂ ಸಂಕಲ್ಪಿತಾರ್ಥಪ್ರದಾ ।
ನೈಕಾಕಾರಸುರದ್ರುಮಾಳಿವದದಿಂ ವಾಚಸ್ಪತಿಖ್ಯಾತಿಯಿಂ ॥
ನಾಕಂ ಮೇಲವಿಸೋಪ್ಪ ಕೀರ್ತಿಸೆ ಜಗದ್ವಿಖ್ಯಾತಮೆಂದಂದು ಮ ।
ತ್ತೀಕೈಕೋತ್ತಮವಸ್ತುವಿಂ ದೊರೆಯೆ ಪೇೞಾ ನಾಕಂಗಿಳಾಲೋಕದೊಳ್ ॥725॥
ತನಗೀಲೋಕಮನೆಯ್ದೆ ರಕ್ಷಿಪ ಮನಂ ತಾನುಳ್ಳುದಾಪಕ್ಷಿಗಾ ।
ತ್ಮನನಂತೊಪ್ಪಿಸಲಪ್ಪುದೇ ಬಱಿಕೆ ಪೇೞಾ ಮಿಕ್ಕಗರ್ದೇಗೆಯ್ವನಂ ॥
ದನವದ್ಯಾತ್ಮಪರೋಪಕಾರಕರಣಂ ವಿಖ್ಯಾತಜೀಮೂತವಾ ।
ಹನನಂ ಕೇಳ ವಿನೇಕಿ ನಾಕಿ ನಗುವಂ ಲೋಕೋಪಕಾರೋದಯಂ ॥726॥
ಪಡೆವರ್ ಪೊಂಗಳನೆಲ್ಲರುಂ ತಮಗುಣಲ್ ಪೆಂಡಿರ್ಗೆ ಮಕ್ಕಳ್ಗೆ ಬ ।
ಯ್ತಿಡಲಂತಲ್ತು ಸಿಜೇಷ್ಟಶಿಷ್ಟತತಿಗಿಷ್ಟಾಪೂರ್ತಮಂ ಸಿರ್ಮಿಸಲ್ ॥
ಪಡೆವಂ ಧರ್ಮದಿನರ್ಥಮಂ ಪರಹಿತವ್ಯಾಪಾರನೆಂದಂದು ಹೆ ।
ಗ್ಗಡೆ ನಾಕಣ್ಣನೆ ವಿಶ್ವಧಾತ್ರಿಯೊಳಗಿಂ ಧನ್ಯಂ ಪೆಱರ್ ಧನ್ಯರೇ ॥727॥
ಎಸೆದಿರ್ದಿಂದುಕಳಾಕಳಾಪಮುಮನಾದುಗ್ಧಾಬ್ಧಿಯೊಳ್ ಪುಟ್ಟಿದಾ ।
ಪೊಸ ಪೀಯೂಷಮುಮಂ ತೆರಳ್ಚಿ ಪದಸಿಂ ಧಾತ್ರಂ ಪದಂಗೆಯ್ದ ಸಂ ॥

ತೊಸದಿಂ ಧರ್ಮದೊಳೋದಿ ನಿರ್ವಿಸಿದನೀವಿಶ್ವಂಭರಾರಕ್ಷಣ |
ವ್ಯಸನವ್ಯಾಪ್ತ್ಯಯಶೋವಿಳಾಸವಿಳಸದ್ಭೂ ನಾಕನಂ ನಾಕನಂ ||728||

ನುಡಿಗಳ್ ಕರ್ಣರಸಾಯನಂ ತನು ಜಗನ್ನೇತ್ರಕ್ಕೆ ಚಂದ್ರೋದಯಂ |
ಕುಡುವಾರ್ಪರ್ಥಿಜನಂಗಳಂಗಣನಿಧಿನ್ಯಾತ್ರಂ ಸದಾಚಾರಮಾ ||
ಮೃಡಚೂಡಾಮಣಿಮಂದಮಂದವಿಸರದ್ಗಂಗಾಪಗಾಪೂತಮಂ |
ದೊಡೆ ಪೋಲ್ಪನ್ನನದಾವನಾಶ್ರಿತಕೃತಶ್ರೀಲೋಕನಂ ನಾಕನಂ ||729||

ನೆಲದೊಳ್ ಪೊಂಗಳನೇಕೆ ಪೂಳ್ವರೆನುತುಂ ತಾಂ ಬುದ್ಧಿರಂ ಮಾಣದಂ |
ಡಳೆಯುತ್ತಿರ್ಪ ವಿವೇಕಿ ನಾಕಿ ಪಡೆದಾ ಸರ್ವಸ್ವಮಂ ಕೋರವಂ ||
ಗಳದೊಳ್ ತನ್ನಯ ಜನ್ಮಭೂಮಿಯುಮಿಳಾವಿಖ್ಯಾತಮಪ್ಪಂತಿರಲ್ |
ಶಿಲೆಯೊಳ್ ಒಯ್ಮನುಮೇಶ್ವರಾಲಯಕೃತಿವ್ಯಾಪಾರಪಾರಾಯಣಂ ||730||

ಸ್ಥಿರನೇ ಸದ್ಗುಣಿಯೇ ವಿವೇಕನಿಧಿಯೇ ವಿದ್ವಜ್ಜನಾಧಾರನೇ |
ನಿರಹಂಕಾರವಿನೋದನೇ ಮನುಮುನಿಪ್ರಖ್ಯಾತನೇ ನಾಕನೇ ||
ಸ್ಥಿರನೇ ಸದ್ಗುಣಿಯೇ ವಿವೇಕನಿಧಿಯೇ ವಿದ್ವಜ್ಜನಾಧಾರನೇ |
ನಿರಹಂಕಾರವಿನೋದನೇ ಮನುಮುನಿಪ್ರಖ್ಯಾತಕೀರ್ತಿಧ್ವಜಂ ||731||

ಎರೆದ ಮನುಜಂಗೆ ಸುರಭೂ | ಮಿರುಪಂ ಶರಣೆಂದವಂಗೆ ಕುಲಿಶಾಗಾರಂ |
ಪರವನಿತೆಗನಿಲತನಯಂ | ನಿರುಪಮಗುಣಧರ್ಮತತಿಪತಾಕಂ ನಾಕಂ ||732||

---

## 138 ಸೊರಬ 277. ಸು. 1165

ಇದರಲ್ಲಿ ಚಾಳುಕ್ಯರಾಜನಾದ ನೂರ್ಮಡಿತ್ರೈಲನ ಆಳಿಕೆಯಲ್ಲಿ ಮಹಾದೇವ ದಂಡನಾಯಕನು ಬಲಿಪುರದಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಮಹಾದೇವದಂಡನಾಯಕ

ಚಲದಭಿರಾಮನಣ್ಮಿನ ತವರ್ಮನೆ ಚೆನ್ನರ ಚಕ್ರವರ್ತಿ ಭೂ |
ವಲಯದ ಭೂಷಣಂ ಚದುರರಾಜನುದಾರನುದಾತ್ತಮೂರ್ತಿ ಸಿ ||
ರ್ಮಲತೆಯ ಜನ್ಮಭೂಮಿ ಸುಜನತ್ವದ ಸುಗ್ಗಿ ವಿಲಾಸದಾಗರಂ |
ಕಲಿಗಳ ದೇವನೆಂಬುದನಿಶಂ ಮಹದೇವನನೀಜಗಜ್ಜನಂ ||733||

### ಬನವಾಸೆ

ಫಲಭರದಿಂ ಪುನಂಗೊಳಿಪ ಪೂಗವನಂ ವನದೊಳ್ ಸರೋಜಖಂಡಂ |
ಜಲದ ಪೊಸಲ್ಗಳಿಂ ಬೆಳೆದು ಕತ್ತಲಿಸಿರ್ಪಲಿವಳ್ಳಿ ಬಳ್ಳಿಗೊಂ ||
ಜುಲಿವ ಪಿಕಂ ಶುಕಧ್ವನಿಗಳಿಂ ನಲಿದಾಡುವಸಂಗನಂಗನಾ |
ಕುಲಮದೆ ಲಕ್ಷ್ಮಿ ಲಕ್ಷ್ಮಿಗೆ ಸಮೃದ್ಧಿಕರಂ ಬನವಾಸೆದೇಶದೊಳ್ ||734||

### ಬಲಿಪುರ

ಕಲಹಂಸಗತಿಯು ಮೃದುಕೋಕಿಲನಾದದ ನೀಲಕಚದ ತನುಮಧ್ಯದ ಮಂ |
ಗಲಕಲಶಕುಚದ ಸೊಗಯಿಪ ಲಲಿತಮನೋಜನಮಗತ್ತಲುಂ ಬಲಿಪುರದೊಳ್ ||735||

---

## 139 ಶ್ರವಣಬೆಳಗೊಳ 346. ಸು. 1165

**ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಮಂತ್ರಿ ಹುಳ್ಳನು ಭಾನುಕೀರ್ತಿಗೆ ಸವಣೇರು ಎಂಬ ಗ್ರಾಮವನ್ನು ಕೊಟ್ಟಂತೆ ಹೇಳಿದೆ.**

### ಹುಳ್ಳನ ಹೆಂಡತಿ ಪದ್ಮಾವತಿ

ಕಮನೀಯಾನನಪೇಮತಾಮರಸದಿಂ ನೇತ್ರಾಸಿತಾಂಭೋಜದಿಂ |
ದಮಳಾಂಗದ್ಯುತಿಕಾಂತಿಯಿಂ ಕುಚರಥಾಂಗದ್ವಂದ್ವದಿಂ ಶ್ರೀನಿವಾ ||
ಸಮೆನಲ್ ಪದ್ಮಲದೇವಿ ರಾಜಿಸುತುಮಿರ್ಪಳ್ ಹುಳ್ಳರಾಜಾಂತರಂ |
ಗಮರಾಳಂ ರಮಿಯಿಪ್ಪ ಪದ್ಮಿನಿಯವೋಲ್ ನಿತ್ಯಪ್ರಸಾದಾಸ್ಪದಂ ||736||
ಜಲಭಾವಂ ನಯನಕ್ಕೆ ಕಾರ್ಶ್ಯಮುದರಕ್ಕತ್ಯಂತರಾಗಂ ಪದಾ |
ಬ್ಜಲಸತ್ಪಾಣಿತಳಕ್ಕೆ ಕರ್ಕಶತೆ ವಕ್ಷೋಜಕ್ಕೆ ಕಾರ್ಷ್ಣ್ಯಂ ಕಚ ||
ಕ್ಕಲಸತ್ವಂ ಗತಿಗಲ್ಲದಿಲ್ಲ ಹೃದಯಕ್ಕೆಂದೆಂದು ಪದ್ಮಾವತೀ |
ಲಲನಾರತ್ನದ ರೂಪಶೀಲಗುಣಮಂ ಪೋಲ್ವನ್ನರಾರ್ ಕಾಂತೆಯರ್ ||737||

---

## 140 ಶಿಕಾರಿಪುರ 277. 1165

**ಇದರಲ್ಲಿ ಕಳಚುರ್ಯರಾಜನಾದ ಬಿಜ್ಜಳನ ಆಳಿಕೆಯಲ್ಲಿ ಕಾದಂಬಸೋಮದೇವನ ಮಹಾಪ್ರಧಾನ ನಾಕರಸನು ಜಗದೇಕಮಲ್ಲೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

ಕಾದಂಬ ಸೋಮದೇವ

ಚಂಡರಿಪುನೃಪತಿತಮಮಾ । ರ್ತಂಡಂ ಕದನಪ್ರಚಂಡನಹಿತರ ಗಂಡಂ ।
ಮಂಡಳಿಕವನಜವನವೇ । ತಂಡಂ ಬಾಂಧವಪುರಾಧಿನಾಥಂ ಸೋಮಂ ||738||

ಹೃದಯಂ ಲಕ್ಷ್ಮೀವಧೂಮಂಡನಮಣಿಭವನಂ ಬಾಹುದಂಡಂ ಜಯಶ್ರೀ ।
ಸುದತೀನೃತ್ತಶ್ರಮೋದ್ಯದ್ವಿಪುಳಕನಕದಂಡಂ ಸುಧಾಸ್ಮೇರಪೂರಂ ||
ವದನಂ ವಾಕ್ಕಾಮಿನೀನರ್ತನಕನಕಗೃಹಂ ತಾನೆನಲ್ ಕೀರ್ತಿಕಾಂತಾ ।
ಸ್ಪದನಾದಂ ಸೋಮದೇವಂ ವಿಬುಧಜನಸುರೇಂದ್ರಾವನೀಜಪ್ರಭಾವಂ ||739||

## 141 ಸೊರಬ 286. 1168

ಇದರಲ್ಲಿ ಕಳಚುರ್ಯರಾಜನಾದ ರಾಯಮುರಾರಿ ಸೋಮದೇವನ ಆಳಿಕೆಯಲ್ಲಿ ಸಾಳ್ವಪ್ರಭು ತಾರಕಗೌಡನು ಶಿವದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬನವಾಸೆ

ಸಾಗರವಾರಿವೇಷ್ಟಿತಸಮಸ್ತಧರಾರಮಣೀಘನಸ್ತನಾ ।
ಭೋಗಮಿದೆಂಬಿನಂ ವಿದಿತವಿಸ್ತೃತಸಾರತರಾಗ್ರಹಾರದಿಂ ||
ನಾಗರಖಂಡಪತ್ರಪರಿವೇಷ್ಟನದಿಂ ಜನನೇತ್ರಪುತ್ರಿಕಾ ।
ರಾಗಮನಿತ್ತು ಮಾಣ್ದುದೆ ಮನಸ್ಸುಖದಂ ಬನವಾಸೆಮಂಡಳಂ ||740||

ತಾರಕಗೌಡ

ಬಿತ್ತರಿಸಿದಂ ಶಿವಗೃಹಮಂ । ಸುತ್ತಿರಿಸಿದಂ ಕೀರ್ತಿಲತಿಕೆಯಿಂ ದಶದಿಶೆಯಂ ।
ಮತ್ತೆನಿಸದೆ ಪ್ರಜೆಯುಂ ಮೆ । ಯ್ವೆತ್ತಿರಿಸಿದಂ ಸತ್ಯದಿಂದೆ ತಾರಕಗೌಂಡಂ ||741||

ನಾಕದಿನಿಳಿದಿತಂದುದೊ ಫಣಿ । ಲೋಕದಿನೊಗೆತಂದುದೋ ವಸುಂಧರೆಗೆಂದೀ ।
ಲೋಕಂ ಬಣ್ಣಿಸೆ ತಾರಕ । ಶ್ರೀಕಂಠಾಲಯಮನೆಸೆಸಿನಂ ಮಾಡಿಸಿದಂ ||742||

## 142 ನಂಜನಗೂಡು 175. 1168

ಇದರಲ್ಲಿ ಹೊಯ್ಸಳರಾಜನಾದ ನರಸಿಂಹನ ದಂಡನಾಯಕ ಲಕ್ಕಯ್ಯನು ತಾನು ಸುತ್ತೂರಲ್ಲಿ ಕಟ್ಟಿಸಿದ ನಾಗಕೇಶವದೇವಸ್ಥಾನಕ್ಕೆ ಬೆಳ್ಗಲಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

### ವಿಷ್ಣುವರ್ಧನ

ಮುದ್ರಿಸಲಾದಿರಾಜಚರಿತಂಗಳಸಾತ್ಮಚರಿತ್ರಮೂಪಗಂ ।
ಮುದ್ರಿಸಲಾಜ್ಞೆ ಭೂತಳಮನುದ್ಧತರಪ್ಪರ ಗಂಡಗರ್ವಮಂ ॥
ಮುದ್ರಿಸೆ ತೋಳ ಬಾಳ ಬಳಮುಜ್ಜ್ವಳಕೀರ್ತಿ ಜಗಂಗಳೆಲ್ಲಮಂ ।
ಮುದ್ರಿಸೆ ಸೇಸೆ ಮುದ್ರೆ ತನಗಾಗಿರೆ ವಿಷ್ಣುಸಮುದ್ರನೊಪ್ಪುವಂ ॥743॥

### ನಾರಸಿಂಹ I

ಅರಿಭೂಪರ್ ಒಂದು ಮೆಯ್ಯೊಳೆಯ್ದೊಡವಯವದಿಂ ತೋಱಿನೇ ಕ್ರೂರದೈತ್ಯೇ।
ಶ್ವರವಕ್ಷಃಕ್ಷೇತ್ರಸಿದ್ಧಾರಣನಖಿಸಿಕರೋತ್ಖಂಡದೋರ್ದಂಡಮಂ ಘೀ ॥
ಕರಜಿಹ್ವಾಕೀರ್ಣದೀರ್ಘಾನನಮನುಸೊಗೆದ ಕೂರ್ದಾಡೆಯಂ ಸಂಚಳತ್ಕೇ ।
ಸರಭಾಸ್ವತ್ಕಂಠಮಂ ಘುರ್ಘುರಘನರವಮಂ ನಾರಸಿಂಹಕ್ಷಿತೀಶಂ ॥744॥
ತರಳವಿಲೋಚನಾಂಚಳಕೆ ಕೆಂಪಿಸಿತುಂ ಬರೆ ಬರ್ಕುಮಾಗಳಂ।
ತರಿಸರಪಾಳಸಂಕುಳದ ಪಂದಲೆ ಕೈಗೆ ತುರಂಗರಾಜಿ ಮಂ ॥
ದುರಕೆ ಗಜಾಳಿ ಸಾಲೆಗೆ ಧನಂ ನಿಜಕೋಶಗೃಹಾಂತರಕ್ಕೆ ತ ।
ದ್ಧರೆ ಕಡಿತಕ್ಕಮುಂಡಿಗೆಗಮೋಲಗಮಾನರಸಿಂಹದೇವನಾ ॥745॥

---

## 143 ಅರಸೀಯಕೆರೆ 1. 1168

**ಇದರಲ್ಲಿ ಹೊಯ್ಸಳರಾಜನಾದ ೨ನೆಯ ಬಲ್ಲಾಳನ ಆಳಿಕೆಯಲ್ಲಿ ಬೆಳ್ಳಿಯ ದಾಸಿಸೆಟ್ಟಿಯ ಸೋದರರಳಿಯಂದಿರು ಮಾದಿರಾಜನೂ ಶಂಕರಸೆಟ್ಟಿಯೂ ಕೆಲವು ಬಸದಿಗಳಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿಷ್ಣುವರ್ಧನ

ಮಲೆಯಂ ಸಾಧಿಸಿ ಮೂಣ್ಡನೇ ತಳವನಂ ಕಾಂಚೀಪುರಂ ಕೋಯತೂರ್ ।
ಮಲೆನಾಪಾತುಳುನಾಡು ನೀಲಗಿರಿಯಾಕೋಳಾಲಮಾಕೊಂಗು ನಂ ॥
ಗಲಿಯುಚ್ಚಂಗಿ ವಿರಾಟರಾಜನಗರಂ ವಲ್ಲೂರಿವೆಲ್ಲಂ ಭುಜಾ
ಬಲದಿಂ ಲೀಲೆಯೆ ಸಾಧ್ಯಮಾದುದೆಣೆಯಾರ್ ವಿಷ್ಣುಕ್ಷ್ಮಾಪಾಳನೊಳ್ ॥746॥

### ಬಲ್ಲಾಳ II

ವಿನಯಶ್ರೀನಿಧಿಯಂ ವಿವೇಕನಿಧಿಯಂ ಬ್ರಹ್ಮಜ್ಞಾನಂ ಪೂರ್ಣವು ।
ಜ್ಞಾನಸುಧಾಮಯಶೋರ್ಥಿಯಂ ಜಿತಜಗತ್ತ್ರಯಾರ್ಥಿಯಂ ಸರ್ವಸ ॥

ಜ್ಞನಸಂಸ್ತುತ್ಯನನುದ್ಧವದ್ವಿತರಣಶ್ರೀವಿಕ್ರಮಾದಿತ್ಯನಂ |
ಮನುಜೇಶರ್ ಮಲೆರಾಜರಾಜನನದೇಂ ಬಲ್ಲಾಳನಂ ಪೋಲ್ವರೇ ||747||

### ಶ್ರೀಪಾಲಯೋಗಿ

ತಮಗಾಜ್ಞಾವಶಮಾದುದುನ್ನತಮಹೀಭೃತ್ಕೋಟಿ ತಮ್ಮಿಂದೆ ಪ |
ನ್ನವಮರ್ದತ್ತೀಧಕೆಗೆಯ್ದೆ ತಮ್ಮ ಮುಖದೊಳ್ ಷಟ್ತರ್ಕವಾರಾಶಿವಿ ||
ಭ್ರಮಮಾಪೋಶನಮಾತ್ರಮಾದುದೆನಲಿಂ ಮಾತೇನಗಸ್ತ್ಯಪ್ರಭಾ |
ವಮುಮಂ ಕೀಳ್ಪಡಿಸಿತ್ತು ಪೆಂಪೆನೆಸಕಂ ಶ್ರೀಪಾಲಯೋಗೀಂದ್ರರಾ ||748||

### ಬೆಳ್ಳಿಯ ದಾಸಿಸೆಟ್ಟಿ

ಪಡೆವಂ ಸದ್ಧರ್ಮಮರ್ಯಾದೆಯೊಳೆ ಪರದುಗೆಯ್ದರ್ಥಮಂ ನ್ಯಾಯದಿಂದಂ |
ಪಡೆದರ್ಥಂ ದೇವತಾಪೂಜೆಗೆ ಬಸದಿಗೆ ಶಿಷ್ಟೇಷ್ಟದಾನಕ್ಕೆ ನಿಚ್ಚಂ ||
ಕುಡೆ ಮತ್ತಂ ತನ್ನ ಭಾಗ್ಯಂ ತವನಿಧಿಯೆನೆ ನೀಳ್ದುಣ್ಮೆ ಕೆಯ್ಗಣ್ಮೆ ಪೆಂಪಂ |
ಪಡೆದಂ ದಾಸಂ ಪಯಸ್ಸಿಂಡಪಕಳಿತಯಶಃಕಲ್ಪವಲ್ಲೀವಿಳಾಸಂ ||749||

---

## 144 ಶಿಕಾರಿಪುರ 92. 1168

ಇದರಲ್ಲಿ ಕಳಚುರ್ಯರಾಜನಾದ ರಾಯಮುರಾರಿ ಸೋವಿದೇವನ ಮಹಾಪ್ರಧಾನ ಬ್ಯಾಳಿಕೆಯ ಕೇಶಿದಣ್ಣಾಯಕನು ಬಳ್ಳಿಗಾವೆಯ ಕೇದಾರೇಶ್ವರದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

### ಸೋವಿದೇವ

ರಿಪುಭೂಪಾಳತಮೌಘಮೋಡೆ ಕುಮುದವ್ರಾತಂ ಕರಂ ಪರ್ಚೆ ತ |
ದ್ರಿಪುಕಾಂತಾಮುಖಪಂಕಜಂ ಕೊರಗೆ ನಕ್ಷತ್ರೋದಯೋಪಂ ಕಲಾ ||
ಳಿಪರಿಭ್ರಾಜಿತನೂರ್ಜಿತೋರ್ಜಿತಯಶಶ್ರೀಚಂದ್ರಿಕಾಧೀಶ್ವರಂ |
ನೃಪನೇ ಸೋಮನೆನಲ್ಕೆ ಬಿಜ್ಜಣಮಹೀಪಾಲಾಬ್ಧಿಯೊಳ್ ಪುಟ್ಟಿದಂ ||750||

### ಕೇಶಿದಣ್ಣಾಯಕ

ಇದು ವಿದ್ಯಾಧರಲೋಕಮಲ್ಲಬಿದು ನಾಕಾನೀಕಮಂತಲ್ಲದಿಂ ..
ತಿದು ಗಂಧರ್ವನಿಕಾಯಮಲ್ಲಣಿಪಿದಾಸತ್ಕಿನ್ನರವ್ರಾತಮ ||
ಲ್ಲಿದಲೇ ಬ್ಯಾಳಿಕೆಕೇಶಿಮುಖ್ಯವಿಬುಧಪ್ರಾರಂಭದೊಳ್ ಷ್ಟುಟಿಗ್ಗವೋ |
ದದಟಕ್ಕ್ಯಪ್ರೇಕ್ಷುಪುಷ್ಕಳಜನಮಂ ವ್ಯೋಮೈಕಸ್ಥಾಂಕೀರ್ಣಕಂ ||

ಮನುಜಯಸೇವ್ಯವೃತ್ತಿ ನಿಜವೃತ್ತಿ ಪುರಾತನರಾಜನೀತಿ ತಾಂ |
ತನಗಳವಟ್ಟ ನೀತಿಯೆ ಪರಾರ್ಥನೆಮೆ ತನ್ನ ಭುಜಾರ್ಜಿತಾರ್ಥಮಾ ||
ಳ್ದನ ಮಹಿಮೋನ್ನತತ್ವಮೆ ನಿಜೋನ್ನತಿಯಾಶ್ರಿತತುಷ್ಟಿ ತನ್ನದೆಂ |
ದೆನಿಪ ನೆಗಳ್ತೆ ಪೆರ್ಚಿ ಸಲೆ ಚೆಲ್ವಿನ ಕೇಶವದಂಡನಾಯಕಾ ||752||

## 146 ಕಡೂರು 51. 1169

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಂತ್ರಿ ನಾಕನು ನಾಕೇಶ್ವರದೇವರನ್ನು ಪ್ರತಿಷ್ಠೆ ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿಷ್ಣುವರ್ಧನ

ತುಳುನಾಡಾಮಲೆನಾಡು ಕೊಂಕಣಮೆರಲ್ಕೊಂಗಂಗವಾಡಿಯ್ಯೋರ್ವಿ ನಿಂ |
ಬಳಮಾಚೋಳನ ದೇಶಮಾಂಧ್ರವಿಷಯಂ ಕಾಂಚೀಪುರಂ ಕೂಡೆ ಕುಂ ||
ತಳದೇಶಂ ತೆಱಿದೆತ್ತು ಬಿಟ್ಟೆನೆಸಕೆಯ್ದುರ್ವಂತು ದುರ್ವಾರದೋ |
ರ್ಬಳದಿಂ ವಿಷ್ಣುನೃಪಾಳನಾಳ್ದನವನಂ ಪೋಲ್ವನ್ನರಾರ್ ಭೂಭುಜರ್ ||753||
ಜಳನಿಧಿಯಂ ಕಿಸರ್ಮಸಗೆ ಕೂಡೆ ಕಲಂಕುವ ಬಾಡಬಾಗ್ನಿಯಂ |
ತಳದೊಳಗಿರ್ದ್ದಲಾಗೆ ಪೊಸೆದಿಕ್ಕುವ ಶೇಷನ ಕಂಠನಾಳಮಂ ||
ಬಳನಡೆ ನಿನ್ನ ನಂಜನುಮುಳಿಂದುಮುಳಿಪ್ಪ ಪೊಡರ್ಪನಾವಗಂ |
ಮುಳಿದೊಡೆ ತೋಱುವಂ ವಿಜಯವರ್ಧನನೀಕಳಿವಿಷ್ಣುವರ್ಧನಂ ||754||
ಇವನೊರ್ವಂ ಪೊಱಗಾಗೆ ಪೇೞ್ ಪುದುವೆ ತೇಜಂ ಕ್ಷತ್ರಿಯಂಗರ್ಕನಂ |
ದನನೊರ್ವಂ ಪೊಱಗಾಗೆ ಪೇೞ್ ಪುದುವೆ ದಾನಂ ಭೂಭುಜಂಗಬ್ಜಗ ||
ರ್ಭನುಮೊರ್ವಂ ಪೊಱಗಾಗೆ ಪೇೞ್ ಪುದುವೆ ಚಾತುರ್ಯಂ ನೃಪಂಗೆಂದು ಮೆ |
ಚ್ಚನಿವಂ ಮತ್ತಿನ ಭೂಪರಂ ನೃಪವರಶ್ರೀರೂಪನಾರಾಯಣಂ ||755||
ಸಾಹಸದೊಳ್ ಧರಾಧರಧರಂ ಭುಜವೀರ್ಯನಿಜಪ್ರತಾಪದಂ |
ದೋಹದೊಳರ್ಜುನಂ ಬಳವಿರೋಧಿನೃಪಾಳಸಮಸ್ತಸೈನಿಕ ||
ವ್ಯೂಹಮನಾವಗಂ ತವಿಪ ಚಂಡಪರಾಕ್ರಮನೆಂದೊಡೀರಗೋ |
ತ್ರಾಹಜಯಾಂಗನಾಸಕತವಿಷ್ಣುನೃಪಾಳನೊಳಾರ್ದಿರ್ಜುವರ್ ||756||

### ನಾರಸಿಂಹ I

ಧುರದೊಳ್ ಬೆಂದುಱಿದೊಡ್ಡಿ ನಿಂದುಬಿಳವಾಕ್ರಕ್ಕೆ ಕೆಯ್ಯಾಂತು ನಿಂ |
ದರಿಪಕ್ಷಪ್ರಕರಕ್ಕೆ ಹಾರವಹಿತಾಸ್ತೀಕಕ್ಕೆ ಗಂಭೀರನಾ ||

ಗರನಪ್ಪಂ ನರಸಿಂಹನಾಂತಿಱೆಯುಲೀಯಲ್ ಸೋಲಿಸಲ್ ಬಲ್ಲನಾ |
ಹರಿಪುತ್ರಂ ಹರಿಪುತ್ರನಾಹರಿಸುತಂ ತಾನೆಂದೊಡೇವಣ್ಣಿಪೆಂ ||757||

ರಣರಾಗೋದ್ರೇಕದುರ್ಕಂ ಒಗೆಯದೆ ಬಗೆದಂತೊಡ್ಡಿ ದಂದನ್ಯರಙತಾ |
ಕ್ಷ್ಣಣದಿಂದಾಶ್ಚರ್ಯಮಪ್ಪಂತೆಱಗಿ ಬಱಸಿಡಿಲ್ ಪೊಯ್ವವೋಲ್ ಪೊಯ್ದು ಪುಷ್ಯ ||
ತ್ರ್ಯಣುತಾಂತಾಕ್ಷ್ಣಿಣ್ಣಪಕ್ಷದ್ವಿಮುಖಕಬಳನವ್ಯಗ್ರ .. ದಳಾಗ್ರೋ |
ಲ್ಬಣಪಂಜಷ್ಟಂಙುಪಿಂದಂ ತಱೆದು ಕೆದಱನೇ ಗಂಡಭೇರುಂಡಭೂಪಂ ||758||

**ನಾಕವ ತಂದೆ ಮದ್ದಿರಾಜ**

ಕನಕಾದ್ರೀಂದ್ರಮನುನ್ನತಿಕ್ಕೆ ಜಲಧಿವ್ರಾತಂಗಳಂ ಗುಣ್ಪು ಭೂ |
ವಿನುತೌದಾರ್ಯಮನಲ್ಪಕಲ್ಪಕುಜಮಂ ಪೆಂಪಂಬರಾಭೋಗಮಂ ||
ದ್ಯುನದೀನಂದನನಂ ವಿನೂತಚರಿತಂ ಕೀಳ್ಮಾಡೆ ಮೇಲ್ಮಾಡಿದಂ |
ಜನತಾನಂದಿಸುಸಿಂದುಸುಂದರಯಶಶ್ರೀಮದ್ದಿರಾಜದ್ವಿಜಂ ||759||

**ನಾಕ**

ನರಸಿಂಹಕ್ಷಿತಿಪಪ್ರಸಾದವಿಳಸತ್ಸರ್ವಾಧಿಕಾರಂ ಪರಾ |
ರ್ಥರತಂ ನಂಟರ ಮೇರು ಮಿತ್ತು ಮುಳಿವಂಗಾಳ್ದಂಗೆ ಸಂಪತ್ಕರಂ ||
ಪುರುಷಾರ್ಥಕ್ಕೆಱೆವಟ್ಟು ಪೆಟ್ಟು ವಿನಯಕ್ಕಾಕಿಂಗಡಪೂರ್ವನಾ |
ಗರಮೆಂಬೀಗುಣದಿಂ ಗುಣಂಗೊಳಿಸಿದಂ ಭೂಲೋಕಮಂ ನಾಕಮಂ ||760||

ಅಸದಾಳಾಪದೊಳಪ್ಪುದೇಂ ಸುರತರುವ್ರಾತಂಗಳೊಂದಾಗಿ ಸಂ |
ತೊಸದಿಂದರ್ಥಿಗೆ ಸರ್ವಶಕ್ತಿಸಹಿತಂ ಮಾಱ್ಪಂತುಟಂ ಮಾಡದೇ ||
ವಿಸರದ್ದಂತಮರೀಚಿಕೇಸರಲಸದ್ವಕ್ತ್ರಾಬ್ಜಭಾಸ್ವದ್ದಯಾ |
ರಸಸಂಮಿಶ್ರಮೃದೂಕ್ತಿಯುಕ್ತಮೃದುಧೀರಾಳೋಕನಂ ನಾಕನಾ ||761||

ಸುರಭಿ ತೊರೆದತ್ತು ಸುರಭೂ | ಮಿರುಹಂ ಫಲಮಾಯ್ತು ಸಿದ್ಧರಸದೊಂದು ಪೊಸಲ್ |
ಪರಿದುದೆನೆ ಧರೆಗೆ ಧನಮಂ | ಸಿರಿದಿತ್ತಂ ನಾಕಿ ತತ್ಪ್ರತಿಷ್ಠೋತ್ಸವದೊಳ್ ||762||

---

## 147 ಐಹೊಳೆಯ ಶಾಸನ

### (ಇಂಡಿಯನ್ ಆಂಟಿಕ್ವರಿ IX, 97) 1169

**ಈ ಅಸಮಗ್ರಶಾಸನದಲ್ಲಿ ಸಿಂದರಾಜನಾದ 2ನೆಯ ಚಾವುಂಡನ ಮತ್ತು ಅವನ ಹೆಂಡತಿ ಸಿರಿಯಾದೇವಿಯ ಸ್ತುತಿ ಇದೆ.**

ಸಮುದ್ರ

ಉದಿತೇಂದುಶ್ರೀನಿವಾಸಂ ಶರಣಗತಕುಭೃದ್ರಾಜಿತಂ ನೂತ್ನರತ್ನಾ |
ಭ್ಯುದಯಕ್ಷೇತ್ರಂ ಮುಕುಂದಪ್ರಿಯತಯನತಳಂ ಕೂರ್ಮಪಾಠೀನನಕ್ರೋ ||
ನ್ಮದಮಾತಂಗಾಳಿಕೇಳೀಚಳಿತಜಳಚರಾಸ್ಫಾಳಕಲ್ಲೋಳಮಾಳಾ |
ನದನದ್ಯಂಭಃಪ್ಲವಾಲಂಕರಣನೃಜಗದಾವಾಸಮುದ್ರಂ ಸಮುದ್ರಂ ||763||

ಚಾಮುಂಡ

ಅನತಾರಾತಿನೃಪಾಳರಂ ಬೆದಱಿ ಬೆಂಕೊಂಡರ್ಥಮಂ ವಸ್ತುವಾ |
ಹನಮಂ ಪೆಂಡಿರ ತಂಡಮಂ ಗುಡಿಗಳಂ ಗೂಡಾರಮಂ ನಾಡುಮಂ ||
ಮುನಿಸಿಂದಿರ್ಕುಱಿಗೊಳ್ವುದೆಂಬುದೆ ವಿನೋದಂ ತನ್ನೊಳೆಂದಂದು ಪೇಱ್ |
ಘನಶೌರ್ಯಂಬಡೆದಿರ್ಪರಾರ್ ತೊಡರ್ದು ಚಾಮುಂಡಾವನೀಪಾಳನೊಳ್ ||764||

ಸಿರಿಯಾದೇವಿ

ಪತಿಭಕ್ತಿಯಿಂದರುಂಧತಿ | ಮತಿಯಿಂ ಭಾರತಿ ಸುಭಾಗ್ಯದಿಂ ರತಿಯೆಂದೀ |
ಕ್ಷಿತಿಯೊಳ್ ಚಮುಂಡಭೂಪನ | ಸತಿ ಸಿರಿಯಾದೇವಿಯಂ ಜಗಂ ಬಣ್ಣಿಸುಗುಂ ||765||

---

## 148 ಕಡೂರು 30. 1170

**ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಆಳಿಕೆಯಲ್ಲಿ ಸೋಮಗೌಡನು ಕಲಿದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

ಮಲ್ಲ

ಆಂತೊಡೆ ಕೊಂದನೆಂದೆ ಬಗೆ ವೈರಿನಿಕಾಯಮನರ್ಥಿಕೋಟಿ ಕೆ |
ಯ್ಯಾಂತೊಡೆ ಕೊಟ್ಟನೆಂದೆ ಬಗೆ ಬೇಡಿದುದಂ ಶರಣೆಂದು ಬಂದರಂ ||
ಭ್ರಾಂತಿಯೆ ಕಾದನೆಂದೆ ಬಗೆ ವೀರದ ಚಾಗದ ಕಾವ ಸೆರ್ಗಾ |
ವಂ ತೊಣೆಯೆಂದು ಬಣ್ಣಿಪರು ಮಲ್ಲನನುದ್ಧ್ಯಯಶಕ್ಕೆ ನಲ್ಲನಂ ||766||

ಒಕ್ಕಲು . . ಮಲ್ಲಮನೊಳಿಕ್ಕತುಳಕ್ಕಱವಲ್ಲಿ ವೈರಿ ನಿ .
ಸ್ತಿಕ್ಕಿದ ವಜ್ರದ . ಪುರಕೆ ಸೀಸಕನೊಂದಿದ ಬಾಹುರಕ್ಕೆ ತಾ |
ಮಕ್ಕಟ ಕಾಯುವುಟ್ಟ ಸಱ ಬಿಟ್ಟ ಸಿರಂ ಮುಗಿದಿರ್ದ ಕೆಯ್ ಸಮಂ |
ತಿಕ್ಕಿದ ಕೆಯ್ಯು ಹೊಕ್ಕ ಬಳಪುಸ್ಸಿದ ಲಿಂಗಮೆ ಕಾವುವಾಜಿಯೊಳ್ ||767||

## 149 ದಾವಣಗೆರೆ 32. 1170

**ಇದರಲ್ಲಿ ವಿಜಯಪಾಂಡ್ಯದೇವನ ಆಳಿಕೆಯಲ್ಲಿ ನಾಗತಿಯರಸ ಮುಂತಾದವರು ಕೂಡಲೂರ ಸ್ವಯಂಭುಶಂಕರನಾರಾಯಣದೇವರಿಗೆ ವೃತ್ತಿಯನ್ನು ಬಿಟ್ಟಂತೆ ಹೇಳಿದೆ.**

**ವಿಜಯಪಾಂಡ್ಯ**

ಮಿೞ್ತುವೆನೆಂಬ ಮಂಡಳಿಕರಿಲ್ಲ ದಟೆಂಗೆ ಬಯಲ್ಗೆ ಬಂದು ಮ |
ಯ್ದೋಱುವೆನೆಂಬ ವಿಕ್ರಮಿಗಳಿಲ್ಲ ಕುಸುಂಗಿ ಕೆಱಲ್ದು ಬಿಲ್ದು ಕಾ |
ಯ್ಪಾಱಿ ಪೊಡರ್ಪುಗೆಟ್ಟು ಬೆಸಕೆಯ್ವವರಲ್ಲದೆ ಮಿಕ್ಕ ತನ್ನ ಕಾ |
ಯ್ಪೇಱಿದ ತೇಜದಿಂ ವಿಜಯಪಾಂಡ್ಯಮಹೀಪನದೇಂ ಪ್ರತಾಪಿಯೋ ||768||

ಮೀಱಿ ಪುದಿಯೇಱಿ ಗೆಲೆ ತಲೆ | ದೋಱಿ ರಣೋತ್ಸವದಿನಾಂತು ನಿಜ ಭುಜಬಳಮಂ |
ತೋಱಿದೊಡೆ ಜವನ ಮುಳಿಸಂ | ತೋಱುವೆ ಮಾರ್ಪ್ಪಡೆ ವಿಜಯಪಾಂಡ್ಯ ಮಹೀಪಂ ||769||

**ಪೆರ್ಮಾಡಿದಂಡನಾಥ**

ಬೆಸನೇನೆನ್ನದ ವೀರರಿಲ್ಲ ಭಯದಿಂ ಮೂಪಿಟ್ಟೊಯಿಂ ಬಂದು ಬೇ |
ವಿಸದಿರ್ಪುದ್ಧತರಿಲ್ಲ ಪೇೞ್ವ ಬೆಸನಂ ಮಾಕೊಂಡು ಕೆಯ್ವಾರ್ದು ಬಾ |
ೞ್ವ ಸಮುಗ್ರಾರಿಗಳಿಲ್ಲೆನಲ್ ವಿಜಯಪಾಂಡ್ಯಶ್ರೀಮಹೀಪಂಗೆ ಸಾ |
ಧಿಸಿದಂ ರಾಜ್ಯಮನೇಂ ಪ್ರತಾಪನಿಧಿಯೋ ಪೆರ್ಮಾಡಿದಂಡಾಧಿಪಂ ||770||

**ನಾಗತಿಯರಸ**

ಮದಲೇಖಾವಿಳಸಿತಸುರ | ರದನಿಗೆ ಸೊರ್ಕುದಯಿಸಂತೆ ರಿಪುವನಜವನ |
ಪ್ರದಳನಪಟು ಕೀರ್ತಿವ್ಯಾ | ಪ್ತದಿಶಂ ನಾಗತಿನೃಪಾಲನಂದುದಯಿಸಿದಂ ||771||
ಎರೆಗೊಳ್ವುದಖಿಳವಿದ್ವ | ದ್ದರಿದ್ರತಾಸಿತಿಮಮಂ ದ್ವಿಷದ್ರಾಜಮನೋ |
ಹರಮಂಡಳಮುಮನವನೀ | ವರನಾಗತಿಯರಸನತುಳಭುಜಭುಜಗಂ ||772||

---

## 150 ಹಾಸನ 53. 1170

**ಇದರಲ್ಲಿ ಹೊಯ್ಸಳಭುಜಬಲ 1 ನೆಯ ನಾರಸಿಂಹನ ಮಹಾಪ್ರಧಾನ ಹೆಗ್ಗಡೆ ಕಾಳಿಮಯ್ಯನು ಜಕ್ಕೆಯನಹಳ್ಳಿಯಲ್ಲಿ ಕಾಳೇಶ್ವರದೇವರನ್ನು ಪ್ರತಿಷ್ಠಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

## ವಿಷ್ಣುವರ್ಧನ

ಧನದಂ ದಕ್ಷಿಣನಾಯುನೇಕೆ ವನದಕ್ಷ್ಮೀಂ ತೀಡಿತ್ತಿಲ್ಲಿಸ್ನುಸುಂ ।
ಬನೆಗಂ ನೈಲಿಕಹೋಟಿಕೋಟಿಮುಬಸಾನಾರಂಧ್ರದೊಳ್ ಮುಂದ್ರಸಿ ॥
ಸ್ವನಮುಣ್ಮಲಾ ಮುಳಯಹಾಸಿಳಂ ನುಱಿದು ಕಾಲಕ್ಷ್ಮೀಪಮುಂ ಪಿಷ್ಣುಭೂ ।
ಪನ ಪ್ರೈತ್ರೀನಾರಿಯಲ್ಲಿ ಮಾಡುವುದು ಕಾನೇಲೀನಮೀತೀರದೊಳ್ ॥773॥

ಸ್ಥಿರನೇ ಕೆಯ್ಯೊಳಿ ಧಾತ್ರಿಯುಂ ಸಿಬಿಸಿದಂ ತೇಜಸ್ವಿಯೋ ವಿನ್ನಿಯುಂ ।
ಕೊರಗಿಪ್ಪಂ ಕುತಲಾವಾನೇ ಕನಕಕ್ಷ್ಮಿಲಿಂ ದೂರಮಾಗಿದ್ದಾನಿ ॥
ಪ್ರತಿಸಿಕ್ಕಿಂ ರುಚಿಯೋ ನಿಲೀಕ್ಷಿಸಿದವರ್ ಸಿಷ್ಪಾಸಿಗಳ್ ಜಲ್ಪನೇ ।
ವರನಂ ನೋಡಿಸಲಿಂತುಮಾನಾನಧಿಕಂ ಶ್ರೀವಿಷ್ಣುಭೂಪಾಳಕಂ ॥774॥

ಬಳಸುವಪ್ಪಂ ಕಿರಿದು ಸುತ್ತಂ ನುಱಿದು ನುಱಿದು ತಱಿಕ್ಕೈಸಿರಲ್ ಕೂಪೆ ಶೇಷೋ।
ಜ್ವಳಕಾಯುಂ ತೀಬಿದಾಪೇಱಿಗೆಪ್ಪೊಲಿರೆ ಸಮೋಜಾಬಾಂಪಂ ಧರಿತ್ರೀ ॥
ತಳಮುಲ್ಲಂ ಬಿನ್ನ ಬೀಳ್ವಾರಾಯುವನೆ ಪರಿಸಿ ಪರ್ದೇಱಿಸಂ ಕ್ಷುತ್ರಧರ್ರೋ ।
ಜ್ವಳರನ್ನೇತ್ತುಂಗಮಸ್ಥಾನಿಕ್ಕಮಣಿಕಳಲಂ ಬಿಷ್ಣು ಪೆತ್ತಂ ಜಿದಂಗಂ ॥775॥

ಪದದೊಳ್ ಕೂರ್ಮಸ್ವರೂಪಂ ನಯನಯುಗಳದೊಳ್ ಮತ್ಸ್ಯರೂಪಂ ಘನಗ್ರೀ।
ವದೊಳಾದಿಕ್ರೋಡರೂಪಂ ನಡುವಿನೊಳಿ ನೃಸಿಂಹಸ್ವಮಾತ್ಮಪ್ರಭಾವಾ ॥
ಸ್ಪದದೊಳ್ ರಾಮತ್ರಯಕ್ಕಂ ಮತಿವಿಕನದೊಳ್ ಬುದ್ಧರೂಪಾಗಿ ಗುಜ್ಜಾ ।
ಗದ ಕಲ್ಕಿತ್ವಕ್ಕೆ ಸಂಸ್ಥಾರದ ಮಯಿಸಿನಂ ವಿಷ್ಣು ಜಿಷ್ಣುಕ್ಷಿತೀಶಂ ॥776॥

ಸ್ತುತಿಮಚನಂಗಳಲ್ಲು ಬಿಪ್ರಕೋಟಿಗೆ ಭೀಮಪರಾಕ್ರಮಂ ದಯಾ ।
ಸತಿ ಸತಿಯುಸ್ನು ಕಾರಣದೆ ತಾನೆ ನೃಪಂ ಮನಸೊಲ್ಪು ಜೇಱಿಸ ॥
ಗತಿರಯಮಾಗಲಿಪ್ಪ ಪಿಪ್ರತಾರ್ಜುನಕೀರ್ತಿಯೊಸಲ್ಕೆ ಜೇಱಿತಿ ಭಾ ।
ರತಕಥೆಯೆಂಬುದೇಕೆ ನಡೆ ವಿಷ್ಣುನೃಪಾಳಚರಿತ್ರ ಸಾಲದೇ ॥777॥

## ನಾರಸಿಂಹ I

ಅಹಿಪತಿಯಂತೆ ಭೋಗಿ ರವಿಯಂತೆ ಕಲಾಧರನೀತನಂತುಮಾ
ಸವನಮಹೇಂದ್ರನಂತೆ ವಿಭವಾಸ್ಪದನುನ್ನತಮೇರು ಸೂರ್ಯನಂ ॥
ತಮಿಮಕರಪ್ರಭಾವನಮಹೇಜ್ಯನಸ್ಪೋಲ ಬಿಯುತತ್ವಕೋವಿದಂ ।
ಮಹಿಮಾತನೆಂದು ಬಣ್ಣಿಪುದು ಧಾತ್ರಿಯೊಳೀನರಸಿಂಹದೇವನಂ ॥778॥

## ಕಾಳಿಮಯ್ಯ

ವನಧಿಗನೊಂದೆ ಗುಣ್ಪು ನವಚಂ ಕನಕಾದ್ರಿಗನೊಂದೆ ಪೆಂಪು ಪ |
ತ್ತನುಪಮದಾನವೊಂದೆ ನಿಜವಾದಿವಿಚಕ್ಷಿತಿಜಕ್ಕೆ ನೋೞ್ಪೊಡಾ ||
ವನಧಿಯ ಗುಣ್ಪು ಮೇರುವಿನ ಪೆಂಪು ಸುರದ್ರುಮದಾರ್ಪದಾವಗಂ |
ತನಗೆನಲೀಧರಾತಳದೊಳಾರ್ ದೊರೆ ಹೆಗ್ಗಡೆ ಕಾಳಿಮಯ್ಯನೊಳ್ ||779||

ಜಡಿ ರಿಪುರಕ್ತವಾರಿಯೊಳಗಾಜಿಕೇಳಿಗೊಡರ್ಪದಿರ್ದೊಡಂ |
ಜಡಿ ಕಡಿದಿಕ್ಕಿ ವೈರಿಭಟಖಂಡದೊಳೆಂಡೆಯನಾಡದಿರ್ದೊಡಂ ||
ಜಡಿ ಸಮದೇಭಕುಂಭಯುಗಮಂ ಬಿಡೆ ಸೌಳ್ನೆ ಸೀಳದಿರ್ದೊಡಂ |
ಜಡಿಯೆನುತಿರ್ಪ ಕಾಳನ ಕರಾಸಿ ಕರಂ ಒಡಿಯುತ್ತಮಿರ್ಪುದು ||780||

ಕನಕಾದ್ರೀಂದ್ರಮನುನ್ನತಿಕ್ಕೆ ವಿಭವಂ ದೇವೇಂದ್ರನಂ ಮೂರ್ತಿ ಕಾ |
ಮನನಾರ್ತೀವ ಗುಣಂ ದಧೀಚಿ ಬಲಿ ಗುತ್ತಂ ಚಾರುದತ್ತಂಗಮೊಂ ||
ದಿನಿತಾಸುಂ ಮಿಗಿಲೆಂದೊಡೇವೊಗಳ್ವೆಂ ವಿದ್ವಜ್ಜನಾಧಾರನಂ |
ವಿನಯಾಂಭೋನಿಧಿಕಾಳಿಮಯ್ಯನನತಿಪ್ರಖ್ಯಾತನಂ ಧಾತ್ರಿಯೊಳ್ ||781||

ಜನವಿನುತಂ ವಿವೇಕನಿಧಿ ಸಚ್ಚರಿತಾಶ್ರಯನಾತ್ಮವಂಶವ |
ರ್ಧನನಭಿಮಾನಮೇರು ಸುಜನಾಗ್ರಣಿ ದಾನವಿನೋದ ಪುಣ್ಯಭಾ ||
ಜನನನವದ್ಯನೆಂದು ಧರೆ ಬಣ್ಣಿಪುದಬ್ಕುೞಿಯ್ಯೆ ಕಾಳಿಮ |
ಯ್ಯನನಿನತೇಜನಂ ಗುಣಿಸಮಾಜನನಾಶ್ರಿತಕಲ್ಪಭೂಜನಂ ||782||

ಸಮರದೊಳಾಂತರಾತಿನರನಾಥವಧೂವದನಕ್ಕೆ ಹಾರವಂ |
ಕಮಳದಳಾಕ್ಷಿಯುಗ್ಮದೊಳೆ ಕಂಕಣಮೊಪ್ಪಿರೆ ರಮ್ಯಮಪ್ಪ ಕುಂ ||
ಕುಮಘನಪರ್ವತೋಪಮಕುಚಂಗಳೊಳಂದುಗೆಮಾಡಿದೊಂದು ವಿ |
ಕ್ರಮಘನಶೌರ್ಯದುನ್ನತಿಗೆ ಸಲ್ಲದೆ ಹೆಗ್ಗಡೆಕಾಳಿಮಯ್ಯನೊಳ್ ||783||

ಮಿಸುಗುವ ತಾರಕಾದ್ರಿರುಚಿಯಿಂದಮೃತಾರ್ಣವಫೇನರೋಚಿಯಿಂ |
ದೆಸೆಗಳನಾವಗಂ ಬೆಳಗುತಿರ್ಪ ಹಿಮಾಕರಬಿಂಬದಿಂ ವಿರಾ ||
ಜಿಸುವಮರೇಂದ್ರದಂತಿಯ ತನುಚ್ಛವಿಯಿಂ ಮಿಗಿಲಾಗಿ ಪರ್ಪ ರಾ |
ಜಿಸುವುದು ಕೀರ್ತಿ ಧಾತ್ರಿಯೊಳಗೀವಿಭು ಹೆಗ್ಗಡೆ ಕಾಳಿಮಯ್ಯನಾ ||784||

## 151 ಸೊರಬ 345. 1170

**ಇದರಲ್ಲಿ ಕಾದಂಬಸೋಯಿದೇವನ ಆಳಿಕೆಯಲ್ಲಿ ತೆವರತೆಪ್ಪದ ಲೋಕಗಾವುಡನು ರತ್ನತ್ರಯದೇವರನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

ಬನವಾಸಿಮಂಡಲ

ಬಳಸಿದ ನಂದನಾವಳಿಗಳಿಂ ಶುಕಸಂಕುಳದಿಂ ಪಿಕಾಳಿಯಿಂ |
ಬೆಳೆದೆಱಗಿರ್ದ ಶಾಳಿವನದಿಂ ಭ್ರಮರಾಳಿಯಿನಿಕ್ಷುವಾಟಿಯಿಂ ||
ತಿಳಿಗೊಳದಿಂ ಲತಾಭವನದಿಂ ಕಮಳಾಕರದಿಂ ಕುಮುದ್ವತೀ |
ಕುಳದಿನಿದೇಂ ಮನಂಗೊಳಿಪುದೋ ಸತತಂ ಬನವಾಸಿಮಂಡಲಂ ||785||

ಸೋಯಿದೇವ

ಅದಟರ್ ಮೆಯ್ಯಿಕ್ಕೆ ವೀರರ್ ಬಿರುದನುಱಿದು ಕುಂಪಿಕ್ಕೆ ವಿದ್ವಿಷ್ಟಭೂಪರ್ |
ಮದಮಂ ಬಿಟ್ಟಿಕ್ಕೆ ಶೇಷಾಕ್ಷ್ಮಾತಮನೊಸೆದವರೋತಿಕ್ಕೆ ಸರ್ವಸ್ವಮಂ ಬ ||
ಲ್ಲಿದರುಂ ತಂದಿಕ್ಕೆ ಮಾಱಾಂತವನಿಪಸತಿಯರ್ ಕಣ್ಣ ನೀರಿಕ್ಕೆ ಪೊಣ್ಮಿ |
ಕ್ಕಿದನಾ ಜಂಗಾಳ್ವಧಾತ್ರೀಪತಿಗೆ ಸಿಗಳಮಂ ಸೋವಿದೇವಕ್ಷಿತೀಶಂ ||786||

ಲೋಕಗೌಡ

ಆತನ ಮಾತೆ ಮಾತು ಧರೆಗಾತನ ಪೂಣ್ಕೆಯೆ ಮಿಕ್ಕ ಪೂಣ್ಕೆ ಸಂ |
ದಾತನ ಬಂಟೆ ಬಂಟು ನೆಗಱ್ದಾತನ ಬುದ್ಧಿಯೆ ಶುದ್ಧಬುದ್ಧಿ ಮಿ ||
ಕ್ಕಾತನ ಸಾಹಸಂ ನೆಱೆಯೆ ಸಾಹಸಮೆಂದಭಿವರ್ಣಿಕುಂ ಧರಿ |
ತ್ರೀತಳಮಾಗಳುಂ ತೆವರತೆಪ್ಪದ ನಾಡಪ್ರಭು ಲೋಕಗಾಂಡನಂ ||787||

ಎತ್ತಿಸಿದಂ ಜಿನೇಂದ್ರಗೃಹಮಂ ಧರೆ ಬಣ್ಣಿಸಲೆಯ್ದೆ ತನ್ನ ಮೆ |
ಯ್ವೆತ್ತಿಸಿದಂ ಪ್ರಜಾಪ್ರಕರಮಂ ವಿಪ್ರವರ್ಗದ ಬಾಯ ಬಾಗಿಲೊಳ್ ||
ತೆತ್ತಿಸಿದಂ ಪಲರ್ ಬೆದಱೆ ಕೊರಲಗಂ ನಿಜಕೀರ್ತಿವಲ್ಲಿಯಿಂ |
ಪತ್ತಿಸಿದಂ ದಿಗಂತಮನಿದೇಂ ಕೃತಕೃತ್ಯನೊ ಲೋಕನುರ್ವಿಯೊಳ್ ||788||

---

## 152 ಹಾಸನ 66. ಸು. 1170

**ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಮಹಾಪ್ರಧಾನ ಹೆಗ್ಗಡೆ ಲಕುಮಯ್ಯನು ಕೇಶವದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಲಕ್ಷ್ಮ

ಉತ್ತರನಾಗೆ ಹಸ್ತಮಿಱಿವೀನೆಸೆಯೊಳ್ ಜಯಲಕ್ಷ್ಮಿ ಲಕ್ಷ್ಮೀ ಲೊ |
ಕೋತ್ತರಮಾಗಿರಲ್ ನಡೆವ ಲಕ್ಷ್ಮಜಮೂಪತಿಯಾಳ್ದನಱಿಕ್ಕಱಿಂ ||
ಪೆತ್ತು ಜನಂಗಳೆಯ್ದೆ ಮುದದಿಂ ಪೊಗಱುತ್ತಿರೆ ಭುಕ್ತಿಮುಕ್ತಿಗೆಂ |
ದಿತ್ತನು ಭಕ್ತಿಯಿಂದೆಸೆವ ಕೇಶವಮೂರ್ತಿಗನಂತಭೂಮಿಯಂ ||789||

---

## 153 ಅರಸಿಯಕೆರೆ 38. 1171

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಜಯಗೊಂಡಪುರದ ಜನರು ಸಿರಿಧರದೇವರ ನಂದಾದೀವಿಗೆಗೆ ಹೊನ್ನನ್ನು ಕೊಟ್ಟಂತೆ ಹೇಳಿದೆ.

### ಹೊಯ್ಸಳವಂಶ

ಸ್ವಸ್ತಿ ಶ್ರೀಯಿಪುರ್ಷೋತ್ತಮ | ವಾಸ್ತು ಜಯಶ್ರೀಯ ವಿಲಸಿತಾವಾಸಂ ಲೋ |
ಕಸ್ತುತ್ಯ ಯಶೋವನಿತೆಯ | ವಿಸ್ತಾರಸ್ಥಾನಮೆಸೆವ ಹೊಯ್ಸಳವಂಶಂ ||790||

### ವಿಷ್ಣುವರ್ಧನ

ಮುನಿಸಿಂದರುಣತೆ ಕಡೆಗ | ಣ್ಗೆನಿಸೊದವೆ ವಿರೋಧಿನರಪಸಪ್ತಾಂಗಂ ವಿ |
ಷ್ಣುನೃಪಾಳಂಗಪ್ಪುವು ನೋ | ಡನುಪಮಮವನಳವಿಯಿತರರಳವಿಯೆ ಜಗ
ದೊಳ್ ||791||

ಬುಧಲೋಕಾಶ್ರಯನೆಂಬ ತಾರ್ಕ್ಷ್ಯರಥನೆಂಬಜ್ಞಾಯತಾಕ್ಷಂ ದಲೆಂ |
ಬ ಧರಾಧಾರಕನೆಂಬ ಭೋಗಯುತನೆಂಬುದ್ಯದ್ಬಲಾನ್ವೀತನೆಂ ||
ಬ ಧರಿತ್ರೀವರನೆಂಬ ಲೋಕನುತನೆಂಬೀ ಪೆರ್ಮೆಯಿಂ ನೋಡೆ ವಿ |
ಷ್ಣುಧರೇಶಂ ಸಲೆ ವಿಷ್ಣುವೋಲ್ ಸೊಗಯಿಪಂ ಲಕ್ಷ್ಮೀಮನೋವಲ್ಲಭಂ ||792||

### ನಾರಸಿಂಹ I

ಕದನದೊಳಾಂತರಾತಿಗಳ ದಂತಿಯ ದಂತಮನೊತ್ತಿ ಕಿೞ್ತು ತ |
ದ್ವಿದುವನೆ ಪೊಯ್ಯೆ ಪೋೞ್ದ ಪೊಱಪೊಣ್ಮೆ ಸರಕ್ತಕಮೌಕ್ತಿಕಂಗಳಾ ||
ಪದದೊಳವಂ ಜಯಾಂಗನೆಗೆ ಹಾರಮನೊಪ್ಪಿರೆ ಮಾೞ್ಪನೆಂದೊಡಾರ್ |
ಕದನದೊಳಾಂಪಿದಿರ್ಚುವಪಟರ್ ಜಗದೊಳ್ ನರಸಿಂಹಭೂಪನಂ ||793||

ಕದನದೊಳಿದಿರ್ಚಿದಪಟರ | ಮದರದನಿಯ ಬಿದುವಿನಲ್ಲಿ ನಟ್ಟ ಸರಲ್ ಬಾ |
ಳದ ನೊಸಲೊಳುಜ್ವಳಿಸುವೊಂ | ದದಟಾನ್ನಪನಾರಸಿಂಹದೇವಂಗೆ ನಿಜಂ ||794||

### ಬಲ್ಲಾಳ II

ಅನುಪಮರಣನಿಸ್ತಾರಕ | ಸನೂನಶಕ್ತ್ಯನ್ವಿತಂ ವಿಚಾರಕ್ಷಮನೆಂ |
ಬ ನೆಗೞ್ತೆಯಿಂದೆ ಬಲ್ಲಾ | ಳನೃಪಾಳಂ ಕಾರ್ತಿಕೇಯಸಂತೋಷ್ಪಿಪರ್ಗಂ ||795||

### ಜಯಗೊಂಡಪುರ

ತುಱುಗಿದ ನಂದನಂ ಪರಿವ ಕಾಲ್ವೆ ಕಡಲ್ಗಿವೆ ತೋೞೆನಿಪ್ಪ ಪೆ |
ರ್ಗ್ಗೆಱೆ ಬಳಸಿರ್ದ ಪೆರ್ವೆಳಸು ಸಂದಣಿವೆತ್ತ ಜನಂ ವಿಳಾಸದಿಂ ||
ಮೆಱೆವಮರಾಲಯಂ ಬಹುಗೃಹಂಗಳ ಗುಣ್ಪಿವೞಿಂದೆ ಚೆಲ್ವು ಕ |
ಣ್ದೆಱೆದವೊಲೀಜಗಕ್ಕೆ ಜಯಗೊಂಡಪುರಂ ನಿಸದಂ ವಿರಾಜಿಕುಂ ||796||

### ನಾಗದೇವ

ಹೃದಯಕಳಂಕನಲ್ಲದ ಜಡಾತ್ಮಕನಲ್ಲದ ಶೀತರೋಚಿಯೆಂ |
ಬುದು ಗುರುಗೋತ್ರಶತ್ರುವಣಮಲ್ಲದ ಕೌಶಿಕನಲ್ಲದಿಂದ್ರನೆಂ ||
ಬುದು ವಿಪರೀತನಲ್ಲದ ಕುಜನ್ಮಕನಲ್ಲದ ಕಲ್ಪವೃಕ್ಷಮೆಂ |
ಬುದು ವಿಬುಧಾಶ್ರಯೈಕಸಿಧಿಯುಂ ಧರೆ ದುಮ್ಮನ ನಾಗದೇವನಂ ||797||

---

## 154 ಚಿಕ್ಕನಾಯಕನಹಳ್ಳಿ 43. 1171

**ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಳಿಕೆಯಲ್ಲಿ ಸಾಮಂತ ಬಿಟ್ಟಿಗ ಅವನ ತಾಯಿ ಶಾಂತಲೆ ಮುಂತಾದವರು ಮದ್ದವದೇವನಿಗೆ ಭೂಮಿಯನ್ನು ಕೊಟ್ಟಂತೆ ಹೇಳಿದೆ.**

### ಶಾಂತಲೆ

ಮರಕತವರ್ಣಮಂ ತರುಣವೇಣುತನುಚ್ಛವಿಯಿಂದೆ ವಜ್ರಮಂ |
ಸುರುಚಿರಮಪ್ಪ ಮುತ್ತೆನಿಪ ದಂತಚಯಂಗಳದೊಂದು ಕಾಂತಿಯಿಂ ||
ದುರಗಸದೃಕ್ಷಮಪ್ಪ ಕಚದಿಂ ಹರಿನೀಲಮನೊಪ್ಪೆ ಹೋಲ್ತಳಂ |
ತಿರೆ ಸತಿ ರತ್ನದೊಂದೆಣೆಗೆ ವಾರಳೆ ಶಾಂತಲೆನಾರಿ ರೂಪಿನೊಳ್ ||798||

### ಸಾಮಂತಬಿಟ್ಟಿಗ

ನಲಿದುಲಿದಟ್ಟಿಕೊಂಡು ಕಪಿತರ್ಪ ವಿರೋಧಿಬಲಕ್ಕೆ ಭೀತಿಯಿಂ |
ನೆಲವಲನೆನ್ನದಲ್ಲದಿದು ಪೆರ್ವಲನೆನ್ನದೆ ದೋಃಪ್ರತಾಪದಿಂ ||

ಗಿಲಿಗಿಲಿಗಂಬವಾಡಿಸುವನಾಹವದೊಳ್ ಕಲಿಬಿಟ್ಟಿದೇವನಿ |
ನ್ನೆಲಗಳವಂಗೆ ಸಂಗರದೊಳಾಂಪನೆ ಗಾಂಪನವಾರ್ಯಶೌರ್ಯನೊಳ್ ||799||

---

## 155 ಷಿಕಾರಿಪುರ 150. 1171

**ಈ ವೀರಗಲ್ಲಿನಲ್ಲಿ ಕಳಚುರ್ಯರಾಜನಾದ ರಾಯಮುರಾರಿ ಸೋವಿದೇವನ ಆಳಿಕೆಯಲ್ಲಿ ಹೆಲ್ಲಿಗನು ಕಳ್ಳರನ್ನು ಕೊಂದು ಸತ್ತನೆಂದು ಹೇಳಿದೆ.**

ಉರವರಿಯಿಂದೆ ದೂರದೊಳೆ ತಾಗಿದ ವೀರಧನುರ್ಧರರ್ಕಳಂ |
ತ್ವರಿತದಿನೆಚ್ಚು ಕೂರ್ಗಣೆಗಳಿಂ ಧರೆಗಿಕ್ಕಿ ಕರಂ ಕಡಂಗಿ ಭೋ ||
ರ್ಗರೆದಿರದೆಯ್ದಿ ಗೇಣ್ಗಳನೆ ಕಿೞ್ತಿೞಿವಂಕದ ನಾಯಕರ್ಕಳಂ |
ಸುರಿಗೆಯನಾಂತು ಕೊಂದು ಧುರದಲ್ಲೞಿದಂ ಪಡೆಮೆಚ್ಚೆ ಹೆಲ್ಲಿಗಂ ||800||

ಮೆಚ್ಚೆಮಗೆಂದಾಗನದಿಂ | ಚೆಚ್ಚರಮಿೞಿತಂದು ಕೊಂಡುಪೋದರ್ ನಲವಿಂ |
ದಚ್ಚರಸೆಯರಾದರದಿಂ | ದಚ್ಚರಿವಡೆ ಭೂಜನಂಗಳಾಹೆಲ್ಲಿಗನಂ ||801||

---

## 156 ಕಡೂರು 66. 1172

**ಇದರಲ್ಲಿ ಹೊಯ್ಸಳರಾಜನಾದ 1ನೆಯ ನಾರಸಿಂಹನ ಮಂತ್ರಿ ಆಚಿರಾಜನು ಬ್ರಹ್ಮಸಮುದ್ರದಲ್ಲಿ ವಿಷ್ಣುದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಆಚಿರಾಜನ ತಂದೆ ಕೇಶವ

ಜಗತೀಮಂಡನಪುಂಡರೀಕನಯನಂ ಲಕ್ಷ್ಮೀಯುತಂ ಭೂರಿಸ |
ತ್ವಗುಣಾಧಾರನಿಳಾಧರಂ ವಿಬುಧಲೋಕಾಹ್ಲಾದನಂ ಪಾಪದೈ ||
ತ್ಯಗಣಧ್ವಂಸಿ ದಶಾವತಾರವಿದಿತಂ ನಿತ್ಯಂ ವಿನಸ್ಯನ್ವಿತಂ |
ಜಗದೊಳ್ ಕೇಶವದೇವನೊಲ್ದು ಕಳೆವಂ ಸ್ವಾತ್ಮಾನತಕ್ಲೇಶಮಂ ||802||

### ಆಚಿರಾಜ

ಶ್ರೀಕುಳಗೇಹಮಂ ಲಸದನಂತರಮೋಕ್ಷನಿವಾಸಮಂ ಸತಾ |
ನೇಕಕುಭೃತ್ಕುಳಾವನವಿಶಾರದಮಂ ನರಸಿಂಹರಾಜ್ಯರ ||
ತ್ನಾಕರಮಂ ಸಮೃದ್ಧತೆಯನೆಯ್ದಿಸಿದಂ ಸಿತಪಕ್ಷದಿಂದುವೋಲ್ |
ಶ್ರೀಕರಣಾಗ್ರಗಣ್ಯನೆನಿಪಾಚರಸಂ ವಿಳಸತ್ಕಳಾನ್ವಿತಂ ||803||

ಅಮರ್ದ್ದಿಂದಂಬುಜದಿಂ ಸುಧಾಂಶುರುಚಿಯಿಂ ರತ್ನೌಘದಿಂ ಚಂದನ |
ದ್ರುಮನಿರ್ಯ್ಯಾಸದಿನಂಗಜೇಷುಗಳ ಕೂರ್ಪ್ಪಿಂ ಕಾಮಿನೀಲೋಕದ್ಯ ||
ಕ್ಷಮುದಾಯೋದಿತಪುಣ್ಯದಿಂ ಪಡೆವನಕ್ಕುಂ ಧಾತ್ರನೆಂಬಂದದಿಂ |
ಕಮನೀಯಂ ಬಗೆವಾಗಳಾಚಣನ ರೂಪಾಶ್ಚರ್ಯ್ಯಸಂಪಾದಕಂ ||804||
ಯುವತೀವ್ರಾತಮನೋವಿಮೋಹನಕರಂ ಶೃಂಗಾರಜನ್ಮಾಕರಂ |
ಕವಿವರ್ಣ್ಯಂ ವಿಳಸತ್ಕಳಾಧರಸಮಂ ಪ್ರದ್ಯುಮ್ನಗೋತ್ರಂ ರಮೋ ||
ತ್ಸವಧಾಮಂ ಸುಮನೋವಿನಿರ್ಮ್ಮಿತಸುಧರ್ಮ್ಮಂ ತಾನೆನಲ್ಕೀಸುಕೇ |
ಶವಪುತ್ರಂಗೆಸೆವಾಚಿರಾಜವಿಭುವಿಂಗೊಪ್ಪಿರ್ಪ್ಪುದೇಂ ಚೋದ್ಯಮೋ ||805||
ಕಮಳಾನಂದನಕಾರಿ ಚಾರುಕಮಳಪ್ರೋದ್ಭಾಸಿಹಸ್ತಂ ವಿರೋ |
ಧಿಮದಧ್ವಾಂತವಿಭೇದಿ ಧರ್ಮ್ಮಜನಕಂ ಸನ್ಮಾರ್ಗ್ಗವಿದ್ಯೋತನಂ ||
ಪ್ರಮದಾಪೂರಿತಮಿತ್ರಚಕ್ರನಿಚಯಂ ನಿತ್ಯೋದಯಭ್ರಾಜಿ ಲೋ |
ಕಮನೆಲ್ಲಂ ಬೆಳಗುತ್ತುಮಿರ್ಕ್ಕೆ ದೊರೆವೆತ್ತಾದಿತ್ಯನತ್ಯೂರ್ಜ್ಜಿತಂ ||806||
ಹರಿಯೊಳ್ ವಿಕ್ರಾಂತಮುಂಪ್ರೇಜ್ಯನೊಳ್ಚಿವ್ರ ಮನೋಜಾತನೊಳ್ ಚೆಲ್ವು ರತ್ನಾ |
ಕರದೊಳ್ ಗಾಂಭೀರ್ಯ್ಯಭಾವಂ ರವಿಯೊಳತುಳತೇಜಂ ಸುರೋರ್ವ್ವೀಜದೊಳ್ ನಿ ||
ರ್ಭರದಾನಂ ತಾಮಿನ್ನೊಂದೊಂದೆಸೆವುವಿನಿತು ಪೊಂದಾದುವಾಶ್ಚರ್ಯ್ಯಮೇನ |
ಚ್ಚರಿ ಧಾತ್ರಂ ಕೂರ್ತ್ತಿರ್ದ್ದೆಂಬಂತವಿಳಗುಣಕವಾಚಣ್ಣನಾವಾಸಮಾದಂ ||807||
ಪ್ರವರೋದ್ವೃತ್ತತ್ವದಿಂದಂ ಮೃದುವಿಶದತನುಚ್ಛಾಯೆಯಿಂದಂ ಪ್ರಶಸ್ತ |
ಧ್ರುವಲಕ್ಷ್ಮೀಯೋಗದಿಂದಂ ಕವಿಗೆ ಸುಮನುಃಸುಪ್ರೊಳ್ಳಿಸಿಂದಂ ರಣಪ್ರೋ ||
ದ್ಭವಶೌರ್ಯ್ಯಾಟೋಪದಿಂದಂ ಬಗೆಯೆ ನಿಜವೆ ಸದ್ವಾಚಿಯಾಗಿರ್ದ್ದಮಾಚಂ |
ಗೆ ವಿಶೇಷಂ ಕೋಡು ಕಲ್ಪದ್ರುಮದ ನಿಮಿರ್ದ್ದ ಕೋಡನ್ನನೊಪ್ಪುತ್ತುಮಿರ್ಕ್ಕುಂ ||808||
ಅತಿಕಾಂತಾಕೃತಿ ಲಕ್ಷ್ಮೀ ಪುಣ್ಯವಿಸರಂ ತೇಜಃಪ್ರಭುತ್ವಂ ಗುಣ |
ಜ್ಞತೆ ದಾನಂ ಶುಚಿತಾಪ್ರಧಾನಚರಿತಂ ಶ್ರೀವಿಷ್ಣುಪಾದಾಂಬುಜಾ ||
ನತಿ ಧೈರ್ಯ್ಯಂ ಮತಿತತ್ವಬೋಧಮಿವು ತಾಮೊಂದುತ್ತರಂ ದುರ್ಲ್ಲಭಂ |
ಕ್ಷಿತಿಯೊಳ್ ಮಾನವಗಾರ್ಜ್ಜಣಂಗಿನಿತುಮೇಕಾಯತ್ತಮೇಂ ಧನ್ಯನೋ ||809||

ಸಿರಿ ವರವಕ್ಷದೊಳ್ ನೆಲಸಿ ಸದ್ವಿಭವಕ್ಕೆ ನಿವಾಸಮಾದಳಂ |
ಬುರುಹಮುಖಪ್ರದೇಶದೊಳನಾರತಮಿರ್ದ್ದ ವಿವೇಕಿಯಾದಳಾ ||

ಸರಸತಿ ಶುದ್ಧತಾಗುಣಮನಾಜನ ಪೊರ್ದುಗೆಯಿಂದೆ ಕೀರ್ತಿಸುಂ |
ದರಿ ಪಡೆದಿರ್ದಳೆಂದೊಡಱಿಯೆಂ ಪೊಗೞಲ್ ಕೃತಪುಣ್ಯರಾಶಿಯಂ ||810||
ಕನಕಾದ್ರೀಂದ್ರಮನುನ್ನತಿಕ್ಕೆ ವಿಭವಂ ದೇವೇಂದ್ರನಂ ಮೂರ್ತಿ ಕಾ |
ಮನನಾರ್ತೀವ ಗುಣಂ ದಧೀಚಿ ಬಲಿ ಗುತ್ತಂ ಚಾರುದತ್ತಂಗನೊಂ ||
ದಿನಿತಾನುಂ ಮಿಗಿಲೆಂದೊಡೇವೊಗೞ್ದಪೆಂ ವಿದ್ವಜ್ಜನಾಧಾರನಂ |
ವಿನಯಾಂಭೋನಿಧಿಯಾಜನಂ ಮನುಮುನಿಪ್ರಖ್ಯಾತಸಂಸ್ತುತ್ಯನಂ ||811||
ಅಹಿಪತಿಯಂತೆ ಭೋಗಿ ಶಶಿಯಂತೆ ಕಲಾಧರನೀಶನಂತುಮಾ |
ಸಹನಮರೇಂದ್ರನಂತೆ ವಿಭವಾನ್ವಿತನುನ್ನತಮೇರು ಸೂರ್ಯನಂ ||
ತಹಿಮಕರಪ್ರಭಾವನಮರೇಜ್ಯನವೋಲ್ ಬಹುತತ್ವಕೋವಿದಂ |
ಮಹಿನುತನೆಂದು ಬಣ್ಣಿಪುದು ಸಂತತಮಾಜಣನಂ ಜಗಜ್ಜನಂ ||812||
ಅಕಳಂಕಚರಿತಲಕ್ಷ್ಮೀ | ಪ್ರಕಟಯಶೋಗುಣದೆ ಬೆಳಗಿ ನಿಜಕುಲಮಂ ಸು |
ಪ್ರಕೃತಿ ಸುಪುತ್ರಃ ಕುಲದೀ | ಪಕ ಎಂಬುದನೆಸಿಸಿ ನೆಗೞ್ದನಾಜಣಮಾಪಂ||813||

---

## 157 ಮಾಣಗಿಹಾಳ್ ಶಾಸನ

### (ಎಪಿಗ್ರಾಫಿಯಾ ಇಂಡಿಕ XV, 315). 1172

ಇದರಲ್ಲಿ ಕಳಚುರ್ಯರಾಜನಾದ ರಾಯಮುರಾರಿ ಸೋಯಿದೇವನ ಆಳಿಕೆಯಲ್ಲಿ ಮಾಳಿಗೆಯ ಪ್ರಭು ಬಿಜ್ಜಯನಾಯಕನು ಎರಡು ಶಿವಾಲಯಗಳನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

**ಬಿಜ್ಜಳ**

ಲಾಳಂ ಬಾಳ್ಗೊಟ್ಟು ಕೋಳ್ಗೊಟ್ಟು ಱಿದನುಱಿದನಾ ಚೇರಮಂ ಬೀರಮಂ ನೇ |
ಪಾಳಂ ಕಾಡಾಲಯಕ್ಕೆಯ್ದಿದನತಿಭಯದಿಂ ಶೌರ್ಯಸಂಪತ್ತಿಯಿಂ ಪಾಂ ||
ಚಾಳಂ ಚಾಳಾದನಾಳಾನೆನಿಸಿ ಬರ್ದುಕಿದಂ ಭೀಮಸಂಗ್ರಾಮಕೇಳೀ |
ಲೋಳಂ ಚೋಳಂ ದಿಟಂ ಬಂದಪನೆನಲದಟಂ ಬಿಜ್ಜಳಕ್ಷೋಣಿಪಾಳಂ ||814||
ರಾಜಮಹಾಭಿಧಾನಮನೆ ಚಂದ್ರನೊಳಪ್ರತಿಮಪ್ರತಾಪದಾ |
ರಾಜತೆಯಂ ನಿದಾಘನಮಯೂರ್ಕನೊಳೂರ್ಜಿತಸಾರ್ವಭೌಮನೆಂ ||
ಬೀಜನಮಂ ದಿಶಾಕರಿಯೊಳಲ್ಲದೆ ವೈರಿನೃಪಾಳರಲ್ಲಿ ರಾ |
ಜಿರಾಸಲೀಯದಿಂತು ನೆಗೞ್ದಂ ವಿಭು ದೋರ್ಬಳಚಕ್ರಿ ಬಿಜ್ಜಳಂ ||815||

### ಸೋಯಿದೇವ

ಎನಗಿನ ಸೋಮಭೂಪನರಿಭೂಪಜಯಾಂಗನೆಯೊಳ್ ನಿರಂತರಂ ।
ಮನನೆಳಸಿರ್ಪ ನಾಕೆಯಿರಲಾತನ ಸನ್ನಿಧಿಯಲ್ಲಿ ನಿಲ್ವುದಿಂ ॥
ತೆನಗಿದು ಧರ್ಮಮಲ್ಲದುದಱಿಂ ಗಸೆಯಂತದೊಳಿರ್ಪೆನೆಂದು ದಿ ।
ಗ್ವನಿತೆಯರಲ್ಲಿ ತನ್ನೃಪಯಶೋಂಗನೆ ಮಾಣದೆ ಮಾತನಾಡುವಳ್ ॥816॥

ವಿನಮಿತಗೌಳಪಾಂಡ್ಯಮಲಯಾಳವರಾಳನೃಪಾಳಜಾಳಮಂ ।
ಡನಮಣಿಮೌಳಿಕಾರುಚಿರಮಂಜರಿಯಿಂದಮೆ ಪುಂಜಮಾಗಿ ರಂ ॥
ಜನೆವಡೆದಾಗಳೇಂ ಸೊಗಯಿಸಿರ್ಪುದೊ ತನ್ನ ಪದಾರವಿಂದಮೆಂ ।
ದೆನಲಳವಂತುಟಿಂತುಟೆನಿಸಂತುಟೆ ಸೋಮಧರಾಧಿನಾಥನಾ ॥817॥

### ಮಾಳಿಗೆ

ಅಳಕಾಪುರಿಯೆನೆ ಧನದಾ । ವಳಿಯಿಂದಮರಾವತಿಯೆನೆ ವಿಬುಧಾಶ್ರಯದಿಂ ।
ವಿಳಸದ್ಭೋಗಾವತಿಯೆನೆ । ಸಲೆ ಭೋಗಿಗಳಿಂ ಬಜಾವ್ಪು ಮಾಳಿಗೆ ರಯ್ಯಂ ॥818॥

### ಬಿಜ್ಜಯನಾಯಕ

ಕಳಚುರಿರಾಜರಾಜ್ಯಗೃಹದೀಪಕನೆಂಬ ಮಹತ್ವದೇಱಿಗ್ ತ ।
ನ್ನೊಳೆ ರಿಪುರಾಯದಂಡುಗೆ ಪಡಿಗ್ಗಹನೆಂಬುರುಪೀರದೇಱಿಗ್ ತ ॥
ನ್ನೊಳೆ ಬುಧರೀಯೆ ವರ್ಣಕಪ ಕನ್ನಡಜಾಣನೆನಿಪ್ಪ ಬಲ್ಮೆ ತ ।
ನ್ನೊಳೆ ನೆಲಸಲ್ಕದಾತ್ತನೆನೆ ಬಿಜ್ಜಯನಾಯಕನಿರ್ದನುರ್ವಿಯೊಳ್ ॥819॥

---

## 158 ಶಿವಮೊಗ್ಗ 64. 1172

ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಳಿಕೆಯಲ್ಲಿ ಸತ್ಯಗಂಗದೇವನು ಕುರುಳತೀರ್ಥದಲ್ಲಿ ಗಂಗಜಿನಾಲಯವನ್ನು ಮಾಡಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ವಿನಯಾದಿತ್ಯ

ವಿನಯಾದಿತ್ಯನೃಪಂ ಸ । ಜ್ಜನರ್ಗಂ ದುರ್ಜನರ್ಗಮಾತ್ಮವಿನಯಂ ತೇಜಂ ।
ಜನಿಯಿಸೆ ನಯಮಂ ಭಯಮಂ । ವಿನೂತನಾಳ್ದಂ ವಿಶಾಲಭೂಮಂಡಲಮಂ॥820॥

### ಎರೆಯಂಗಹೊಯ್ಸಳನಳಿಯ ಹೆಮ್ಮಾಡಿಯರಸ

ಇವನಿಂದಂ ಕಂಡೆನೇೞುಂ ಕಡಲ ಕಡೆಯನೇೞುಂ ಕುಭೃತ್ಕೂಟಮುಂ ದಿ |
ಗ್ಧವದಂತಿವ್ರಾತಮಂ ಲೋಕದ ಪವಣನೆನುತ್ತುಂ ಯಶೋಲಕ್ಷ್ಮಿ ಮೆಯ್ವೆ ||
ರ್ಚುವಿನಂ ತನ್ನಣ್ಮು ತನ್ನೊಂದಱಿವಿನಳವು ತನ್ನಾರ್ಪು ತನ್ನೇೞಿಗೆ ತನ್ನೊಂ |
ದು ವಿಳಾಸಂ ತನ್ನ ಪೆಂಪತ್ತಳಗಮೆನಿಸಿದಂ ಹೆರ್ಮ್ಮಮಾಂಧಾತಭೂಪಂ ||821||

### ವಿಷ್ಣುವರ್ಧನ

ಎಳೆಗೆಸೆವ ಕೋಯತೂರ್ ತ | ತ್ತಳವನಪುರಮಂತೆ ರಾಯರಾಯಪುರಂ ಬ |
ಳ್ವಳಬಳೆದ ವಿಷ್ಣುತೇಜೋ | ಜ್ವಳನದೆ ಬೆಂದುವು ಬಲಿಷ್ಠರಿಪುದುರ್ಗ್ಗಂಗಳ್ ||822||

### ಭುಜಬಳಗಂಗ

ಮಾರಿಟ್ಟಾಶಾಂತಮಂ ಬಳ್ಳದೊಳಳೆದುದಧಿವ್ರಾತಮಂ ತೂಗಿ ಸಂದಾ |
ಮೇರುಕ್ಷೋಣೀಧ್ರಮಂ ತ್ರಾಸಿನೊಳೆಣಿಸಿ ತರಂಗೊಂಡು ನಕ್ಷತ್ರಮಂ ಪೇ ||
ೞಾರಾನುಂ ಬಲ್ಲರೇ ಬಲ್ಲೊಡೆ ಪೊಗೞಿಗೆಮ ವಿಶ್ವಂಭರಾಭಾರವೀರ |
ಶ್ರೀರಾಮಾಲೀಢವಜ್ರದೃಢಿಮಘನಭುಜಸ್ತಂಭನಂ ಗಂಗ ನಿನ್ನಂ ||823||

---

## 159 ಹಾಸನ 71. 1173

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಹಾಪ್ರಧಾನ ಶ್ರೀಕರಣದ ಬೂಚಿರಾಜನು ಕೋರವಂಗಲದ ಬೂಚೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿಷ್ಣುವರ್ಧನ

ಶ್ರೀಮದ್ಯಾದವವಂಶವಾರ್ಧಿವಿಳಸತ್ಸಂವರ್ದ್ಧನೋದ್ಯತ್ಸುಧಾ |
ಧಾಮಂ ದೃಪ್ತನೃಪಾಳಜಾಳಜಳಜಾತವ್ರಾತಸಮ್ಮರ್ದನೋ ||
ದ್ದಾಮಾನೇಕಪನಿಷ್ಟಶಿಷ್ಟಜನತಾಕಲ್ಪಾಂಘ್ರಿಪಂ ತಾನೆನಲ್ |
ಭೂಮೀಪಾಳಕಮೌಳಿರತ್ನಮೆಸೆದಂ ಶ್ರೀವಿಷ್ಣುಭೂಪಾಳಕಂ ||824||

### I ನೆಯ ನಾರಸಿಂಹನ ಮಹಿಷಿ ಏಚಲೆ

ರಮಣೀರತ್ನಮನರ್ಥಿಕಲ್ಪಲತೆಯಂ ವಾಗ್ದೇವತಾಜನ್ಮಗೇ |
ಹಮನೊಳ್ಪಿಂಗೆ ನಿವಾಸಮಂ ಗುಣಗಣಕ್ಕಾವಾಸಮಂ ಪೆರ್ಮ್ಮೆಗಾ ||

ರ್ಮಮನಂಗೋದ್ಭವನಾಜ್ಞೆ ಪೆಣ್ಬರಿಜನಾದಂ ತಾಳ್ದಿದಂತಿರ್ದು ಸ |
ಟ್ಟಮನಾಂತೇಚಲದೇವಿಯಂ ಭುವನದೊಳ್ ಪೋಲ್ವನ್ನರಾರ್ ಕಾಂತೆಯರ್ ||825||

### ಬಲ್ಲಾಳ II

ವಿಳಸತ್ಕೂರ್ಮಪದಂ ಫಣಿಪ್ರಭುನಿಭೋದ್ಯದ್ದೀರ್ಘಹಸ್ತಂ ಕುಳಾ |
ಚಳಧೀರಂ ದಿಗಿಭೋನ್ನತಂ ಭುಜಬಳಾವಷ್ಟಂಭದಿಂ ನೀಳಕುಂ ||
ತಳೆಯಂ ಸನ್ನುತಪುಣ್ಯೆಯಂ ರುಚಿರಕಾಂಚೀಯುಕ್ತೆಯಂ ಲೀಲೆಯಿಂ |
ತಳೆದಂ ಸುಸ್ಥಿರಮಾಗೆ ಭೂರಮಣಿಯಂ ಬಲ್ಲಾಳಭೂಪಾಳಕಂ ||826||

ಬಡವರ್ಗೀಯದ ಚಾಗಮಾಜಿಮುಖದೊಳ್ ಬೆನ್ನಿತ್ತ ಶೌರ್ಯಂ ತೊದ |
ಳ್ಗೆಡೆಯಾದೊಳ್ನುಡಿ ದುರ್ಯಶಕ್ಕೆ ಗುಱಿಯಾಗಿರ್ದೊಳ್ಪು ದುರ್ಮಾರ್ಗಮಂ ||
ಗೆಡೆಗೊಂಡಾಚರಣಂ ಗಡಂ ತಮಗೆನಲ್ ಚೀಯೆಂಬಿನಂ ಬಾೞ್ದನಿ |
ಗ್ಗಡಿಗಳ್ ಮತ್ತಿನ ಭೂಭುಜರ್ ದೊರೆಯೆ ಪೇೞ್ ಬಲ್ಲಾಳಭೂಪಾಳನೊಳ್||827||

### ಮುದ್ದಿರಾಜ

ಕನಕಾದ್ರೀಂದ್ರಮನುನ್ನತಿಕ್ಕೆ ಜಳಧಿವ್ರಾತಂಗಳಂ ಗುಣ್ಪು ಭೂ |
ವಿನುತೌದಾರ್ಯಮನಲ್ಪಕಲ್ಪಕುಜಮಂ ಪೆಂಪಂಬರಾಭೋಗಮಂ ||
ದ್ಯುನದೀನಂದನನಂ ವಿನೂತಚರಿತಂ ಕೀೞ್ಮಾಡೆ ಮೇಲ್ಮಾಡಿದಂ |
ಜನತಾನಂದಮನಿಂದುಸುಂದರಯಶಶ್ರೀಮುದ್ದಿರಾಜದ್ವಿಜಂ ||828||

### ಬೂಚಿರಾಜನ ಹೆಂಡತಿ ಬಾಚಲದೇವಿ

ಪತಿಭಕ್ತಿಯೊಳೆಂದುಮರುಂ | ಧತಿ ಸೊಬಗಿನೊಳೆಸೆವ ರೂಪಿನಿಂದೊಪ್ಪುವ ಪಾ|
ರ್ವತಿ ವಿಭವದಲ್ಲಿ ಲಕ್ಷ್ಮೀ | ಸತಿ ಬಾಚಲದೇವಿಯೆನಿಸಿ ಜಸಮಂ ಹಡೆದಳ್||829||

ಸಿರಿಸತಿ ಗೋವಿಂದನ ಪೇ|ರುರದೊಳ್ ನೆಲಸಿರ್ಪ ತೆಱದೆ ಸೊಬಗಿನೊಳೆಂದುಂ |
ಸ್ಥಿರಮಾಗಿರೆ ಬಾಚಲೆ ಬೂ | ಚರಸನ ಸರ್ವಾಂಗಲಕ್ಷ್ಮಿ ತಾನಾಗಿರ್ಪಳ್ ||330||

---

## 160 ಬೇಲೂರು 114. 1173

**ಇದರಲ್ಲಿ ಹೊಯ್ಸಳರಾಜನಾದ 1 ನೆಯ ನಾರಸಿಂಹನ ಆಶ್ರಿತ ಗಳಗೆಯನಾಯಕನು ದೋರ ಸಮುದ್ರದಲ್ಲಿ ಗಳಗೇಶ್ವರದೇವಸ್ಥಾನವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

## ವಿನಯಾದಿತ್ಯ

ಸ್ವಸ್ತಿ ಶ್ರೀಪ್ರಿಯನರ್ಜುನೋರ್ಜಿತಯಶಂ ವಾಜೀಶಯಾನೋತ್ಸವಂ ।
ನ್ಯಸ್ತಾನಂತಸುಭೋಗಭೋಗಿವಿನುತಂ ಶ್ರೀಧರ್ಮರಮ್ಯಂ ಜಯಾ ॥
ಭ್ಯಸ್ತಂ ಸೂಕ್ತಸುದರ್ಶನಾಂಕನೆಸೆದಂ ಶ್ರೀವಿಷ್ಣುಸಾಮ್ರಾನ್ವಯಂ ।
ತ್ರಸ್ತಾನ್ಯಾಸುರರಾಜರಾಜವಿನಯಾದಿತ್ಯಾವನೀವಲ್ಲಭಂ ॥831॥

## ಬಲ್ಲಾಳವಿಷ್ಣುವರ್ಧನೋದಯಾದಿತ್ಯರು

ಸಲ್ಲಲಿತವಾಗ್ವಧೂಟೀ । ವಲ್ಲಭರತಿವಿಪುಳಸಕಳಲಕ್ಷ್ಮೀಕಾಂತಾ ।
ವಲ್ಲಭರುದಯಂಗೆಯ್ದರ್ । ಬಲ್ಲಾಳಂ ಬಿಟ್ಟಿದೇವನುದಯಾದಿತ್ಯಂ ॥832॥

## ನಾರಸಿಂಹ I

ಬಂದು ಕವಿದರಿಬಳಾಂಬುಧಿ।ನಿಂದುದು ನರಸಿಂಹನೊಂದೆ ಸಬಳದ ಮೊನೆಯೊಳ್
ಬಿಂದುವಿನಂದದೆ ಮುನ್ನಂ।ನಿಂದವೊಲಂಭೋಧಿ ರಾಮನಂಬಿನ ಮೊನೆಯೊಳ್ ॥833॥

## ಗಳಗೆಯನಾಯಕನ ತಂದೆ ಮಲ್ಲಪ

ಕಂಟಕ ಬಂಟರಾಗಿ ಬುಧಸಂತತಿಗಂ ಪತಿಗಂ ಕುಬುದ್ಧಿಯಿಂ ।
ಕಂಟಕರಪ್ಪ ಟುಂಟುಕರದಿರ್ಕೆಮ ಸದ್ಬುಧರ್ಗಿಂದ್ರಭೂಜದೊಳ್ ॥
ಟೆಂಟಣಿಸುತ್ತುಮಿರ್ದ ನಿಜಬುದ್ಧಿಯಿನಾತ್ಮನೃಪಂಗೆ ಕೂಡೆ ನಿ ।
ಷ್ಕಂಟಕಮಾಗೆ ಮಾಡಿದನಿಳಾತಳಮೆಲ್ಲಮನೊಲ್ದು ಮಲ್ಲಪಂ ॥834॥

## ಗಳಗೆಯನಾಯಕ

ನರಸಿಂಹಭೂಮಿಪಾಳನ । ಕರಾಸಿ ಮಚ್ಚರಿಪರೆರ್ದೆಯ ಗೂಂಟಂ ವಿದ್ಯಾ ।
ಭರಣಂ ತಾನೆನೆ ರಂಜಿಪ । ನರಿಬಿರುದರನಡಸಿ ಪಿಡಿವ ಕೊಳಗಂ ಗಳಗಂ ॥835॥
ಗಗನಚರ ಕರ್ಣ ಶಿಬಿ ಬಲಿ । ಮಗಧಾಧಿಪರಿಂದಮುಮಳದಾನೋದಯದಿಂ ।
ಜಗದೊಳ್ ನಾಯಕಗಳಗಂ।ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ॥836॥

ಕ್ಷೀರಸಮುದ್ರದಂತೆ ಸಿರಿಗಾಲಯಮಾಗಿ ಧರಿತ್ರಿಗೊಪ್ಪುವೀ ।
ದೋರಸಮುದ್ರದೊಳ್ ಗಳಗಣಂ ಗಳಗೇಶ್ವರದಿವ್ಯಗೇಹಮಂ ॥
ಸಾರಮರಾದ್ರಿಸನ್ನಿಭಮನೊಲ್ದೆಸೆಯುತ್ತಿರೆ ಮಾಡಿದಂ ಲಸ ।
ದ್ವೀರನುದಾರನತ್ಯಮಲಸದ್ಗುಣಹಾರನಿಳಾತಳಸ್ತುತಂ ॥837॥

## 161 ಕಡೂರು 136. 1173

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಹಿರಿಯೂರ ನಾಳ್ಪ್ರಭು ಬೊಪ್ಪಗೌಡನು ಸೋಮನಾಥದೇವರಿಗೆ ದೊರೆಯಿಂದ ಒಂದು ಗ್ರಾಮವನ್ನು ಪಡೆದು ಬಿಟ್ಟಂತೆ ಹೇಳಿದೆ.**

**ಎರೆಯಂಗ**

ಎಱಗಿದ ಜನಕ್ಕೆ ಪೊಮ್ಮಗಿ | ಲೆಱಗಿದವ್ರೋಲ್ ಲೋಕವಟ್ಟಮೆನೆ ಪೊಮ್ಮಱಿಯಂ |
ಕಱಿವನುಱದೆಱಗದಹಿತಂ | ಗೆಱಗಿದ ಬಱಸಿಡಿಲೆನಿಪ್ಪನೆಱಿಯಂಗನೃಪಂ ||838||

**ವಿಷ್ಣುವರ್ಧನ**

ಪಡುವಣ ಮೂಡಣ ತೆಂಕಣ|ಗಡಿಗಳ್ ತನ್ನಾಳ್ದ ನೆಲಕೆ ಮೂಱುಸಮುದ್ರಂ |
ಬಡಗಲ್ ಪೆರ್ದೊಱೆ ತಾಂ ಗಡಿ|ಗಡಿಯಿಲ್ಲಾ ವಿಷ್ಣು ಕಿಡಿಸಿದಹಿತಗ್ಗೆಂತುಂ||839||

**ಬಲ್ಲಾಳ II**

ವಿನಯಶ್ರೀನಿಧಿಯಂ ವಿವೇಕಸಿಧಿಯಂ ಬ್ರಹ್ಮಣ್ಯನಂ ಪೂರ್ಣಪು |
ಣ್ಯನನುದ್ದಾಮಯಶೋಬ್ಧಿಯಂ ಜಿತಜಗತ್ಪ್ರತ್ಯರ್ಥಿಯಂ ಸರ್ವಸ ||
ಜ್ಜನಸಂಸ್ತುತ್ಯನನುದ್ಧವದ್ವಿತರಣಶ್ರೀವಿಕ್ರಮಾದಿತ್ಯನಂ |
ಮನುಜೇಶರ್ ಯದುರಾಜರಾಜನನದೇಂ ಬಲ್ಲಾಳನಂ ಪೋಲ್ವರೇ ||840||

---

## 162 ಶಿಕಾರಿಪುರ 236. 1174

**ಇದರಲ್ಲಿ ಕಳಚುರ್ಯರಾಜನಾದ ರಾಯಮುರಾರಿ ಸೋವಿದೇವನ ಆಳಿಕೆಯಲ್ಲಿ ಕಾದಂಬ ಸೋಮದೇವನ ಪ್ರಧಾನ ಮಾಚರಸನು ಬಂದಣಿಕೆಯಲ್ಲಿ ಬೊಪ್ಪೇಶ್ವರ ದೇವಸ್ಥಾನವನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

**ಭರತಕ್ಷೇತ್ರ**

ಬಾಜಿಸೆ ಡಕ್ಕೆಯಂ ಪ್ರಿಯರ ಮೆಲ್ಲೆರ್ದೆ ತುಂಪಗಳೆಂಬುವೆತ್ತಿರಲ್ |
ರಾಜಿಸಿ ಪಾಡೆ ಕೆಂದಳಿರೆ ಕೈದಳಮಾಗಿರೆ ಮಂದಮಾರುತಂ ||
ಯೋಜಿಸೆ ತಾಳಮಂ ರತಿಯನಾಡಿಸೆ ಮನ್ಮಥನಂತರಂಗದೊಳ್ |
ಸಾಜಮೆನಿಪ್ಪುದಲ್ತೆ ಭರತಾಹ್ವಯಮಂ ಭರತೋರ್ವಿಗುರ್ವಿನಿಂ ||841||

## ರಾಯಮುರಾರಿ ಸೋವಿದೇವ

ಕಾಯಲುಮೀಯಲುಂ ನೆಱೆಯದುರ್ವಿಪರಿಂದಡಿಗಱ್ದ ಭೂಮಿಯಂ ।
ಜೀಯೆನೆ ಧಾತ್ರಿ ಕಾಯೆನೆ ವಿರೋಧಿಗಳರ್ಥದೆ ತೃಪ್ತಿವೆತ್ತು ಹೋ ॥
ಹೋಯೆನೆ ವಂದಿಗಳ್ ಧರೆಯನೊಪ್ಪುವ ಕೋಡಿಸೊಳೆತ್ತಿ ತಾಳ್ದಿದಂ ।
ರಾಯಮುರಾರಿಯೆಂಬ ಹೆಸರೊಪ್ಪಿರೆ ಸೋಮಮಹೀಶ್ವರೇಶ್ವರಂ ॥842॥

## ಕಾದಂಬ ಸೋಮದೇವ

ಲೀಲೆಯನಾಗುಮಾಡೆ ಬನವಾಸೆಗೆ ವೀರರಸಂ ಪೊದಱ್ದ ಬಾ ।
ಳ್ವೇಲಿಯಿದೆಂಬಿನಂ ಬಳಸಿ ರಕ್ಷಿಸೆ ತನ್ನಯ ತೋಳ ಬಾಳ್ ಜಸಂ ॥
ಸಾಲೆ ಬೆಡಂಗುವೆತ್ತ ಪೊಸ ಸುಗ್ಗಿಯನಾರ್ಜಿಸೆ ನಾಡು ನಾಡೆ ಸೌ ।
ಖ್ಯಾಲಯಮಾಗೆ ಮಾಡಿದುದು ಸತ್ಯಪತಾಕನ ರಾಜವೈಭವಂ ॥843॥

## ಮಾಚರಸ

ವಿಜಿಗೀಷು ಸೋಮಪಾದೋ । ಪಜೀವಿ ಸೋಮನೃಪಖಡ್ಗವಲ್ಲೀವಿಳಸ ।
ನ್ನಿಜವೀರರಸಂ ಸೋಮ।ಪ್ರಜಾರ್ಣವೋದ್ವೀಚಿ ಮಾಚಿ ಸೊಗಯಿಸಿ ತೋರ್ಪಂ॥844॥

ಶರಣೆಂದರೆರ್ದೆಯ ಕೈ ಮ । ಚ್ಚರಿಪದಟರ ಮೊಗದ ಕೈ ಜನಸ್ತುತಮಾಹೇ ।
ಶ್ವರತತಿಯ ಮುಗಿದ ಕೈ ಬೇ।ಱ್ಪರ ಪಿಡಿಕೈ ಮಾಚಿಗಂ ಚತುರ್ಭುಜನಾದಂ॥845॥

ಗಂಡುಱಿದು ಸಿತಗರೆಲ್ಲಂ।ಪೆಂಡಿರವೋಲ್ ಕುರುಳ ಬೆರಳ ಹುರುಳಂ ಕೊಟ್ಟಂ।
ಕಂಡುಂ ನಡೆವರ್ ಸಿತಗರ । ಗಂಡಂ ಶ್ರೀಮಾಚಿ ಜಡಿವನಸಿಯನೆನುತ್ತುಂ ॥846॥

ಸಿತಗರ ಗಂಡನೆಯ್ದಿದನೆನಲ್ ಕಹಳಾರವಮನ್ಯಭೂಭುಜರ್ ।
ಸತಿಯರ ರೂಪಿನಿಂ ಪಿಡಿದು ಪೆಂಡಿರ ಕೈಗಳನೋಡೆ ಮುಂದಿಯೊಳ್ ॥
ಮತಿ ಮಱೆದಲ್ಲಿ ದಂಪತಿಯೆನಲ್ ಸತಿಯಾಂ ಪತಿಯೆಂದು ಸೂರುಳಲ್ ।
ಪತಿ ಸತಿ ನಂಬದಂತುಟವರ್ಗಾದುದು ಮಾಚನ ಖಡ್ಗರೋಚಿಯಿಂ ॥847॥

ತಳ ಹೆಜೆಯಾಗಲಿಕ್ಕಿದ ಸುವರ್ಣದ ಮುದ್ರಿಕೆ ರತ್ನಮಾಗೆ ಸಂ ।
ಚಳಿಪುಗುರೆಲ್ಲ ಸಂದೆಸೆವ ದಂತದ ಪಙ್ಕ್ತಿಗಳಾಗೆ ರೌದ್ರದಿಂ ॥
ಬಳೆದ ಸುಕೋಪಮೆಂಬುದೆ ವಿಷಂ ತನಗಾಗಲರಾತಿಜೀವಮಂ ।
ಘುಱಿಲೆನೆ ನುಂಗುತುಂ ನಲಿಯುತಿರ್ದುದು ಮಾಚನ ಬಾಹುಪನ್ನಗಂ ॥848॥

### ನಾಗರಖಂಡ

ತರದಿಂ ಪೊಂಬಾೞೆಗಳ್ ಪಣ್ಗೊಲೆಗಳುಗುವ ಪೆರ್ವಾೞಿನಿಂ ತೆಂಗುಗಳ್ ಕಾ |
ಯ್ವಿರಿಪಿಂ ಬರ್ಪಂಬುವಿಂ ಮಾವುಗಳೆಸೆವ ರಸಾಸಾರದಿಂ ಕರ್ವುಗಳ್ ಸು ||
ರ್ವ್ವೀರು ಸೋಂಕಿಂದೊಕ್ಕ ಸಾಱಿಂ ಬಳೆದು ಬಳಿಕಮಂತೆಲ್ಲಮೊಂದಾಗಿಯಾನಾ |
ಗರಖಂಡಪ್ರಾಂತದೊಳ್ ಕಾಲ್ವರಿಯಿಸೆ ಬೆಳೆಗುಂ ಕೂಡೆ ಕೇದಾರವರ್ಗಂ ||949||

---

## 163 ಚೆನ್ನರಾಯಪಟ್ಟಣ 146. 1174

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನು ಬೆಕ್ಕನೆಂಬ ಗ್ರಾಮವನ್ನು ನಯಕೀರ್ತಿ ಸಿದ್ಧಾಂತಚಕ್ರವರ್ತಿಗೆ ಕೊಟ್ಟಂತೆ ಹೇಳಿದೆ.**

### ಹೊಯ್ಸಳವಂಶ

ಶ್ರೀಕಾಂತಾಪೀನವಕ್ಷೋರುಹಗಿರಿಶಿಖರೊಜ್ಜೃಂಭನಾಣಂ ವಿಶಾಳಂ |
ಲೋಕೋದ್ಯತ್ತಾಪಲೋಪಪ್ರವಣವಿಳಸಿತಂ ವೀರವಿದ್ವಿಣ್ಮಹೀಪಾ ||
ನೇಕವ್ಯಾಮುಕ್ತಸಂಜೀವನಬಹಳಿತಮುದ್ಯದ್ಗುಣಸ್ತೋಮಮುಕ್ತಾ |
ನೀಕಂ ನಿಷ್ಕಂಟಕಂ ನಿಶ್ಚಳಮೆನಲೆಸೆಗುಂ ಹೊಯ್ಸಳಕ್ಷತ್ರವಂಶಂ ||850||

### ವಿನಯಾದಿತ್ಯ

ಅದಱೊಳ್ ಮೌಕ್ತಿಕದಂತೆ ಪುಟ್ಟಿದನಿಳಾಪಾಳೌಘಚೂಡಾಮಣಿ |
ತ್ವದಿನುದ್ಯದ್ಗುಣಶೋಭೆಯಿಂ ಸ್ವರುಚಿಯಿಂ ಸದ್ವೃತ್ತರಾರಾಜಿತ ||
ತ್ವದಿನತ್ಯುನ್ನತಜಾತಿಯಿಂ ಸಮಮೆನಲ್ ಸಂಗ್ರಾಮರಂಗಾಗ್ರದೊಳ್ |
ಮದವದ್ವೈರಿಕುಳಪ್ರತಾಪಿ ವಿನಯಾದಿತ್ಯಂ ಧರಾಧೀಶ್ವರಂ ||851||

### ಬಳ್ಳಾಳ II

ರಿಪುರಾಜದ್ರಾಜಸಂಪತ್ಸರಸಿರುಹಶರತ್ಕಾಲಸಂಪೂರ್ಣಚಂದ್ರಂ |
ರಿಪುಭೂಪಾಳಪ್ರದೀಪಪ್ರಕರಪಟುತರೋದ್ಭೂತಭೂರಿಪ್ರವಾತಂ ||
ರಿಪುರಾಜನ್ಯೌಘಸೇನಾಜಳಧಿಕಬಳನೌರ್ವಾನಳೋಗ್ರಪ್ರತಾಪಂ |
ರಿಪುಪೃಥ್ವೀಪಾಳಜಾಳಕ್ಷುಭಿತಯಮನಿಪಂ ವೀರಬಲ್ಲಾಳದೇವಂ ||852||

---

## ✓164 ಅರಸಿಯಕೆರೆ 138. 1174

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಹಾಪ್ರಧಾನ ಎರೆಯಣ್ಣನು ನಾರಸಿಂಹ ಪುರದೊಳಗೆ ಪಾಠಶಾಲೆಗಾಗಿಯೂ ವಿದ್ಯಾರ್ಥಿಗಳ ಭೋಜನಕ್ಕಾಗಿಯೂ ಮುರಿಹಿಂಡಿ ಯೆಂಬ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

### ನಾರಸಿಂಹ I

ವಿಷ್ಣುವ ಲಕ್ಷ್ಮಿಯ ಕುಲವ । ರ್ಧಿಷ್ಣುವೆನಲ್ ನೆಗೞ್ದನಿಕ್ಷು ಚಾಪನ ವೋಲ್ ಭ್ರಾ ।
ಜಿಷ್ಣುವೆ ಸಿಂಗದ ತೆಱದಿಂ । ಜಿಷ್ಣುವೆ ಪಸರಿಸಿದ ಜಸದ ನರಸಿಂಹನೃಪಂ ॥853॥

### ಎರೆಯಣ್ಣನ ತಂದೆ ದಿವಾಕರ

ಜನದನುರಾಗಮಂ ಪಡೆದು ಸತ್ಪಥದೊಳ್ ನಡೆಗಲ್ತು ತೇಜದಿಂ ।
ದನುದಿನಮೆಯ್ದೆ ಪೆರ್ಚಿ ಕಮಳೋದಯಮಂ ತಳೆದಿರ್ದನಾವನಾ ॥
ತನೆ ದಿನಪಂ ದಲೆಂದು ನುಡಿವಾನುಡಿಯಂ ತಳೆದಿಂತು ಪುಟ್ಟಿದಂ ।
ಮನುನಿಭಚೊಬ್ಬರಾಜವಿಭುಗಂ ವಧುಚಾಮವೆಗಂ ದಿವಾಕರಂ ॥854॥

### ಎರೆಯಣ್ಣ

ಎಱಗದ ಗಂಡಮಂಡಳಿಯನಂಡಲೆದಾಳ್ದನ ಪಾದದಲ್ಲಿ ತಂ ।
ದೆಱಗಿಪನಾಂತರಂ ನಿಜಭುಜಾಸಿಯೊಳಾಸುರಮಾಗಲಾಜಿಯೊಳ್ ॥
ಕುಱಿದಱಿಮಾಡಿ ಸಾಲ್ವೆಸೆಗಮಿಕ್ಕುವ ನಿಕ್ಕುವಮೆಂಬ ಬಲ್ಪುವೆ ।
ತ್ತೆಱಗನ ಗಂಡಡಿಂಡಿಮದ ಡಂಬರಮೊಪ್ಪುವುದೀಧರಿತ್ರಿಯೊಳ್ ॥855॥

---

## 165 ಹಾಸನ 58. 1174

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನು ಹೆರಗಿನ ಬಸ್ತಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಜಕ್ಕವ್ವೆ

ಅತಿಶೋಭಾಕರಮಪ್ಪ ವಿಷ್ಣುವಿನ ವಕ್ಷಸ್ಥಾನದೊಳ್ ಲಕ್ಷ್ಮಿಯು ।
ನ್ನತಿವೆತ್ತಿರ್ಪವೊಲಿರ್ಕೆ ಕೀರ್ತಿಯುತನೊಳ್ ಶ್ರೀಚಾಮನೊಳ್ ಕೂಡಿ ಸಂ ॥
ಗತಸತ್ಪುರ್ ಬಹುಪುತ್ರರಂ ಪಡೆಯುತುಂ ಜಕ್ಕವ್ವೆ ಚಂದ್ರಾರ್ಕರುಂ ।
ಕ್ಷಿತಿಯುಂ ಮೇರುನಗೇಂದ್ರಮುಳ್ಳಿನೆಗಮಿಂ ಭದ್ರಂ ಶುಭಂ ಮಂಗಳಂ ॥856॥

### ಫಲಸ್ತುತಿ

ಇವನೀಯಂದದಿನೆಯ್ದೆ ಪಾಲಿಸಿದವಗ್ಗ್ರೀನ್ಷ್ಟಾರ್ಥಸಂಸಿದ್ಧಿ ಸಂ |
ಭವಿಕುಂ ಕೊಂಡಳಿದಂಗೆ ಗಂಗೆ ಗಯೆ ಕೇದಾರಂ ಕುರುಕ್ಷೇತ್ರಮೆಂ ||
ಬಿವಱೊಳ್ ಪೇಸದೆ ಪಾರ್ವರಂ ಗೊರವರಂ ಗೋಬ್ರಿಂದಮಂ ಪೆಂಡಿರಂ |
ತವೆ ಕೊಂದಿಕ್ಕಿದ ಪಾಪಮೆಯ್ದುಗುಮವಂ ಪೋಪ್ಗಂ ನಿಗೋದಂಗಳೊಳ್ ||857||

---

## 166 ಅರಸಿಯಕೆರೆ 69. 1174

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಕೇತಮಲ್ಲ ಮೊದಲಾದವರು ಅರೆಯಶಂಕರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿಷ್ಣುವರ್ಧನನ ಮಹಿಷಿ ಲಕ್ಷ್ಮಾದೇವಿ

ಲಕ್ಷ್ಮಾದೇವಿ ಖಗಾಧಿಪ | ಲಕ್ಷ್ಮಂಗೆಸೆದಿರ್ದ ವಿಷ್ಣುಗೆಸೆವಂತೆ ವಲಂ |
ಲಕ್ಷ್ಮಾದೇವಿ ಲಸನ್ಮೃಗ|ಲಕ್ಷ್ಮನನೆ ವಿಷ್ಣುಗಗ್ರಸತಿಯೆನೆ ನೆಗಳ್ದಳ್ ||858||

### ಬಲ್ಲಾಳ II

ಕುಲಕೆ ಕಳಂಕಮಿಲ್ಲದ ವಿಶುದ್ಧಚರಿತ್ರದ ಕಲ್ಪಭೂಜಮಂ |
ತೊಲತೊಲಗೆಂಬ ದಾನಗುಣದಾಂತರನುಗ್ರಭುಜಾಸಿಧಾರೆಯಿಂ |
ಬಲಕನೆ ಮಾಡಿ ಸಗ್ಗಮನೆ ಮುಟ್ಟಿಸುವರ್ಜುನಸಚ್ಚರಿತ್ರಮ |
ಗ್ಗಲಿಸಿದುದೆಂದು ಬಣ್ಣಿಪುದು ಬಲ್ಲನೃಪಾಳನನೀಜಗಜ್ಜನಂ ||859||

### ಕೇತಮಲ್ಲ

ಪುರುಷನಿಧಾನನೆಂದು ಪುರುಷಾರ್ಥಪುರೂರಪನೆಂದು ಸತ್ಕವೀ |
ಶ್ವರಜನವಂದ್ಯನೆಂದು ಧರೆ ಬಣ್ಣಿಸುತಿರ್ಪುದು ಕೇತಮಲ್ಲನಂ ||
ಪರಹಿತಖೇಚರಾಧಿಪನನೀಕಲಿಕಾಲದ ಕಲ್ಪಭೂಜನಂ |
ವರಗುಣಿ ಮಂತ್ರಿಮಾನವಶಿಖಾಮಣಿಯಂ ಜಸದರ್ಥಿಗಂಡನಂ ||860||

---

## 167 ತಿಪಟೂರು 93. 1174

**ಈ ನಿಷಿದಿಗಲ್ಲಿನಲ್ಲಿ ಹರ್ಯಲೆ ಸಮಾಧಿವಿಧಿಯಿಂದ ಮುಡಿಪಿದಳೆಂದು ಹೇಳಿದೆ.**

ಬರವಂ ಕೇಳ್ದಮರಾವತೀಪುರದ ದೇವೀಸಂಕುಲಂ ಬಂದು ನೂ |
ಪುರಮಂ ಮುತ್ತಿನ ಹಾರಮಂ ಕಟಕಮಂ ಕೇಯೂರಮಂ ವಜ್ರದುಂ ||

ಗುರಮಂ ಮಾಣಿಕದೋಲೆಯಂ ತುಡಿಸಿ ಬೇಗಂ ದೇವಿ ನೀನೇಱು ರಾ ।
ಗರಸಂ ಕೆಯ್ಮಿಗಲೀವಿಮಾನಮನೆನುತ್ತುಂ ತಂದವರ್ ಸಾರ್ಚಿದರ್ ॥861॥
ಏಱೆ ವಿಮಾನಮಂ ಬರೆ ಸುರಾಂಗನೆಯರ್ ನಳಿತೋಳ ನುಣ್ಬೊಗರ್ ।
ತೋಱುವಿನಂ ಮಹೋತ್ಸವದೆ ಸೇಸೆಯನಿಕ್ಕೆ ಸುರಾಸಕಸ್ವನಂ ॥
ಮೀಱೆ ಘನಾಘನಧ್ವನಿಯನೆತ್ತಿದ ಸತ್ತಿಗೆ ಚಂದ್ರಬಿಂಬಮಂ ।
ಬೀಱೆ ವಿಲಾಸದಿಂ ಪಿಡಿದು ಚಾಮರಮಿಕ್ಕೆ ಸಮಂತು ಪೊಕ್ಕಳಾ ।
ನೀಱೆ ಮಹಾನುಭಾವೆ ಸತಿ ಪದ್ಮಲದೇವಿ ಸುರೇಂದ್ರಲೋಕಮಂ * ॥862॥

---

## 168 ಶ್ರವಣಬೆಳ್ಗೊಳ 240. ಸು. 1175

**ಇದರಲ್ಲಿ ಭಂಡಾರಿ ಹುಳ್ಳನು ಹೊಯ್ಸಳರಾಜನಾದ 2ನೆಯ ಬಲ್ಲಾಳನಿಂದ ಕೆಲವು ಗ್ರಾಮಗಳನ್ನು ಪಡೆದು ಗೊಮ್ಮಟದೇವರೇ ಮುಂತಾದ ದೇವರುಗಳಿಗೆ ಬಿಟ್ಟಂತೆ ಹೇಳಿದೆ.**

### ಗಂಗರಾಜ

ಕದನದೊಳಂದು ನಿನ್ನ ತರವಾರಿಯ ಬಾರಿಗೆ ಮೆಯ್ಯನೊಡ್ಡಲಾ ।
ಱದೆ ನಳಿದಿನ್ನುಮಂತದನೆ ಜಾನಿಸಿ ಜಾನಿಸಿ ಗಂಗ ತನ್ನ ನಂ ॥
ಬಿದ ಸುದತೀಕದಂಬದೆರ್ದೆ ಪೌವನೆವೋಗಿರೆ ಪುಲ್ಲೆವೆರ್ಚುವೆ ।
ರ್ಚಿದಪನಹರ್ನಿಶಂ ತಿಗುಳದಾಮನರಣ್ಯಶರಣ್ಯವೃತ್ತಿಯಿಂ ॥863॥

### ಬಲ್ಲಾಳ II

ಚಿರಕಾಲಂ ರಿಪುಗಳ್ಗಸಾಧ್ಯಮೆನಿಸಿರ್ದುಚ್ಚಂಗಿಯಂ ಮುತ್ತಿ ದು ।
ರ್ಧರತೇಜೋನಿಧಿ ಧೂಳಿಗೋಂಟೆಯನೆ ಕೊಂಡಾಕಾಮದೇವಾವನೀ ॥
ಶ್ವರನಂ ಸಂದೊಡೆಯಕ್ಷಿತೀಶ್ವರನನಾ ಭಂಡಾರಮಂ ಸ್ತ್ರೀಯರಂ ।
ತುರಗವ್ರಾತಮುಮಂ ಸಮಂತು ಪಿಡಿದಂ ಬಲ್ಲಾಳಭೂಪಾಳಕಂ ॥864॥

---

## 169 ಕಡೂರು 53. 1175

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಂತ್ರಿ ಆಚಿರಾಜನ ಹೆಂಡತಿ ಬನದವೆ ಬ್ರಹ್ಮಸಮುದ್ರದಲ್ಲಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

---

* ಇದು ಪಂಚಪಾದವೃತ್ತ.

### ಹೊಯ್ಸಳವಂಶ

ಸ್ವಸ್ತಿ ಸಮಸ್ತವಸ್ತುನಿಜಯಾನ್ವಿತಮಾನತಭೂಭೃದಾಶ್ರಯಂ ।
ವಿಸ್ತೃತವೇಷ್ಟಿತಾವನಿತಳಂ ಪೃಥುಸತ್ವಸಮನ್ವಿತಂ ನಿಜಾ ॥
ಪಾಸ್ತಖಿಳವ್ರಜಾವಕರಮುಜ್ವಳಕೀರ್ತಿಸುಧಾಂಶುಸಂಭವಂ ।
ಪ್ರಸ್ತುತಮಾಯ್ತು ಹೊಯ್ಸಳನೃಪಾಳಕುಳಾಂಬುಧಿ ನಿತ್ಯಸುಸ್ಥಿತಂ ॥865॥

### ಆಚಿರಾಜ

ತನಗಂ ಯೋಗಂಧರಂಗಂ ಪತಿಹಿತಕೃತಿಯೊಳ್ ಮಚ್ಚರಂ ಮನ್ಮಥಂಗಂ ।
ತನಗಂ ಸತ್ಕಾಮಿನೀಮೋಹನಘನಗುಣದೊಳ್ ಮಚ್ಚರಂ ಸ್ವರ್ದ್ರುಮಕ್ಕಂ ॥
ತನಗಂ ವಂದಿವ್ರಜಪ್ರೀಣನವಿತರಣದೊಳ್ ಮಚ್ಚರಂ ಶೂದ್ರಕಂಗಂ ।
ತನಗಂ ಶೌರ್ಯೋಕ್ತಿಯೊಳ್ ಮಚ್ಚರಮೆನೆನೆಗಱ್ದಿರ್ದಾಚಿಯಂ ಪೋಲ್ವನಾವಂ॥866॥

---

## 170 ಹೊನ್ನಾಳಿ 45. 1175

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಸಿಂದರಾಜನಾದ ಈಶ್ವರ ದೇವರಸನು ಬ್ರಾಹ್ಮಣರಿಗೆ ಭೂಮಿಯನ್ನು ಕೊಟ್ಟಂತೆ ಹೇಳಿದೆ.**

### ಬಲ್ಲಾಳ II

ಕಮಠಾಧೀಶಫಣೀಂದ್ರದಿಕ್ಕರಿಗಳಿಂ ತಂತಮ್ಮ ಕೇಳೀವಿಲಾ ।
ಸಮನಃಪ್ರೀತಿಯೊಳಿರ್ಪುದಾಯತಮಹಾಭೂಭಾರಮಂ ತಾಳ್ದುವಾ ।
ಶ್ರಮಮೇಕಿಂತಿನಿತೆಂದು ತಾನೆ ತಳೆಯಲ್ ಸಾಲ್ವೆಂ ದಲೆಂಬಂತೆ ದು ।
ರ್ದಮದೋರ್ದಂಡದೆ ತಾಳ್ದಿದಂ ವಸುಧೆಯಂ ಬಲ್ಲಾಳಭೂಪಾಳಕಂ ॥867॥

### ತೂದಪಿಳ್ಳೆದಂಡಾಧಿಪ

ತೊದಳಿಲ್ಲದೊಂದೆ ನುಡಿ ಲೋ । ಭದೊಳೊಂದದ ಮನಮೆಡಂಬಡಿಲ್ಲದ ಚರಿತಂ।
ಮದಮಿಲ್ಲದ ಸಂಪದಮೆಂ । ಬಿದು ಸಾಜಂ ತೂದಪಿಳ್ಳೆದಂಡಾಧಿಪನೊಳ್ ॥868॥

---

## 171 ಶ್ರವಣಬೆಳ್ಗೊಳ 66. 1176

**ಇದರಲ್ಲಿ ನಯಕೀರ್ತಿಗುರು ಸತ್ತಂತೆಯೂ ಮಂತ್ರಿ ನಾಗದೇವನು ನಿಸಿದಿಗೆಯನ್ನು ಮಾಡಿಸಿದಂತೆಯೂ ಹೇಳಿದೆ.**

### ನಯಕೀರ್ತಿ

ಗುರುವಾದಂ ಖಚರಾಧಿಪಂಗೆ ಬಲಿಗಂ ದಾನಕ್ಕೆ ಬಿಣ್ಪಿಂಗೆ ತಾಂ ।
ಗುರುವಾದಂ ಸುರಭೂಧರಕ್ಕೆ ನೆಗಱ್ದಾ ಕೈಲಾಸಶೈಲಕ್ಕೆ ತಾಂ ॥
ಗುರುವಾದಂ ವಿನುತಂಗೆ ರಾಜಿಸುವಿರುಂಗೋೞಂಗೆ ಲೋಕಕ್ಕೆ ಸ ।
ದ್ಗುರುವಾದಂ ನಯಕೀರ್ತಿದೇವಮುನಿಪಂ ರಾದ್ಧಾಂತಚಕ್ರಾಧಿಪಂ ॥869॥

---

## 172 ಚಿಕ್ಕನಾಯಕನಹಳ್ಳಿ 30. 1177

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಹೆಗ್ಗಡೆ ನಾರಸಿಂಗನೂ ಹೆಗ್ಗಡೆ ಮುಂಚಯ್ಯನೂ ಬ್ರಾಹ್ಮಣರಿಗೆ ವರ್ಷಾಶನವಾಗಿ ಹಣವನ್ನು ಕೊಟ್ಟಂತೆ ಹೇಳಿದೆ.

### ನಾರಸಿಂಗ

ವಿನಯಾಂಭೋರಾಶಿ ಸತ್ಯಾಸ್ಪದನುಪಚಿತಸತ್ಪುಣ್ಯನೌದಾರ್ಯತುಂಗಂ ।
ಕನಕಕ್ಷ್ಮೋಣೀಧ್ರಧೈರ್ಯಂ ಸುಚರಿತನುದಿತಾರ್ಕಪ್ರಭಂ ವಂದಿಕಲ್ಪಾ ॥
ವನಿಜಂ ಕೀರ್ತ್ಯಂಗನಾವಲ್ಲಭನೆನುತೆ ಮಹೋತ್ಸಾಹದಿಂ ಕೂರ್ತು ವಿದ್ವ ।
ಜ್ಜನಮೆಲ್ಲಂ ನಾರಸಿಂಹಪ್ರಭುವನನುದಿನಂ ಬಣ್ಣಿಕುಂ ಲೀಲೆಯಿಂದಂ ॥870॥

### ಮುಂಚಯ್ಯ

ಉದಿತಾರ್ಕಪ್ರಭನತ್ಯುದಾರಚರಿತಂ ಸತ್ಕೀರ್ತಿಚಂದ್ರಾಂಶು ಸ ।
ತ್ಯದ ಬಿತ್ತಾಶ್ರಿತಕಲ್ಪವೃಕ್ಷನಸತೀದೂರಂ ಬುಧಾಧಾರನ ॥
ಭ್ಯುದಯಶ್ರೀರಮಣಂ ವಿನೂತಗುಣರತ್ನಾಲಂಕೃತಂ ತಾನೆನಲ್ ।
ಮುದಮಂ ತಾಳ್ದಿದ ಮಂತ್ರಿ ಮುಂಚವಿಭುವಂ ಬಣ್ಣಿಪ್ಪನೇವಣ್ಣಿಪಂ ॥871॥

### ಫಲಸ್ತುತಿ

ಶಾಸನಮಿದೇನಿದೇತಱ । ಶಾಸನಮಾರಿತ್ತರೇಕೆ ಸಲಿಸುವೆನೆಂಬಾ ।
ಸಾಸಿಗನಾಚಂದ್ರಾರ್ಕಂ । ಪೇಸದೆ ನರಕಂಗಳೊಳಗೆ ತಿಱ್ರನೆ ತಿಱಿಗುಂ ॥872॥

---

## 173 ಅರಸಿಯಕೆರೆ 62. 1177

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಹಲುಕೂರ ಮಹಾಪ್ರಭುಗಳು ಮುದ್ದಗೌಂಡ, ನಾರಸಿಂಗಗೌಂಡ ಮುಂತಾದವರು ಕಳಿದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಎಱೆಯಂಗ

ಮಾಳವರಾಜ್ಯಮೂಳಮೆನಿಪಗ್ಗದ ಧಾರೆಯನಾತ್ಮಸೇನೆಯಿಂ ।
ಚಾಳಿಸಿ ಚಕ್ರವರ್ತಿಗೆ ಜಯಂ ಮಿಗೆ ತನ್ನ ಭುಜಪ್ರತಾಪಮಂ ॥
ಪಾಳಿಸಿ ದಿಗ್ಜಯಪ್ರಕಟಕೀರ್ತಿಪತಾಕೆಯನುತ್ತರಾಶೆಯೊಳ್ ।
ಕೀಲಿಸಿದಂ ದಿನೇಶನಗಿದೀಕ್ಷಿಸುವಂತೆಱೆಯಂಗಭೂಭುಜಂ ॥873॥

### ಬಲ್ಲಾಳ I

ಚೇರಮ ಬೇರಮಂ ಬಿಸುಡು ಪಾಂಡ್ಯ ಕಡಂಗದಿರಂಧ್ರರಂಧ್ರಮಂ ।
ಪಾರದಿರೊಡ್ಡ ಗೊಡ್ಡಮನದಂ ಬಿಡು ಮಾಳವ ಕಾಳೆಗಕ್ಕೆ ಮೆ ॥
ಯ್ದಾರದೆ ಸಾರೆಲೇ ತಿಗುಳ ನೀಂ ಜಗುಱೆಂಬುದಪಾರವೀರದು ।
ರ್ವಾರಗಭೀರಧೀರತೆಯ ವಿಶ್ರುತಘೋಷಣೆ ಬಲ್ಲಭೂಪನಾ ॥874॥

### ವಿಷ್ಣುವರ್ಧನ

ಎತ್ತಿದ ಮುನ್ನಮೆತ್ತಿ ನಡೆಗೊಳ್ಳದ ಮುನ್ನಮಡರ್ತು ಕೋಪದಿಂ ।
ಮುತ್ತಿದ ಮುನ್ನಮರ್ಘಮನೆ ತೆತ್ತಿರಿಮಿತ್ತಿರಿಮಾತ್ಮದುರ್ಗಮಂ ॥
ಮತ್ತೆನವೇಡ ನಿರ್ಗಮಮಿದೆಂದು ವಿರೋಧಿಗೆ ವೀರಲಕ್ಷ್ಮಿ ಸಾ ।
ಱುತ್ತಿರೆ ವಿಷ್ಣುವಿಕ್ರಮದುಪಕ್ರಮಮಾಕ್ರಮಿಸಿತ್ತು ಲೋಕಮಂ ॥875॥

ಕಮಳಾಕ್ಷಂ ಪುರುಷೋತ್ತಮಂ ವಿಬುಧಲೋಕಾಹ್ಲಾದನಂ ದ್ವಿಷ್ಟದೈ ।
ತ್ಯಮದಧ್ವಂಸನನಂತಭೋಗಯುತನುರ್ವೀದಾರಧೌರೇಯನು ॥
ತ್ತಮಸತ್ವಾನ್ವಿತನುದ್ಧಯಾದವಕುಳಾಳಂಕಾರಮೆಂದಿಂತು ವಿ ।
ಷ್ಣುಮಹೀಶಂ ಸಲೆ ತಾನೆ ವಿಷ್ಣುವೆನಿಪಂ ಲಕ್ಷ್ಮೀವಧೂವಲ್ಲಭಂ ॥876॥

### ನಾರಸಿಂಹ I

ಇದಿರಾದರಿಭೂಪಾಲರ । ಮದದಾನೆಯ ಕೊಂಬನುಡಿದು ದಂತದ ಬಳೆಯಂ ।
ಬಿದುವಿನ ಮುತ್ತಿನ ಹಾರಮ।ನೊದವಿಸಿ ಜಯಸಿರಿಗೆ ತುಡಿಸುವಂ ನರಸಿಂಹಂ ॥877॥

### ಬಲ್ಲಾಳ II

ಧರೆಯಂ ವಿಕ್ರಾಂತದಿಂದೊಪ್ಪುವ ನಿಜಭುಜದೊಳ್ ತಾಳ್ದಿ ಮಾಱಾಂತು ನಿಂದಿ।
ರ್ದರಿಭೂಪಾಳರ್ಕಳಂ ದಿಕ್ತಟದ ಕಡೆವರಂ ತೂಳ್ದಿ ತದ್ವೀರಲಕ್ಷ್ಮೀ ।
ವರನಾದಂ ವೀರಬಲ್ಲಕ್ಷಿತಿಪತಿ ಶರಣಾಯಾತರಕ್ಷಾಕ್ಷಮಂ ಭಾ ।
ಸುರತೇಜಂ ರಾಜರಾಜಂ ಸಕಲಗುಣಗಣಾಂಭೋಜಿನೀರಾಜಹಂಸಂ ॥878॥

ತನಗಂ ಕಲ್ಪದ್ರುಮಕ್ಕಂ ವಿತರಣಗುಣದೊಳ್ ಮಚ್ಚರಂ ಶೂದ್ರಕಂಗಂ |
ತನಗಂ ವಿಕ್ರಾಂತವಿದ್ಯೋತಿತ ಭುಜಬಲದೊಳ್ ಮಚ್ಚರಂ ಮೇರುವಿಂಗಂ ||
ತನಗಂ ಪೆಂಪುಳ್ಳ ಬಿಣ್ಪಿಂ ತಳೆದ ಮಹಿಮೆಯೊಳ್ ಮಚ್ಚರಂ ತಾನೆನಲ್ ಧ |
ನ್ಯನಿಳಾಧೀಶರ್ಕಳೊಳ್ ವಿಶ್ರುತವಿಶದಯಶಂ ವೀರಬಲ್ಲಾಳದೇವಂ ||879||

ಮೂಡಲ್ ಸಂಚಳಿಸಿತ್ತು ಕಂಚಿ ಪಡುವಲ್ ಗೋಳಿಟ್ಟುದಂಭೋಧಿಯೆ |
ಱಿಕ್ಕೋಡಿತ್ತಗ್ಗದ ಚೇರದೇಶಮನಿತುಂ ಪಾಂಡ್ಯಾವನೀಮಂಡಳಂ ||
ಕಾಡೊಳ್ ಕೂಡೆ ತೆರಳ್ದು ಪೊಕ್ಕಡಗಿದತ್ತುದ್ದಾಮಸಂಗ್ರಾಮದೊಳ್ |
ಕೋಡಿಟ್ಟಂತು ಬರ್ದುಂಕುವನ್ನರೊಳರೇ ಬಲ್ಲಾಳಭೂಪಾಳನೊಳ್ ||880||

ಘನಶೌರ್ಯಂ ಬಲ್ಲುಭೂಪಂ ನಿಜವಿಜಯಹಯಾರೂಢನಾದಂ ಕಳಿಂಗಂ |
ವನವಾಸೋದ್ಯುಕ್ತನಾದಂ ತುಳುವನಳವುಗೆಟ್ಟೋಡಿದಂ ಕೊಂಕಣಂ ಭೋಂ |
ಕೆನೆ ಪುಣ್ಯಾರಣ್ಯಮಂ ಸಂವರಿಸಿದನಗಿದಂ ಗೂರ್ಜರಂ ಮಾಳವಂ ಏಂ |
ಧ್ಯನಿಕುಂಜಪ್ರಾಪ್ತನಾದಂ ಜಳಧಿನಿಕಟಮಂ ಚೋಳಿಕಂ ವೇಳೆಗೊಂಡಂ ||881||

ದಿಗಧಿಪರಂ ಪಳಂಚಲೆವ ವಿಕ್ರಮದೇಱಿಗೆ ನಗಂಗಳೇಱುಮಂ |
ನೆಗಪಲೊಡರ್ಚುವುಜ್ವಳದ ತೋಳ್ವಲಮಾನೆಗಱ್ದರ್ಕಬಿಂಬಮಂ ||
ಮುಗಿಯಿಪ ತೀವ್ರತೇಜಮಿವು ತನ್ನೊಳೆ ಸಮ್ಮತಮಾದುವೆಂದೊಡಾ |
ನೃಗನಹುಷಾದಿಗಳ್ ದೊರೆಯೆ ಬಲ್ಲುನೃಪಾಳನ ಬೀರದೇಱಿಗೆಯೊಳ್ ||882||

## 2 ನೆಯ ಬಲ್ಲಾಳನ ಮಹಿಷಿ ಬಮ್ಮಲದೇವಿ

ಇಂಗಡಲ ಸುತೆಯ ಪೆಂಪಂ | ಭಂಗಿಸುವ ವಿಲಾಸಮದ್ರಿಜಾತೆಯ ಸೊಬಗಂ |
ಭಂಗಿಸುವ ಸೊಗಸು ತನಗೆನೆ | ಲೇಂಗಳ ಬಣ್ಣಿಸುವರಳವೆ ಬಮ್ಮಲೆವಧುವಾ||883||

## ನಾರಸಿಂಹಗೌಂಡ

ಈವ ಗುಣಂ ಬೇಡಲೊಡಂ|ಕಾವ ಗುಣಂ ಭೀತಿಯಿಂದೆ ವ-ಱಿವುಗಲೆನಸುಂ |
ಭೂವಿನುತಮಾಗಿ ತೋರ್ಪುವು|ಭಾವಕನಿಧಿ ನಾರಸಿಂಹಗೌಂಡನೊಳೆಂದುಂ ||884||

## ಮುದ್ದಗೌಂಡ

ನೋಡಲ್ಕತ್ತಳಗಂ ಸಹಸ್ರನಯನಂಗಂ ರೂಪು ಮಾರ್ಕೊಂಡು ಮಾ |
ತಾಡಲ್ಕದ್ಭುತಮಂತಕಂಗಮೆನಸುಂ ವಿಕ್ರಾಂತಸತ್ಕೀರ್ತಿ ನೀ ||
ಳ್ದಾಡಲ್ಕಿಟ್ಟೆಡೆ ವಾರ್ಧಿವೇಷ್ಟಿತಧರಾಚಕ್ರಂ ದಲೆಂದೊಲ್ದು ಮಾ |
ತಾಡುತ್ತಿರ್ಪುದು ಮುದ್ದಗೌಂಡನ ಗುಣವ್ರಾತಂಗಳಂ ವಂದಿಗಳ್ ||885||

---

## 174 ನಾಗಮಂಗಲ 70. 1177

ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಪಟ್ಟಣಸ್ವಾಮಿ ಸೋಮಿಸೆಟ್ಟಿ ಪಟ್ಟಣದಲ್ಲಿ ತಾನು ಕಟ್ಟಿಸಿದ ಪಾರ್ಶ್ವಜಿನಾಲಯಕ್ಕೆ ಭೂಮಿಯನ್ನು ಬಿಟ್ಟನೆಂದು ಈ ಶಾಸನದಲ್ಲಿ ಹೇಳಿದೆ.

### ಹೊಯ್ಸಳವಂಶ

ಶ್ರೀಪತಿಜನ್ಮದಿಂದೆಸೆವ ಯಾದವವಂಶದೊಳಾದ ದಕ್ಷಿಣೋ |
ರ್ವೀಪತಿಯಪ್ಪನೊರ್ವ ಸಳನೆಂಬ ನೃಪಂ ಸೆಳೆಯಿಂದೆ ಕೋಪನ ||
ದ್ವೀಪಿಯನೊಂದನೊರ್ವ ಮುನಿ ಪೊಯ್ ಸಳ ಎಂದೊಡೆ ಪೊಯ್ದು ಗೆಲ್ದ ದಿ |
ಗ್ವ್ಯಾಪಿಯಶಂ ನೆಗಱ್ತೆವಡೆದಂ ಗಡ ಪೊಯ್ಸಳನೆಂಬ ನಾಮದಿಂ ||886||

ಸ್ವಸ್ತಿ ಶ್ರೀಜನ್ಮಗೇಹಂ ವಿಧೃತನಿರುಪಮೋದಾತ್ತತೇಜೋಮಹಾರ್ಣಂ |
ವಿಸ್ತಾರಾಂತಃಕೃತೋರ್ವೀತಳಮವನತಭೂಭೃತ್ಕುಲತ್ರಾಣದಕ್ಷಂ ||
ವಸ್ತುವ್ರಾತೋದ್ಭವಸ್ಥಾನಕಮಮಲಯಶಶ್ಚಂದ್ರಸಂಭೂತಿಧಾಮಂ |
ಪ್ರಸ್ತುತ್ಯಂ ನಿತ್ಯಮಂಭೋನಿಧಿನಿಭಮೆಸೆಗುಂ ಪೊಯ್ಸಳೋರ್ವೀಶವಂಶಂ ||887||

### ಎರೆಯಂಗ

ಆತಂ ಚಾಳುಕ್ಯಚಕ್ರೇಶನ ಬಲದ ಭುಜಾದಂಡಮುದ್ದಂಡಭೂಪ |
ವ್ರಾತಪ್ರೋತ್ತುಂಗಭೂಭೃದ್ವಿದಳನಕುಳಿಶಂ ವಂದಿಸತ್ಕಾಮಧೇನುಂ ||
ಶ್ವೇತಾಂಭೋಜಾತದೇವದ್ವಿರದಸುರನದೀದುಗ್ಧವಾರಾಶಿಚಂದ್ರ |
ದ್ಯೋತಪ್ರಸ್ಪರ್ಧಿ ಭಾಭಾಸುರವಿಶದಯಶಂ ರಾಜಮಾಂಧಾತೃಭೂಪಂ ||888||

### ವಿಷ್ಣುವರ್ಧನ

ಇನಿತಂ ದುರ್ಗಮವೈರಿದುರ್ಗಚಯಮಂ ಕೊಂಡಂ ನಿಜಾಕ್ಷೇಪದಿಂ |
ದಿನಿಬರ್ ಭೂಪರನಾಜಿಯೊಳ್ ತವಿಸಿದಂ ತನ್ನುಗ್ರಬಾಣಾಳಿಯಿಂ ||
ದಿನಿಬರ್ಗಾನತರ್ಗಿತ್ತನುದ್ಧಪದಮಂ ಕಾರುಣ್ಯದಿಂ ವಿಷ್ಣುವೆಂ |
ದನಿತಂ ಲೆಕ್ಕಿಸಿ ನೋೞ್ಪೊಡಬ್ಜಭವನುಂ ವಿಭ್ರಾಂತನಪ್ಪಂ ವಲಂ ||889||

### ನಾರಸಿಂಹ I

ವಿಭವೇಂದ್ರಂ ಬಳವದ್ವಿ ದಂಡಧರನತ್ಯುದ್ವೃತ್ತದೈತ್ಯಾಧಿಪಂ |
ಶುಭರತ್ನಾಗರನಾಯಕಂ ನತಜಗತ್ಪ್ರಾಣಂ ಬುಧಶ್ರೀದನೈ ||
ಶ್ವಭವಂ ತಾನೆನೆ ಲೋಕಪಾಳತೆಯನೇಕಾಯತ್ತಮಂ ಮಾಡಿ ನಿಂ |
ದಭಿರೂಪಂ ಸುತನಾದನಲ್ತೆ ನರಸಿಂಹಕ್ಷೋಣಿಪಾಳೋತ್ತಮಂ ||890||

ಅರಿದೈತ್ಯಾಧಿಪವಕ್ಷಮಂ ಖರನಖಾನೀಕಂಗಳಿಂ ಪೋೞ್ದು ಬ |
ಲ್ಗರುಳಂ ತೋಡಿದ ನಾರಸಿಂಹನೆನಲಕ್ಕುಂ ವೈರಿವೀರಾವನೀ ||
ಶ್ವರವಕ್ಷಸ್ಥಳಮಂ ಸ್ವಖಡ್ಗನಖರವ್ಯಾಘಾತದಿಂ ಪೋೞ್ದು ಬ |
ಲ್ಗರುಳಂ ತೋಡುವ ನಾರಸಿಂಹನೃಪನಂ ಸಂಗ್ರಾಮರಂಗಾಗ್ರದೊಳ್ ||891||

## ಬಲ್ಲಾಳ II

ಕೇಳ ವಸಂತಬಾಳಸಹಕಾರದ ತಣ್ಣೆೞಲಾಶ್ರಿತಾಳಿಗಾ |
ಭೀಳಲಯಾಹಿನಿಷ್ಠುರಘಣಾಘದ ವೆಯ್ನೆೞಲುದ್ಧತಾರಿಗು ||
ನ್ಮೀಳಿತಪುಂಡರೀಕದ ನೆೞಲ್ ಜಯಲಕ್ಷ್ಮಿಗೆನಿಪ್ಪ ವೀರಬ |
ಲ್ಲಾಳನ ತೋಳ ಬಾಳ ನೆೞಲಾದುದು ಧಾತ್ರಿಗೆ ವಜ್ರಪಂಜರಂ ||892||

ಮನುಚಾರಿತ್ರಂ ಚರಿತ್ರಂ ಮನಸಿಜಲಲಿತಾಕಾರಮಾಕಾರಮುಬ್ಜಾ |
ಕ್ಷನ ಮಂತ್ರಂ ಮಂತ್ರಮಿಂದ್ರಾತ್ಮಜನದಟದಟಿಂತೀಶನಾರ್ಪಾರ್ಪು ಭಾಸ್ವಂ ||
ತನ ತೇಜಂ ತೇಜಮಂಭೋಜಜನಱಿವಱಿವಿಂದ್ರಪ್ರಭಾವಂ ಪ್ರಭಾವಂ |
ತನಗಾತ್ಮಾಯತ್ತಮಿಂತೀಜಗದೊಳೆನಿಸಿದಂ ವೀರಬಲ್ಲಾಳದೇವಂ ||893||

## ನರಸಿಂಗನಾಯಕ

ಮುಂದಿದಿರಾಂತನಂತರಿಪುಸೈನಿಕರಂ ಸಿಡಿಲಂತೆ ಸಿಂಗದಂ |
ತಂತಕನಂತೆ ಸಂಗರದೊಳೋವದೆ ಜೀರಗೆಯೊಕ್ಕಲಿಕ್ಕಿ ಸಾ |
ಮಂತಲಲಾಮನೀನೆಗೞ್ದ ತೆಂಕಣರಾಯನೆನಲ್ಕೆನಿಪ್ಪ ಪೆಂ |
ಪಂ ತಳೆದಂ ಪ್ರತಾಪನಿಳಯಂ ಧರೆಯೊಳ್ ನರಸಿಂಗನಾಯಕಂ ||894||

## ನಯಕೀರ್ತಿ

ಪಸಿಯಿಂದಂಬರಮುಬ್ಬದಿಂ ತಿಳಿಗೊಳಂ ನೇತ್ರಂಗಳಿಂದಾನನಂ |
ಪೊಸಮಾಪಿಂ ಬನಮಿಂದ್ರನಿಂ ತ್ರಿದಿವಮಾಶೇಷಂ ಮಣಿವ್ರಾತದಿಂ ||
ದೆಸೆವಂತೀನಯಕೀರ್ತಿದೇವಮುನಿಯಿಂ ರಾದ್ಧಾಂತಚಕ್ರೇಶನಿಂ |
ದೆಸೆಗುಂ ಶ್ರೀಜಿನಧರ್ಮಮೆಂದೊಡೆ ಬಱಿಕ್ಕೇವಣ್ಣಿಪೊಂ ಬಣ್ಣಿಪೊಂ ||895||

## ದಾಮನಂದಿ

ಅಮುದಂ ಪಿತಾಮಹಂ ವೀ | ತಮಲಂ ಮದನಾರಿ ಮೂಕನಾವಿಪತಾಕಂ |
ದಮಿತಾನ್ಯವಾದಿಯೆನೆ ಸಂ | ದ ಮೌನನಿಧಿ ದಾಮನಂದಿಮುನಿಸನ್ನಿಧಿಯೊಳ್ ||896||

## 175 ಬೇಲೂರು 86. 1177

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಹಾಪ್ರಧಾನ ತಂತ್ರಪಾಳ ಹೆಮ್ಮಾಡಿ ಕೂಡಲೂರಲ್ಲಿ ಹರಿಹರದೇವರನ್ನು ಪ್ರತಿಷ್ಠೆಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿಷ್ಣುವರ್ಧನ

ಕುಡದಿರ್ದಗ್ಗದ ದಾನಮಿಲ್ಲವನ ಬಾಣಶ್ರೇಣಿಗುಳ್ಳಿಕ್ಕಿ ಜಿಂ |
ಗುಡದುರ್ವೀಶ್ವರರಿಲ್ಲ ವಿಶ್ರುತಜಯಸ್ತಂಭಂ ಸ್ವನಾಮಾಂಕಿತಂ ||
ನಡದಾಶಾತಟಮಿಲ್ಲ ಕೀರ್ತಿಭರದಿಂದಾನಂದಮಂ ತಾಳ್ದದೊಂ |
ದೆಡೆಯುಂ ಲೋಕದೊಳಿಲ್ಲೆನಲ್ಕೆ ನೆಗಱ್ದಂ ಶ್ರೀವಿಷ್ಣುಭೂಪಾಳಕಂ ||897||

### ನಾರಸಿಂಹ I

ಜವನ ಪೊಸಪುರ್ ಚಂಡಿಕೆಯ ಕಾಯ್ಪು ಪುರಾರಿಯ ಕಣ್ಣ ಕಿಚ್ಚು ಮಾ |
ಧವನ ಗದಾಭಿಘಾತಮಮರೇಂದ್ರನ ವಜ್ರಭವಾನಲಾರ್ಚಿತ ||
ಳ್ತವೊಲೊಗೆತಂದ ದುರ್ಧರತರಪ್ರಬಳಪ್ರಥಿತಪ್ರತಾಪಮಂ |
ಬವರದೊಳೆಯ್ದೆ ಬೀಱುವುದು ಭೂರಿಭುಜಂ ನರಸಿಂಹಭೂಪನಾ ||898||

### ಬಲ್ಲಾಳ II

ಎಳೆವೆಣ್ಣಾಧವಳಾತಪತ್ರದ ನೆೞಲ್ ಸಂಪ್ರೀತಿಯೊಳ್ ಕೂಡೆ ಕ |
ಜ್ಜಳಮಂ ಕೂರಸಿ ವೈರಿಕಾಂತೆಯರ ಕಣ್ಣಿಂ ದೂರದೀಡಾಡೆ ಚಾ ||
ಪಳಮಂ ಗೋಮಿನಿ ಬಿಟ್ಟು ಪೇರುರದೊಳೆಂದುಂ ಲೀಲೆಯಿಂದಾಡೆ ದಿ |
ಗ್ವಳಯಾರೂಢಭುಜಪ್ರತಾಪನೆಸೆವಂ ಬಲ್ಲಾಳಭೂಪಾಳಕಂ ||899||

ತ್ರಿದಶೇಭೇಂದ್ರದ ಬಲ್ಪನಿಂಗಡಲ ಗುಣ್ಪಂ ಪಾರ್ವತೀಸೂತಿಶೈ |
ಲದ ಧೈರ್ಯೋನ್ನತಿಯಂ ಸುಧಾಂಶುವ ಕಲಾಸಂಪತ್ತಿಯಂ ಶಂಕರಾಂ ||
ಗದ ವಿಶ್ವಸ್ತವನೀಯವೃತ್ತಿಯನಿಳಾಲೋಕಕ್ಕೆ ತನ್ನಿಂದೆ ಮಾ |
ಱ್ಪದದೆಂದುಂ ಮಹನೀಯಕೀರ್ತಿವಿಭವಂ ಬಲ್ಲಾಳಭೂಪಾಳನಾ ||900||

ಸದಯಾಂತಃಕರಣಂ ರಣಪ್ರಣಯಿ ವೀರಾಗ್ರೇಸರಂ ಪಾಪಭೀ |
ರು ದಿನಾಧೀಶಲಸತ್ಪ್ರತಾಪನವನೀತಾಪಾಪಹಂ ಕಾಮಸ ||
ಮ್ಮದರೂಪಂ ಪರಕಾಮಿನೀವಿಷಯನಿಷ್ಕಾಮಂ ಮಿಳದ್ಭಾವನಾ |
ಸ್ಪದನೆಂದುಂ ಗುಣವೃದ್ಧನದ್ಭುತಗುಣಂ ಬಲ್ಲಾಳಭೂಪಾಳಕಂ ||901||

ಪದುಳಂ ಪಾಳಿಪನೆಳೆಯಂ । ವಿದಿತಗುಣಂ ಸಕಳಜಳಧಿಜಳಮೇಖಳೆಯಂ ।
ಮದವದರಿಕರಟಿಸಂಕುಳ । ಬಿದುವಿದಳನಭೀಮಬಾಹು ಬಲ್ಲಾಳನೃಪಂ ||902||

ತಂತ್ರಪಾಳ ಹೆಮ್ಮಾಡಿ

ಶ್ರುತಶೀಲಂ ಭುವನಾಶ್ರಯಂ ಪರಿಜಯಾವಜ್ಞಾನದೂರಂ ಬುಧ ।
ಸ್ತುತಭಾವಂ ವಿನುತಾನವದ್ಯವಿಭವಂ ಸಾಮಾದ್ಯುಪಾಯಪ್ರಗ ||
ಲ್ಭತರಾಭ್ಯುನ್ನತಿ ತಂತ್ರಪಾಳನೆಳೆಯೊಳ್ ಪೆರ್ಮಾಡಿ ತಾಂ ತಾಳ್ದಿದಂ ।
ಮತಿಯಂ ಮೈಮೆಯನೊಳ್ಪನಾಚರಣಮಂ ಸಂಪ್ರೀತಿಯಂ ನೀತಿಯಂ ||903||

ಅಱಿತದ ಮಾತು ನಾಲಗೆಯ ಬಡ್ಡಿಗೆ ಬಾರದ ದೀನಮಾನಸರ್ ।
ಮಱುವುಗೆ ಕಾವ ಮಾತು ಮನದೊಳ್ ಪೊಱಪೊಣ್ಮದ ಮಾನಸಿಕ್ಕೆಯಂ ||
ನೆಱಪುವ ಮಾತು ನೀತಿನಿಲಯಕ್ಕೊಳಸಲ್ಲದಮಾತ್ಯವೃತ್ತಿಯಂ ।
ಜಱಿವುದು ತಂತ್ರಪಾಳಕಶಿಖಾಮಣಿ ಪೆರ್ಮನ ಕೀರ್ತಿಡಿಂಡಿಮಂ ||904||

---

## 176 ಚೆನ್ನರಾಯಪಟ್ಟಣ 209. 1178

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಸೂಜಿಯ ಮಾದೆಯ ನಾಯಕನು ಬಳ್ಳಿಗಟ್ಟದಲ್ಲಿ ಕುಸುಮೇಶ್ವರದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಹೊಯ್ಸಳವಂಶ

ಶ್ರೀನಾರೀಜನ್ಮಗೇಹಂ ಭುವನವಿನುತಮುದ್ದಾಮಸತ್ವಪ್ರಯುಕ್ತಂ ।
ನಾನಾರತ್ನಪ್ರಕೀರ್ಣಂ ಪರಿಮಿಳಿತವರಾನಂತಭೋಗಪ್ರಯೋಗ ||
ಸ್ಥಾನಂ ವಾರಾಶಿಯೆಂತಂತಿರೆ ಗಡ ಧರೆಯೊಳ್ ರಾಜಕಾಂತಿಪ್ರವೃದ್ಧಂ ।
ತಾನಾಗುತ್ತಿರ್ಪುದೇಂ ಕೌತುಕಮೆ ಸತತಮೀಪೊಯ್ಸಳೋರ್ವೀಶವಂಶಂ ||905||

ಬಲ್ಲಾಳ II

ನೆಱೆ ಮೂಲೋಕಮುಮೆಯ್ದದೆಯ್ದೆ ಬಳಸಲ್ ಪಕ್ಷೀಶನುಂ ಲಂಘಿಸಲ್ ।
ನೆಱೆಯಂ ಕೂಟತಟಕ್ಕೆ ನಿಪ್ಪತುಳಭಾಸ್ವದ್ದುರ್ಗಮಂ ಪಾಂಡ್ಯನ ||
ಱ್ಕಱೆನುಚ್ಚಂಗಿಯ ಬೆಟ್ಟನಶ್ರಮದಿನಾಟಂದಣ್ಣೆ ಕಲ್ಲಾಡಿದಂ ।
ತಿಱಿಕಲ್ಲಾಡಿದನೇನತಿಪ್ರಬಳನೋ ಬಲ್ಲಾಳಭೂವಲ್ಲಭಂ ||906||

### ಸೂಜಿಯ ಸೋಮ

ತೊಡರ್ವರ ಮಾರಿ ಮೀಱುವರ ಮಿೞ್ತುಱದಿರ್ಪರ ಬಮ್ಮರಕ್ಕಸಂ |
ಪೊಡರ್ವವರಂತಕಂ ಮಲೆದು ಸೈರಿಸದಿರ್ಪರ ಶೂಲಮೆಂಬ ಜೆ ||
ಲ್ವೊಡರಿಸುವಂಕಮಾಲೆಗಳೊಳೊಂದಿರೆ ದಿಗ್ವನಿತಾಳಿಯಱ್ಕಱಿಂ |
ಗಡಣದೆ ಪಾಡುಗುಂ ನೆಗೞ್ದ ಸೂಜಿಯ ಸೋಮನನಾಜಿಭೀಮನಂ ||907||

### ಸೂಜಿಯ ಮಾದ

ಸೇಣಿಗೆ ಮಲೆವರ ಗಂಡಂ | ಸೇಣಿಯನುಱದುಂತೆ ಪಿಂತೆ ಪಱಿವರ ಗಂಡಂ |
ಸೇಣಿಗೆ ಕೂರ್ಪರ ನಂಟಂ | ಸೇಣಿಗೆ ಸನ್ನಾಹನಲ್ತೆ ನಾಯಕಮಾದಂ ||908||

### ಕುಸುಮೇಶ್ವರದೇವಸ್ಥಾನ

ವಸುಧಾದೇವಿಯ ಮಕುಟಮೊ | ಪೊಸತೊಂದಿಂದ್ರನ ವಿಮಾನಮಿೞಿದುದೊ ದಿವದಿಂ |
ವಸುಮತಿಗೆಂದೆನೆ ಪಿರಿದುಂ | ಕುಸುಮೇಶ್ವರದೇವತಾಲಯಂ ಕಣ್ಗೆಸೆಗುಂ ||908||

---

## 177 ಷಿಕಾರಿಪುರ 96. 1179

**ಇದರಲ್ಲಿ ಕಳಚುರ್ಯರಾಜನಾದ ಸಂಕಮದೇವನು ಬಳ್ಳಿಗಾವೆಯ ಕೇದಾರೇಶ್ವರದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.**

### ಸಂಕಮದೇವ

ಗೌಳಗಜಂ ತುರುಷ್ಕತುರಗಂ ವರಸಿಂಹಳನಾಥಮೌಕ್ತಿಕಂ |
ಚೋಳಸುಧಾಂಬರಂ ಮಗಧಕತ್ತುರಿಯಿಂ ಮಳಯೇಶಚಂದನಂ ||
ಲಾಳನ ಬಾಳಕಂ ನೆಱೆಯೆವೆಂದು ಚರರ್ ಸಲೆ ಬಿನ್ನಪಂಗಳಂ |
ಕೇಳಿಸುತಿರ್ಪರೋಲಗದೊಳಂ ವಿಭುಸಂಕಮದೇವಭೂಪನಾ ||910||

### ತೈಲಪದೇವ

ಕದನಕ್ಕುಗ್ರಾರಿಯಣ್ಮಲ್ ತ್ರಿದಶಭುವನಮಂ ಪ್ರೀತಿಯಿಂ ಬಂದು ಕಾಣ್ಬಂ |
ಗೊದವಿರ್ದೈಶ್ವರ್ಯಮಂ ಭೀತರಿಗಸುಗತಿಯಂ ಮಾೞ್ಪನೇ ನೋೞ್ಪೆವೆಂದಂ ||
ಗಿದೆ ದಲ್ ಮಾೞ್ಪಂ ಕಱುತ್ತೈಕ್ಕಲನೃಪತನಯಂ ತೈಲಪಕ್ಷೋಣಿಪಾಲಂ |
ಮದದಿಂದಂ ಪ್ರೀತಿಯಿಂದಂ ಹೃದಯದ ಕೃಪೆಯಿಂ ನಾಡು ಮೆಚ್ಚಲ್ಕೆ ನಿಚ್ಚಂ||911||

### ಎಱಹರಸ

ಘುರದೊಳಗೋಡಿದ ರಿಪುನೃಪ । ರರಸಿಯರ ಕಟಾಕ್ಷರುಚಿಯನೀಕ್ಷಿಪರಿನ್ನುಂ ।
ಧರೆಯೊಳಗೆಱಹರಸನ ಪೊಸ । ಕರವಾಳಿನ ಬೆಳಗೆ ಪೊಳೆಯಿತೆಂಬತಿಭಯದಿಂ ॥912॥

---

## 178 ನಾಗಮಂಗಲ 15. 1179

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಸಾಮಂತ ದುಮ್ಮೆಯನಾಯಕನು
ಜೆಟ್ಟಿಗದಲ್ಲಿ ಹೇಮೇಶ್ವರದೇವಾಲಯವನ್ನು ಕಟ್ಟಿಸಿ
ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿನಯಾದಿತ್ಯ

ವಿನಯಂ ಬುಧರಂ ರಂಜಿಸೆ । ಘನತೇಜಂ ವೈರಿಬಳಮನಳಱಿಸೆ ನೆಗೞ್ದಂ ।
ವಿನಯಾದಿತ್ಯನೃಪಾಳಕ । ನನುಗತನಾಮಾರ್ಥನಮಳಕೀರ್ತಿಸಮರ್ಥಂ ॥913॥

### ನಾರಸಿಂಹ I

ಅವರ್ಗೆ [1] ಮನೋಜನಂತೆ ಸುದತೀಜನಚಿತ್ತಮನಿೞ್ಕೊಳಲ್ಕೆ ಸಾ ।
ಲ್ಪವಯವಶೋಭೆಯಿಂದತನುವೆಂಬಭಿಧಾನಮನಾನದಂಗನಾ ॥
ನಿವಹಮನೆಚ್ಚು ಮುಯ್ವನಣಮಾನದೆ ಬೀರರನೆಚ್ಚು ಯುದ್ಧದೊಳ್ ।
ತವಿಸುವನಾದನಾತ್ಮಭವನಪ್ರತಿಮಂ ನರಸಿಂಹಭೂಭುಜಂ ॥914॥

ಪಡೆಮಾತೇಂ ಬಂದು ಕಂಡಂಗವ್ಯತಜಳಧಿ ತಾಂ ಗರ್ವದಿಂ ಗಂಡವಾತಂ ।
ನುಡಿವಾತಂಗೇನನೆಂಬೈ ಪ್ರಳಯಸಮಯದೊಳ್ ಮೇರೆಯಂ ಮೀಱಿ ಬರ್ಪಾ ॥
ಕಡಲನ್ನಂ ಕಾಳನನ್ನಂ ಮುಳಿದ ಕುಳಿಕನನ್ನಂ ಯುಗಾಂತಾಗ್ನಿಯನ್ನಂ ।
ಸಿಡಿಲನ್ನಂ ಸಿಂಗದನ್ನಂ ಪುರಹರನುರಿಗಣ್ಣನ್ನನೀನಾರಸಿಂಹಂ ॥915॥

ರಿಪುಸರ್ಪದರ್ಪದಾವಾನಳಬಹಳಶಿಖಾಜಾಳಕಾಳಾಂಬುವಾಹಂ ।
ರಿಪುಭೂಪೋದ್ಯತ್ಪ್ರದೀಪಪ್ರಕರಪಟುತರಸ್ಫಾರಝಂಝಾಸಮೀರಂ ॥
ರಿಪುನಾಗಾನೀಕತಾರ್ಕ್ಷ್ಯಂ ರಿಪುನೃಪನಳಿನೀಷಂಡವೇತಂಡರೂಪಂ ।
ರಿಪುಭೂಭೃದ್ಭೂರಿವಜ್ರಂ ರಿಪುನೃಪಮದಮಾತಂಗಸಿಂಹಂ ನೃಸಿಂಹಂ ॥916॥

### ಬಲ್ಲಾಳ II

ಗತಲೀಳಂ ಲಾಳನಾಳಂಪಿಟಬಹಳಭಯೋಗ್ರಜ್ವರಂ ಘೂರ್ಜರಂ ಸಂ ।
ದ್ಧೃತಶೂಲಂ ಗೌಳನುಚ್ಚೈಃಕರಧೃತವಿಲಸತ್ಪಲ್ಲವಂ ಪಲ್ಲವಂ ಜೂ ॥

---

1. ವಿಷ್ಣುವರ್ಧನ ಲಕ್ಷ್ಮೀದೇವಿಯರಿಗೆ.

ರ್ಣಿತಚೋಳಂ ಜೋಱಿನಾದಂ ಕದನವದನದೊಳ್ ಭೇರಿಯಂ ಪೊಯ್ಸೆ ವೀರಾ |
ಹಿತಭೂಭೃಜ್ಜಾಳಕಾಳಾನಳನತುಳಬಳಂ ವೀರಬಲ್ಲಾಳದೇವಂ ||917||

---

## 179 ದಾವಣಗೆರೆ 44. ಸು. 1180

ಇದರಲ್ಲಿ ಕಳಚುರ್ಯರಾಜನಾದ ಸಂಕಮದೇವನ ಆಳಿಕೆಯಲ್ಲಿ ಮಾದೇವದಂಡನಾಯಕನು ಹರಿಹರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಸಮುದ್ರ

ಪರಿಧಾವನ್ಮತ್ಸ್ಯಪುಚ್ಛಾಹತಮಕರಕರಾಸ್ಫಾಳನಾಘೀಳನಕ್ರ |
ಸ್ಫುರಿತೋದ್ಯಚ್ಛಿಂಶುಮಾರಕ್ರಮಣಸಮುದಿತೋಚ್ಚಂಡವಾತಾಭಿಘಾತೋ ||
ದ್ಧುರವೀಚೀಶೀಕರೌಘಸ್ಥಗಿತನಿಖಿಳದಿಙ್ಮಂಡಳಂ ರಂಜಿಕುಂ ಭಾ |
ಸುರಜಂಬೂದ್ವೀಪವೇಳಾವಳಯಿತಬಹುಳಧ್ವಾನರೌದ್ರಂ ಸಮುದ್ರಂ ||918||

### ಮಂದರ

ಸುರವಿದ್ಯಾಧರದಂಪತಿಪ್ರಕರದಿಂ ಚಂದ್ರಾರ್ಕತಾರಾಗಣೋ |
ತ್ಕರಶೋಭಾಂಚಿತಮೇಖಳಾವಳಯದಿಂ ಸತ್ಕಾಂಚನೋದ್ದೀಪ್ತಿಬಂ ||
ಧುರಗೋತ್ರಾಚಳದುನ್ನತಪ್ರತಿಭೆಯಿಂ ಕಳ್ಪಾಂಘ್ರಿಪಾರಾಮವಿ |
ಸ್ತರದಿಂ ರಂಜಿಪುದುಜ್ಜ್ವಳೋರ್ಜಿತಯಶಶ್ರೀಸುಂದರಂ ಮಂದರಂ ||919||

### ಬಿಜ್ಜಳ

ಧರೆಯಂ ವಾರಿಧಿಮೇಖಳೋಲ್ಲಸಿತೆಯಂ ಲೀಲಾಲತಾಪಲ್ಲವಾ |
ಧರೆಯಂ ವಿಸ್ತೃತಪೀನವೃತ್ತಕಠಿನಪ್ರೋತ್ತುಂಗಭೂಭೃತ್ಸ್ತನೋ ||
ಧರೆಯಂ ಬಂಧುರನಂದನಾಳಿವಿಳಸತ್ಪೂಗಪ್ರಕಾಂಡೋದ್ಧಕಂ |
ಧರೆಯಂ ದೋರ್ಬಳಚಕ್ರವರ್ತಿ ತಳೆದಂ ಶ್ರೀಬಿಜ್ಜಳೋರ್ವೀಶ್ವರಂ ||920||

### ಮೈಳುಗಿದೇವ

ಶೋಲಭುಜಾಸಿಘಾತಗಳಿತಾಹಿತಗಂಧಗಜೇಂದ್ರಕುಂಭಮು |
ಕ್ತಾಳಿಯನಂದು ನೀಳನವನೀರದಪಾಂಕಣರಾಜಿಗೆತ್ತು ಸ ||
ಲ್ಲೀಲೆಯನಾಂತು ಕರ್ಚಿ ನಲಿವುದ್ಧತಚಾತಕಸಂಘದಿಂದದಾ |
ಭೀಳಮೆನಿಪ್ಪುದಚ್ಚರಿಯೆ ಮೈಳುಗಿದೇವನುದಗ್ರವಿಕ್ರಮಂ ||921||

**ಸಂಕಮದೇವ**

ವಾರಿಧಿಯಂತಗಾಧಮಹಿಮಾಸ್ಪದನುಂ ಬಹುರತ್ನಶೋಭಿಯುಂ ।
ಮೇರುಗಿರೀಂದ್ರದಂತೆ ಕನಕಾನ್ವಿತನುಂ ವಿಬುಧೈಕಸೇವ್ಯನುಂ ॥
ವಾರಿಜನಾಭನಂತತುಳವಿಕ್ರಮನುಂ ಕಮಳಾಕ್ಷನೆಂಬುದೀ ।
ಧಾರಿಣಿ ಸಂಕಮಾಂಕನರಪಾಲನನೂರ್ಜಿತಪುಣ್ಯಶೀಲನಂ ॥922॥

**ಕಾವಣದಂಡನಾಥ**

ರಿಪುನಗರಂ ಕರಂ ವಿಜನಮಾಗಿಯುಮರ್ಜುನರಾಜಿರಾಜಿತಂ ।
ವಿಪುಳಶಶಾಂಕವಂಶಕನಕಾಂಚಿತಮಂತದೆ ವಿಭ್ರಮಾನ್ವಿತಂ ॥
ಚಪಳಭುಜಂಗಭೀಮನಕುಳಾಶ್ರಯಮುದ್ಗತಪುಂಡರೀಕಮಿಂ ।
ತುಪಮೆಗೆ ಚಿತ್ರಮಾಯ್ತೆನಿಪುದೀವಿಭುಕಾವಣದಂಡನಾಥನಾ ॥923॥

**ಕಾವಣನ ಹೆಂಡತಿ ಕಾಳಲದೇವಿ**

ರತಿಯೆಂತಂತೆ ವಿಳಾಸದಿಂ ವಿಭವದಿಂ ಮಾದೇವಿಯೆಂತಂತರುಂ ।
ಧತಿಯೆಂತಂತೆ ಪತಿವ್ರತಪ್ರಭುತೆಯಿಂ ಚಾತುರ್ಯದಿಂ ಭಾರತೀ ॥
ಸತಿಯೆಂತಂತೆ ನೆಗೞ್ತೆವೆತ್ತು ಮೆಱೆವಳ್ ಚಾರಿತ್ರದಿಂ ಭಾಗ್ಯದು ।
ನ್ನತಿಯಿಂ ಕಾಳಲದೇವಿ ಕಾವಣಚಮೂನಾಥಂಗೆ ಸದ್ಪ್ರೀತಿಯಿಂ ॥924॥

**ಕಾವಣನ ಹೆಂಡತಿ ಮಾಳಲದೇವಿ**

ಕುರುಳಿಂ ತುಂಬಿಯ ಬಂಬಲಂ ಸರಸಿಜಶ್ರೀಲೀಲೆಯಂ ವಕ್ತ್ರದಿಂ ।
ದರಹಾಸದ್ಯುತಿಯಿಂದಮಿಂದುರುಚಿಯಂ ಕೀೞ್ಮಾಡುತುಂ ವಿಭ್ರಮೋ ॥
ತ್ಕರದಿಂ ಕಾವಣದಂಡನಾಥವಿಪುಳಶ್ರೀವಕ್ಷದೊಳ್ ಲಕ್ಷ್ಮಿವಿ ।
ಸ್ತರಮಂ ಮಾಳಲದೇವಿ ತಾನೆ ಪಡೆದಳ್ ಸೌಭಾಗ್ಯದಿಂ ಭಾಗ್ಯದಿಂ ॥925॥

**ತೇಜಚಮೂಪತಿ**

ಸೆಡೆದರಡಂಗಿದರ್ ಮುಡಿದರೋಡಿದರೞ್ಗಿದರಳ್ಕಿ ಬಳ್ಕಿದರ್ ।
ಮಿಡುಕದೆ ಬಿೞ್ದಿರುಳ್ದರೆದೆಗುಂದಿದರುಟ್ಟುದನಿಕ್ಕಿ ಕೆಯ್ದುವಂ ॥
ಬಿಡಲನುಗೆಯ್ದರೆಂದರಿನೃಪಾಳಕರಂ ಪೊಡೆ ಸಂಗರಾಗ್ರದೊಳ್ ।
ತೊಡರ್ದಪರಾರುದಾತ್ತಕಲಿತೇಜಚಮೂಪನೊಳುಗ್ರಕೋಪನೊಳ್ ॥926॥

**ಬನವಾಸೆ ನಾಡು**

ವನರುಹಷಂಡದಿಂ ಬೆಳೆದ ಶಾಳಿವನಂಗಳಿನುರ್ವಿ ಪಣ್ತ ಕ ।
ರ್ಬಿನ ಘನಪಾಳಿಯಿಂ ವಿಪುಳನಾಗಲತಾವೃತಪೂಗಪೂಗದಿಂ ॥

ಘನಸಹಕಾರಸತ್ಫಳಭರಾನತನಂದನರಾಜಿಯಿಂ ಕರಂ |
ಬನವಸೆನಾಡು ರಯ್ಯಮೆನಲೊಪ್ಪುವುದೀವಿಷಯಾಂತರಾಳದೊಳ್ ||927||

---

## 180 ಚಿಕ್ಕಮಂಗಳೂರು 77. 1180

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನು ಖಾಂಡೆಯದ ಮಾರ್ಕಂಡೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಎರೆಯಂಗ

ತದಪತ್ಯನಹಿತಮಹಿಭೃ | ನ್ಮದವತ್ಕರಿನಿಕರಕರಟನಿಕಟೋತ್ಕಟದಾ |
ನದಮಿತಕರಾಳನಖಮುಖ | ನುದಾರವಿಕ್ರಾಂತಸಿಂಹನಿವನೆಱೆಯಂಗಂ ||928||

### ನಾರಸಿಂಹ I

ಅನತರಿಪುವರ್ಗದುರ್ಗಂ | ತನಗೆ ವಿಹಾರಸ್ಥಳಂ ದ್ವಿಷದ್ದ್ವಿರದಘಟಾ |
..ವಧದ ಕೇಳಿಗಂ ಗೊ | ತ್ತೆನೆ ನೆಗೞ್ದಂ ಸಿಂಹದಂತೆ ನರಸಿಂಹನೃಪಂ ||929||

### ಬಲ್ಲಾಳ II

ಬಿಲ್ಲೊಳ್ ಮುನ್ನಂ ಪಿನಾಕಾಯುಧನೆ ಸಕಲಚಕ್ರಾಯುಧಂ ಜಾಮದಗ್ನ್ಯಂ |
ಬಲ್ಲಂ ರಾಮಂ ನದೀಜಂ ಕಲಶಜನಿನಜಂ ಬಲ್ಲನಿಂದ್ರಾತ್ಮಜಾತಂ ||
ಬಲ್ಲಂ ಕೇಳಿಂದು ಬಲ್ಲಾಳನೆ ಕಲಿಗಳ ದೇವಂ ಜಗಂ ಮೆಚ್ಚೆ ಬಿಲ್ಲೊಳ್ |
ಒಲ್ಲಂ ಮತ್ತಿಲ್ಲ ಬಿಲ್ಲರ್ ಬಿರುದರಿದೆ ಪಿಂ ಡಂಗುರಂ ಧಾತ್ರಿಗೆಲ್ಲಂ ||930||

---

## 181 ಚಿಕ್ಕನಾಯಕನಹಳ್ಳಿ 35. ಸು. 1180

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಮಂಡಳಿಕ ಬಲ್ಲರಸನು ಭೀಮೇಶ್ವರದೇವರಿಗೆ ಭೀಮಸಮುದ್ರವನ್ನು ಬಿಟ್ಟಂತೆ ಹೇಳಿದೆ.**

### ಸಾಮಂತಬಿಟ್ಟಿಗನ ತಾಯಿ ಶಾಂತಲೆ

ನುಡಿದೊಡೆ ಮಂದರಾಚಲದೊಳಬ್ಜಭವಂ ಬರೆದಕ್ಕರಕ್ಕಮಿ |
ರ್ಮಡಿ ನಿನಗೀವೆನೆಂದೊಡೆ ಭವಂ ಕುಡಲಿತ್ತ ಬರಕ್ಕದಂತು ನಾ ||
ಲ್ವಡಿ ಶರಣಾರ್ಥಿಗಂಜದಿರಿಮೆಂದೊಡೆ ವಜ್ರದ ಕೋಟೆಗಂ ಪದಿ |
ರ್ಮಡಿಯೆನೆ ಕಾಂತೆ ಶಾಂತಲೆ ಜಸಂಬಡೆದಿರ್ದಳಿಳಾತಳಾಗ್ರದೊಳ್ ||931||

### ಸಾಮಂತಬಿಟ್ಟಿಗ

ಒಟ್ಟಜೆಯುಂ ನುಡಿವಹಿತರ । ನಿಟ್ಟೆಲ್ವಂ ಮುಱಿದು ತೀದು ಜಟ್ಟನ ಪುತ್ರಂ ।
ಕಟ್ಟಾಯದ ಕಣೆಗಹಿತಘು । ರಟ್ಟಂ ಸಾಮಂತಬಿಟ್ಟಿಗಂ ಬೊಟ್ಟಿಡುವಂ ||932||

### ಬಲ್ಲರಸ

ಕಡುಗಲಿ ಬಲ್ಲಂ ಧುರದೊಳ್ । ತೊಡರ್ದಂಗಾಕೃಷ್ಣನನ್ನನೀಶ್ವರನನ್ನಂ ।
ಸಿಡಿಲನ್ನಂ ಕಲ್ಪಾಂತದ । ಕಡಲನ್ನಂ ಭೀಮನನ್ನನರ್ಜುನನನ್ನಂ ||933||

---

## 182 ತಿರುಮುಕೂಡಲು ನರಸೀಪುರ 106. 1180

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನು ತಿರುಮುಕೂಡಲ ಅಗಸ್ತ್ಯೇಶ್ವರ ದೇವರಿಗೆ ತುಂಬಲಗ್ರಾಮವನ್ನು ಬಿಟ್ಟಂತೆ ಹೇಳಿದೆ.

### ಹೊಯ್ಸಳವಂಶ

ಸಳನೆಂಬಂ ಜಿನಮುನಿ ಹೊಯ್।ಸಳೆಯಿಂದಂ ಪುಲಿಯನೆಂದೊಡೇಗೊಂಡುಮಹೀ।
ತಳವಾನೆನೆ ಪೊಯ್ಯಲ್ ಪೊ । ಯ್ಸಳವೆಸರಂ ತಾಳ್ದುದಿತ್ತ ಯಾದವವಂಶಂ ||934||

### ನಾರಸಿಂಹ I

ತತ್ತನಯಂ ಯಾದವವಂ । ಶೋತ್ತಮನವದಾತಕೀರ್ತಿ ಸಾಹಸಧನನು ।
ದ್ವೃತ್ತವಿರೋಧಿನೃಪಾಳಕ । ಮತ್ತದ್ವಿಪಸಿಂಹನೆನಿಸಿದಂ ನರಸಿಂಹಂ ||935||

---

## 183 ಚೆನ್ನರಾಯಪಟ್ಟಣ 220. ಸು. 1180

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಸಂಧಿವಿಗ್ರಹಿ ನಾರಾಯಣನು ಶಿವಪುರದ ರಂಗನಾಥದೇವಾಲಯವನ್ನು ಜೀರ್ಣೋದ್ಧಾರಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ನಾರಸಿಂಹ I

ತತ್ತನಯಂ ರಿಪುಭೂಭೃ । ನ್ಮತ್ತದ್ವಿರದನಘಟಾವಿಪಾಟನಪಟುಲೀ ।
ಲೋತ್ತಮಕರಾಸಿನಖರನು । ದಾತ್ತಬಳಪ್ರಥಿತಸಿಂಹನಾನರಸಿಂಹಂ ||936||

ನಾರಾಯಣ

ಶ್ರೀಯುದಯಂ ಪ್ರಭಾವದೆಸಕಂ ಪ್ರಭುಶಕ್ತಿಯಳುರ್ಕೆ ನಿಶ್ಚಳೋ |
ಪಾಯದ ಮೈಮೆ ವಾಗ್ವಿಭವದುನ್ನತಿ ಧರ್ಮದ ಪೆರ್ಮೆ ಶೀಲದ ||
ತ್ಯಾಯತಿ ಕೂಡೆ ನೇರ್ಪುವಡೆದೊಳ್ಪೊಡವೆಂಬಿನವೊಪ್ಪೆ ಮಂತ್ರಿನಾ !
ರಾಯಣನೊಪ್ಪುವಂ ವಿನಯಭೂಷಣನೂರ್ಜಿತಕೀರ್ತಿವಲ್ಲಭಂ ||937||

---

## 184 ಶ್ರವಣಬೆಳ್ಗೊಳ 71. ಸು. 1180

ಈ ಅಸಮಗ್ರಶಾಸನದಲ್ಲಿ ಕೆಲವರು ಜೈನಗುರುಗಳ ಸ್ತುತಿಯಿದೆ.

ವರ್ಧಮಾನಮುನಿ

ಸುರನದಿಯ ತಾರಹಾರದ | ಸುರದಂತಿಯ ರಜತಗಿರಿಯ ಚಂದ್ರನ ಬೆಳ್ಪಿಂ |
ಪಿರಿದು ವರವರ್ಧಮಾನರ| ಪರಮತಪೋಧನರ ಕೀರ್ತಿ ಮೂಱುಂ ಜಗದೊಳ್||938|| [1]

---

## 185 ಷಿಕಾರಿಪುರ 197. 1181

ಇದರಲ್ಲಿ ಕಳಚುರ್ಯರಾಜನಾದ ಆಹವಮಲ್ಲನ ಆಳಿಕೆಯಲ್ಲಿ ಸಾಮಂತ ಶಂಕರನು ಮಾಗುಂಡಿಯಲ್ಲಿ ಮಾಡಿಸಿದ ರತ್ನತ್ರಯಬಸದಿಗೆ ವಸುಧೈಕಬಾಂಧವ ರೇಚರಸನು ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಜಂಬೂದ್ವೀಪ

ವಾರ್ವಳಯನಿಕರಮೆಂಬಾ | ನೀರ್ವೇಲಿಯ ನಡುವೆ ನೆಱೆದು ಜಂಬೂಚಿಹ್ನಂ |
ಸಾರ್ವಿನಮೀಪ್ಸಿತಫಳಮಂ | ಪಾರ್ವಿನಮೆಳೆಗಿಂಬಿದಾಯ್ತು ಜಂಬೂದ್ವೀಪಂ ||339||

ಚಾಳುಕ್ಯರು

ಕ್ರಮದಿಂ ವಿಕ್ರಮದಿಂ ದಾ|ನಮನೋಹರವೃತ್ತಿಯಿಂ ಚಳುಕ್ಯನೃಪಾಳೋ !
ತ್ತಮರಾತ್ಮಕೀರ್ತಿಯಾಭೂ|ರಮಣಿಗೆ ಮುತ್ತುಗಳ ತೊಡವೆನಲ್ ಪ್ರಿಯರಾದರ್ ||

ಬಿಜ್ಜಳ

ಅಸಿಲತೆ ಕೂಡೆ ಗಂಡುಮಗುಱಿತ್ತಹಿತಾವನಿಪಾಳಭೂಮಿ ಪೆ |
ಣ್ಮಸಗಿದುದಂಚದಾಂತವರೊಳಾಸುರಕಾಂತೆಯಗರ್ಭಂತ ಬೇಟಮು ||
ಬ್ಬಸಮೆನಿಸಿತ್ತು ಕಾದಿದೆಡೆ ನೆತ್ತರ ಜೌಗಿನೆ ಕೇಸೋಱಂತೆಯುಂ |
ಪಸರಿಸಿತೆಂದು ಬಂದು ಶರಣೆಂಬುದು ಬಿಜ್ಜಳನಂ ದ್ವಿಷಜ್ಜನಂ ||941||

---

1. ಪಂಪರಾಮಾಯಣ, I, 15

ಬಳೆದಂತಾಬಿಜ್ಜಳಂಗೇನದಟಿಸೆದುದೊ ಪೇೞ್ ಸಿಂಹಳಾಧೀಶ್ವರಂ ಬೆ |
ತ್ತಳಿಗಂ ನೇಪಾಳಕಂ ಘಟ್ಟಿವಳನಡಪದಾಳ್ ಕೇರಳಂ ಗುರ್ಜರಂ ಕ ||
ಮ್ಮಳಿಗಂ ಮತ್ತಾತುರುಷ್ಕಂ ಕುದುರೆವೆಸದವಂ ಲಾಳನಾದಚ್ಚುಳಾಯ್ತಂ |
ಹೆಳೆಯಂ ಪಾಂಡ್ಯಂ ಕಳಿಂಗಂ ಕರಿಪರಿಚರನಾಗಾಳ್ವೆಸಂಗೆಯ್ಯೆ ನಿಚ್ಚಂ ||942||

**ರಾಯಮುರಾರಿ ಸೋಯಿದೇವ**

ಕ್ರಮದಿಂ ಕರ್ಣಾಟಮಂ ಕುಂತಳಮನೊಲವಿನಿಂ ತಿಳ್ದಿ ತೞ್ಕೈಸಿ ರಮ್ಯಾಂ |
ಗಮನಿಂಬಿಂ ಬಿಂಬಿಪೊಳ್ಪಂ ಪಡೆದು ಪೃಥುಲಲಾಟಕ್ಕೆ ಕಾಂಚೀಪ್ರದೇಶ ||
ಕ್ಕೆ ಮನಂಬೆತ್ತೆಯ್ದೆ ರಾಗಂಬುದಿದ ಕರಸರೋಜಾತಮಂ ನೀಡಿಯಾರಾ |
ಯಮುರಾರಿಕ್ಷೋಣಿಪಂ ಮೇದಿನಿಯನಿನಿಸುವಂದೇಕಭೋಗ್ಯಕ್ಕೆ ತಂದಂ ||943||

**ಸಂಕಮ**

ಸಂಕನ ಕೀರ್ತಿಪ್ರಭೆಯಿಂ | ದಂ ಕಾಮಿನಿ ಭೂಮಿ ಗೌರರುಚಿಯಿಂದೆಸೆದೇಂ |
ಶಂಕಿನಿಯಾದಳೊ ಗೀತಾ | ಲಂಕೃತನಾನಾವಿನೋದವಿಳಸಿತಗತಿಯಿಂ ||944||

**ರೇಚರಸ**

ಕಳುಚುರ್ಯಕ್ಷ್ಮಿತಿಪಾಳರಾಜ್ಯಲತೆ ಪರ್ವಲ್ ತನ್ನ ದೋಶ್ಶಾಖೆಯಂ |
ವಿಳಸನ್ಮಂದರಸಾನುಗಂ ವಿಬುಧಸೇವ್ಯಂ ವಿಸ್ತೃತಚ್ಛಾಯನ ||
ಸ್ಖಳಿತೌದಾರ್ಯವಿಳಾಸಭಾಸಿ ಸುಮನಸ್ಸಂಪೂರ್ಣನುದ್ಯದ್ಯಶಃ |
ಫಳದಿಂ ರೇಚಣದಂಡನಾಥನೆಸೆದಂ ಲೋಕೈಕಕಲ್ಪದ್ರುಮಂ ||945||

ಜಿನನಂ ತನ್ನ ಮನಂ ಮನಃಪ್ರಕೃತಿಯಂ ಸದ್ವಿದ್ಯೆಯಾವಿದ್ಯೆಯಂ |
ತನುವಂತಾತನುವಂ ವಿಳಾಸಮದನುದ್ಯಲ್ಲಕ್ಷ್ಮಿಯಾಲಕ್ಷ್ಮಿಯಂ ||
ವಿನುತೌದಾರ್ಯಮದಂ ಜಗಂ ಜಗಮನಿಂಬಿಂ ಕೀರ್ತಿಯಾಲಿಂಗಿಸಲ್ |
ಜನವಂದ್ಯಂ ವಿಭು ರೇಚಿರಾಜನೆಸೆದಂ ಚಾರಿತ್ರರತ್ನಾಕರಂ ||946||

ಕವಿತತಿ ಬಲ್ಮೆಗೋಲಗಿಸೆ ಕಾಮಿನಿಯರ್ ಸೊಬಗಿಂಗೆ ಸೋಲೆ ಬೇ |
ೞ್ಪವರ್ಗಳುದಾರವೃತ್ತಿಗೊಲವಿಂ ನರಶಾಸನಮಾಗೆ ರಾಜ್ಯಮು ||
ದ್ಭವದಿನೊಡರ್ಚೆ ಜೈನಸಮಯಾಂಬುಧಿ ಕೀರ್ತಿಸುಧಾಂಶುವಿಂ ಪೊದ |
ೞ್ಕೆವಡೆಯೆ ರೇಚಿರಾಜನೆಸೆದಂ ಜಸದಿಂ ವಸುಧೈಕಬಾಂಧವಂ ||947||

ನಡೆದ ನೆಲಂ ರಣೋರ್ವರೆಯೊಳಂತನಿತುಂ ತನಗಜ್ಜಪಜ್ಜರಿಂ |
ಪಡೆದ ನೆಲಂ ದಲೆಂಬನಸಿಗನ್ಯನೃಪಾಳರನಿಕ್ಕದುಂತೆ ಕಿ ||

ಱಿೞ್ತೊಡೆ ಕಡುದೋಸಮೆಂಬನಸಹಂ ಮಿಗೆ ಬೆಂಗುಡೆ ಪತ್ತೆ ತಾನೆ ಬೆಂ ।
ಗುಡುವವೊಲೆಂಬನೇನದಟನೋ ಕಲಿರೇಚಣದಂಡನಾಯಕಂ ॥948॥

ಅನುಪಮದಾನಶೌರ್ಯ್ಯರಣಶೌರ್ಯ್ಯಮನೇವೊಗೞ್ದಪ್ಪೆನಾಂ ದ್ವಿಷ ।
ಜ್ಜನಪರೊಳೊಂದುವಜ್ಜ್ರಸೆಯಗ್ಗ್ಗ ಸಯಂಬರಮಾಗೆ ಸಗ್ಗದೊಳ್ ॥
ಜನಿಯಿಸಿತಿಂದ್ರಭೂರುಹಕೆ ತೋರಣದಿಂ ತವಿಲೆಂಬುದೆಯ್ದೆ ಮೇ ।
ದಿನಿ ವಸುಧೈಕಬಾಂಧವಜಮೂಪತಿರೇಚಣನೇಂ ಕೃತಾರ್ಥನೋ ॥949॥

ಪೆಡೆವಣಿ ಶೇಷನೊಳ್ ಸರಸಿಜೋದರನಂಬುಧಿಯೊಳ್ ಮೃಗಾಂಗಮಂ ।
ದುಡುಪನೊಳದ್ರಿಜಾರ್ಧಮಭವಾಂಗದೊಳಾಮದಲುಬ್ಧಭೃಂಗಮಿ ॥
ರ್ಪಡೆ ದಿಗಿಭಂಗಳೊಳ್ ಕುಱುಪುದೋರ್ಪಿನೆಗಂ ಜಗಮಂ ಮುಸುಂಕಿತಿಂ ।
ಗಡಲೆನೆ ಕೀರ್ತಿ ರೇಚನೆಸೆದಂ ಜಸದಿಂ ವಸುಧೈಕಬಾಂಧವಂ ॥950॥

ಶ್ರೀವಜ್ಜಂ ಸಿರಿಯಿಂ ಸಮೃದ್ಧನೆಸೆವಾನಾಗಾಂಬಿಕಾಸೂನು ಭೋ ।
ಗಾವಾಸಂ ವಸುಧೈಕಬಾಂಧವನುದಾರಂ ಸ್ತುತ್ಯಗೌರೀಸುಖಿ ॥
ಶ್ರೀವಿಷ್ಣಂ ವೃಷಭಧ್ವಜಪ್ರಿಯತಮಂ ನಾರಾಯಣಾತ್ಮೋದ್ಭವಂ ।
ಭಾವಂಬೆತ್ತಿರೆ ಚೆಲ್ವನೆಂದೆನಿಸಿದಂ ಶ್ರೀರೇಚಿದಂಡಾಧಿಪಂ ॥951॥

ನಾಗರಖಂಡ

ಕುಸುಮರಜಂ ರಸಾವಳಿ ತಳಿರ್ ಸೊವಡಾಡುವ ಕೀರಜಾಳಮೆಂ ।
ಬೆಸಕದೆ ಚೆಲ್ವುವೇಱಿದ ನೆಲಂ ನೆಲೆವೆರ್ಚಿದ ಪೂಗೊಳಂ ಬಸು ॥
ರ್ಪಸಗದ ನುಣ್ಬಸಿಲ್ ಸುಱಿವ ಕಮ್ಮೆಲರೀಕ್ಷಿಸೆ ಹಜ್ಜನೊಪ್ಪುವಾ ।
ಗಸಮೆಸೆಯಲ್ಕೆ ನಾಡೆಸೆವುದಿಂತು ಬಸಂತದ ಸೃಷ್ಟಿಯೆಂಬಿನಂ ॥952॥

ಕದಂಬಸೋಮನೃಪ

ನಿನಗಂತಾಕಾಮನೀಗಳ್ ಕೆಳೆಯನೆನಿಪುದಂ ತೋರ್ಪವೋಲೆಮ್ಮನೆಚ್ಚಿ ।
ಚ್ಚು ನಿತಾಂತಂ ನಿನ್ನ ಪಾದಕ್ಕೆಱಗಿಪನೆನುತುಂ ಕಾಂತೆಯರ್ ಜೋಲೆ ಕಾಲ್ಗಾ ॥
ನನಕಾಶ್ಮೀರದ್ರವಂ ಪತ್ತಿದ ನಿಗಳದ ಜಂಗಾಳ್ವನಂಗಕ್ಕೆ ಸೇವಾ ।
ಜನಿತಾರಾಗಂಬೊಲಾಗಳ್ ಮೆಱೆವುದನುದಿನಂ ಸೋಮಭೂಮೀಶಪಾದಂ ॥953॥

ಮುನಿದೊಡೆ ಸೋಮಭೂಪನೆಮಗಿರ್ಪೆಡೆಯಾಬನವಾಸೆಯಂತದಂ ।
ತನಿತುಮದೀಗಳಾತನ ಭುಜಾಸಿಲತಾವೃತಮಾಯ್ತು ಪೊಕ್ಕು ಸಿ ॥

ಲ್ಕಿನೊಳಿರೆ ಪೊಲ್ಲದೆಂದಹಿತರೋಡಿ ಸಮುದ್ರದ ವೇಳೆಗಂಡು ತಾ |
ಮನುಮಿಸಿ ವೇಳೆಗೊಂಡು ಸುಖಮಿರ್ಪರಿದೇನದಟಿಂಗೆ ನೋಂತನೋ ||954||

ಬಿರುದರ್ ಭೀತೋರ್ವೀಪಾಳರ್ ಮದನಪರವಶೀಭೂತೆಯರ್ ವಿದ್ಯೆಯುಳ್ಳರ್ |
ಶರಣೆಂದರ್ ಸೇವಕರ್ ಬೇಱ್ಪವರೆಸಿಪಿವಗೋರ್ಲ್ದೀವನೀಸೋಮಭೂಮೀ ||
ಶ್ವರನೆಂದುಂ ರಾಗದಿಂ ಸಂಗರಮನಭಯಮಂ ಬೇಟಮಂ ತುಷ್ಟಿಯಂ ಸ |
ಯ್ತಿರವಂ ಸಂಪ್ರೀತಿಯಂ ಬೇಱ್ಪದನೆನೆ ಜನಮೌದಾರ್ಯದಿಂ ವರ್ಣ್ಯನಾದಂ ||955||

## ಸೋಮನೃಪನ ಹೆಂಡತಿ ಲಚ್ಚಲದೇವಿ

ತೋಳ ತೊಡರ್ವ ಮಚ್ಚಿಪೆರ್ದವತ್ತುಗೆ ಚುಂಬಿಸುವಿಂಬು ಸೋಮಭೂ |
ಪಾಳನೊಳೇಕಭೋಗ್ಯಮೆನಿಸಲ್ ತನಗಾಗಿರಲಾಸ್ಥಳಂಗಳಂ ||
ಪಾಳಿಪ ಕಾಪು ಬೀರಸಿರಿ ಲಕ್ಷ್ಮಿ ಸರಸ್ವತಿಯೆಂದೆ ಸೈರಿಪಳ್ |
ಮೇಳಿಸಲೀವಳೇ ಪೆಱರನೆಂದೆನೆ ಲಚ್ಚಲದೇವಿಯೊಪ್ಪುವಳ್ ||956||

## ಸೋಮನೃಪನ ಪೂರ್ವಿಕ ಬೊಪ್ಪ

ಈಬೊಪ್ಪಂ ದೇವಕಿಗಾ | ದಾಬೊಪ್ಪಂ ತಪ್ಪದಪ್ಪನಱಿದೆಂ ಕೀರ್ತಿ |
ಶ್ರೀ ಬಾಯ್ದೆಱೆದೊಡೆ ಕಾಣ|ಲ್ಕೀಬಂದುದೆ ಭುವನನಿಕರಮೆನೆ ಪೆಸರ್ವಡೆದಂ||957||

ನಗೆಯಲ್ತೇ ಎಮೆಯಿಕ್ಕುತಿರ್ದ ಪದಿನೆಂಟಕ್ಷೋಹಿಣೀಸೇನೆಗಂ |
ದುಗುರಿಂ ಸತ್ತ ಹಿರಣ್ಯಕಾಕ್ಷಕನೆನಿಪ್ಪಂಗಂಡದೇಂ ಬಟ್ಟ ಕ ||
ಣ್ಗಗಿದಂತಾಭಯದಿಂದೆ ಬೆಂದ ಮದನಂಗಂದಾಮಹಾಭಾಗರ |
ಣ್ಮಗೆಯೆಂದೀವಿಭು ಬೊಪ್ಪದೇವನಲೆವಂ ಸತ್ವಾಧಿಕಾನ್ವಯಘಮಂ ||958||

ಕದನಕ್ರೀಡೆಯೊಳುಳ್ಳ ನಿನ್ನ ದಯೆಯೇಕಿಂತೊರ್ಮೆಯುಂ ತೋಱದೀ |
ಮದನಕ್ರೀಡೆಯೊಳುಟ್ಟುದಂ ಮಱೆದೊಡಂ ನೀರ್ವೊಕ್ಕೊಡಂ ನಾಣ ಪು ||
ತ್ತುದಲೊಂದಿರ್ದೊಡಮಿತ್ತೊಡಂ ತಲೆಯನೇ ಸಂಪ್ರೀತಿಯಂ ತೋಱೆಯೆಂ |
ದೊದವಿಂ ಮೇಳಿಸೆ ಕಾಂತೆಯರ್ ಮೆಱೆವಸೀ ಶ್ರೀಬೊಪ್ಪಭೂಪಾಳಕಂ ||959||

## ಸಾಮಂತಶಂಕರ

ದಿನಮೆಲ್ಲಂ ದಾನಕೇಳೀಸಮಯಮೆ ತನಗೆಂದೆಂಬಿನಂ ನೀತಿಯೆಲ್ಲಂ |
ತನಗೆಂದಾಗಿರ್ದುವೆಂದೆಂಬಿನಮರಿಕುಳಮೆಲ್ಲಂ ಸ್ವಖಡ್ಗಾಹತಂ ಶಾ ||
ಕಿನಿಯರ್ಗೆಂದಾದುದೆಂದೆಂಬಿನಮೊಡಮೆಯದೆಲ್ಲಂ ಜಗತ್ಪೋಷಣಕ್ಕೆಂ |
ಬಿನಮಾಸಾಮಂತಶಂಕಂ ನೆಗೞ್ದನೆಳೆಗಮಾತಂಕಮಾಗಲ್ಕೆ ತನ್ನಿಂ ||960||

### ಶಂಕರನು ಮಾಡಿಸಿದ ಜಿನಗೃಹ

ಪ್ರತಿಬಿಂಬಂ ಪದಘಾತಮಂ ಕಳೆವುದಾರಂಗಕ್ಕೆ ಕಂಭಕ್ಕೆ ಹೃ |
ದ್ಗತಮಂ ಮಾಱ್ಪುದು ಸಾಲಭಂಜಿಕೆಗಳಂ ಚಿತ್ರಿಪ್ಪುದಾಭಿತ್ತಿಸಂ ||
ತತಿಯಂ ಜಂಗಮಚಿತ್ರದಿಂದೆನೆ ಜನಂ ಸಾಮಂತಶಂಕಂ ಜಗ |
ನ್ನುತಮಂ ಮಾಡಿಸಿದಂ ಜಿನೇಂದ್ರಗೃಹಮಂ ಮಾಗುಂಡಿಯೊಳ್ ರಾಗದಿಂ ||961||

---

## 186 ಕುರುಗೋಡು ಶಾಸನ

## (ಎಪಿಗ್ರಾಫಿಯಾ ಇಂಡಿಕ XIV, 270). 1181

ಇದರಲ್ಲಿ ಸಿಂದರಾಜನಾದ ರಾಚಮಲ್ಲನ ಆಳಿಕೆಯಲ್ಲಿ ಬೇಚರಸನು ಕುರುಗೋಡಿನಲ್ಲಿ ದೇವಸ್ಥಾನವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.

### ಶಂಭುಸ್ತುತಿ

ಹಿಮವದ್ಧಾತ್ರೀಧರೇಂದ್ರಾತ್ಮಜೆ ಕಿಱು ಪೆಱೆಯಂ ನೋಡೆ ಜೂಟಸ್ಥಮಂ ತಾಂ|
ಕಮನೀಯಾಲೋಕದಿಂ ತನ್ನಯ ಪೆಱೆನೊಸಲೊಳ್ ನೀಳ್ದ ಬೆಳ್ದಿಂಗಳಿಂ ಪೂ |
ರ್ಣಿಮೆಯಾಗಲ್ ದೇವ ಬಾಲೇಂದುವ ಕಳೆಯತಿಪೂರ್ಣೇಂದುವಿಂದಾದುದೆಂಬು |
ತ್ತಮಮುಗ್ಧತ್ವಕ್ಕೆ ಮೆಚ್ಚಿರ್ದತಿಶಯಮಹಿಮಂ ಶಂಭು ರಕ್ಷಿಕ್ಕೆ ನಮ್ಮಂ ||962||

### ಬಲ್ಲಕುಂದೆ

ಜಳಧಿವ್ಯಾವೇಷ್ಟಿತೋರ್ವೀಮಹಿಳೆಗೆ ವಿಳಸಲ್ಲೋಳಭಾಳಸ್ಥಳೀಕುಂ |
ತಳದೇಶಂ ತಾನೆನಿಪ್ಪಂತಿರಲೆಸೆವ ಲಸತ್ಕುಂತಳಕ್ಷೋಣಿಗುದ್ಯ |
ತ್ತಿಳಕಂ ತಾಂ ಬಲ್ಲಕುಂದಾವಿಷಯಮಧಿಕಲಕ್ಷ್ಮೀಸಮಾಸೇವಿತಂ ಭೂ |
ಲಲನಾಲೀಲಾವಿಳಾಸಸ್ಫುರಿತಕಬರಿಕಾಕುಂದದಂತೊಪ್ಪಿ ತೋರ್ಕುಂ ||963||

ಊರೂರ್ದಪ್ಪದೆ ಪೂತ ಜೂತಲತೆಯಿಂ ಮತ್ತಾಳಿಯಿಂ ಶಾಳಿಯಿಂ |
ದೂರೂರ್ದಪ್ಪದೆ ಗಂಗರಿಂ ಕುಡಿಯರಿಂ ಶ್ರೀಮಂತರಿಂ ಕಾಂತರಿಂ ||
ದೂರೂರ್ದಪ್ಪದೆ ದೇವತಾನಿಳಯದಿಂ ಸದ್ಭಕ್ತರಿಂ ಜೆಲ್ವುವೆ |
ತ್ತೂರೂರ್ದಪ್ಪದೆ ಬಲ್ಲಕುಂದೆ ನಡುನಾಱ್ ಸಂತಂ ಬಸಂತಂ ಕರಂ ||964||

### ಕುರುಗೋಡ ದುರ್ಗ

ಕೆಲಬಲದ ಜಲದ ದುರ್ಗಂ|ಗಳನಲೆವುದು ನೆರೆಯ ಹೊರೆಯ ತರುಗಿರಿದುರ್ಗಂ |
ಗಳನಿಱಿಸಿ ತನ್ನ ಮೆಱೆವುದು|ಕುಲಗಿರಿ ಕುಱುಗೋಡ ದುರ್ಗಮಾರ್ಗಂ ದುರ್ಗಂ||

---

## 187 ಕುರುಗೋಡು ಶಾಸನ

(ಎಪಿಗ್ರಾಫಿಯಾ ಇಂಡಿಕ XIV, 279). ಸು. 1181

ಇದರಲ್ಲಿ ಸಿಂದರಾಜನಾದ ರಾಚಮಲ್ಲನ ಹೆಸರಿನಲ್ಲಿ ಪ್ರತಿಷ್ಠಿತವಾದ ಲಿಂಗಕ್ಕೆ ದತ್ತಿಯನ್ನು ಆರೋ ಬಿಟ್ಟಂತೆ ತೋರುತ್ತದೆ.

### ಕುರುಗೋಡು

ಸಾರದನ ತೆಱದೆ ಸರದಿಂ । ತಾರಾಪಥದಂತೆ ರಾಜಹಂಸಾನ್ವಿತದಿಂ ।
ಕ್ಷೀರಾಬ್ಧಿಶಯನನುರದವೊ । ಲಾರಮೆಯಿಂ ತುಱುಗಿ ಪೊಱವೊಲಿಲ್ ಸೊಗ
ಯಿಸುಗುಂ ॥966॥

ಭರದಿಂದೌರ್ವಾನಳಂ ತನ್ನೊಳಗಣ ಜಲಮುಂ ಪೀರ್ವನೆಂದಬ್ಧಿನಾಥಂ ।
ಪಿರಿದೊಂದಾಶಂಕೆಯಿಂದೀಪುರದೊಳೆ ನವರತ್ನಂಗಳಂ ಬಯ್ತ್ತನೆಂಬಂ ॥
ತಿರಲಿರ್ಕುಂ ಕ್ಷತ್ರರತ್ನಂ ಚತುರಯುವತಿರತ್ನಂ ಸ...ರತ್ನಂ ।
ವರರತ್ನಂ ವೀರರತ್ನಂ ಸುಜನಪುರುಷರತ್ನಂ ಗಜಾಶ್ವಾದಿರತ್ನಂ ॥967॥

### ರಾಚಮಲ್ಲ

ವರಮಾರ್ಗಂ ಶ್ರೀನಿಸರ್ಗಂ ವಿನಯವಿನತಭರ್ಗಂ ಜಿತಾರಾತಿವರ್ಗಂ ।
ಸ್ಥಿರಕಾರ್ಯಂ ಮೇರುಧೈರ್ಯಂ ಸುಜನವನಜಸೂರ್ಯಂ ಮಹೀಪಾಲವರ್ಯಂ ॥
ಸ್ಮರರೂಪಂ ಸಪ್ರತಾಪಂ ಕೃತರಿಪುನೃಪತಾಪಂ ಕಲಾಳೀಕಲಾಪಂ ।
ಧರೆಗೆಲ್ಲಂ ರಾಚಮಲ್ಲಂ ಕುಡುತುಮಿರಲೆ ಬಲ್ಲಂ ಯಶಶ್ರೀಗೆ ನಲ್ಲಂ ॥968॥

### ರೇಚಿರಾಜ

ರಾಜಶ್ರೀಸ್ವಾಮಿದೇವಂಗನುವಶೆ ಗುಣಿ ಸಾವಿತ್ರಿಗಂ ಪುಟ್ಟಿದಂ ಶ್ರೀ ।
ಭೂಜಂ ತಿಗ್ಮಾಂಶುತೇಜಂ ಗತಭಯಹೃದಯಾಂಭೋಜನಾಪುಣ್ಯಬೀಜಂ ॥
ಭ್ರಾಜತ್ಕಾಂತಾಮನೋಜಂ ವಿಬುಧವಿಬುಧಭೂಜಂ ಯಶಶ್ರೀಸಮಾಜಂ ।
ನೈಜೋನ್ಮಂತ್ರಾಬ್ಧಿರಾಜಂ ಸುವಿಭವಸುಮನೋರಾಜನೀರೇಚಿರಾಜಂ ॥969॥

---

## 188 ಶ್ರವಣಬೆಳ್ಗೊಳ 327. 1181

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಂತ್ರಿಯಾದ ಚಂದ್ರಮೌಳಿಯ ಹೆಂಡತಿ ಆಚಿಯಕ್ಕನು ಬೆಳ್ಗೊಳದಲ್ಲಿ ಪಾರ್ಶ್ವನಾಥಬಸ್ತಿಯನ್ನು ಕಟ್ಟಿಸಿದಂತೆಯೂ ಆದಕ್ಕೆ ದೊರೆ ಬಂದು ಗ್ರಾಮವನ್ನು ಬಿಟ್ಟಂತೆಯೂ ಹೇಳಿದೆ.

## ಬಲ್ಲಾಳ II

ರಿಪುಭೂಪಾಳೇಭಸಿಂಹಂ ರಿಪುನೃಪನಳಿನಾನೀಕರಾಕಾಶಶಾಂಕಂ |
ರಿಪುರಾಜನ್ಯೌಘಮೇಘಪ್ರಕರನಿರಸನೋದ್ಧೂತವಾತಪ್ರಪಾತಂ ||
ರಿಪುಧಾತ್ರೀಶಾದ್ರಿವಜ್ರಂ ರಿಪುನೃಪತಿತಮಸ್ತೋಮವಿಧ್ವಂಸನಾರ್ಕಂ |
ರಿಪುಪೃಥ್ವೀಪಾಳಕಾಳಾನಳನುದಯಿಸಿದಂ ವೀರಬಲ್ಲಾಳದೇವಂ ||970||

ಭರದಿಂದಂ ತನ್ನ ದೋರ್ಗರ್ವದಿನೊಡೆಯರಸಂ ಕಾಯ್ದು ಕಾದಲ್ಕಣಂ ಪೂ |
ಣ್ದಿರೆ ಬಲ್ಲಾಳಕ್ಷಿತೀಶಂ ನಡೆದು ಬಳಸಿಯುಂ ಮುತ್ತೆ ಸೇನಾಗಜೇಂದ್ರೋ ||
ತ್ಕರದಂತಾಘಾತಸಂಚೂರ್ಣಿತಶಿಖರದೊಳುಚ್ಚಂಗಿಯೊಳ್ ಸಿಲ್ಕಿದಂ ಭಾ |
ಸುರಕಾಂತಾದೇಶಕೋಶವ್ರಜಜನಕಹಯೌಘಾನ್ವಿತಂ ಪಾಂಡ್ಯಭೂಪಂ ||971||

## ಚಂದ್ರಮೌಳಿ

ವರತರ್ಕಾಂಬುಜಭಾಸ್ಕರಂ ಭರತಶಾಸ್ತ್ರಾಂಭೋಧಿಚಂದ್ರಂ ಸಮು |
ದ್ಧುರಸಾಹಿತ್ಯಲತಾಲವಾಲನೆಸೆದಂ ನಾನಾಕಲಾಕೋವಿದಂ ||
ಸ್ಥಿರಮಂತ್ರಂ ದ್ವಿಜವಂಶಶೋಭಿತನಶೇಷಸ್ತುತ್ಯನುದ್ಯದ್ಯಶಂ |
ಧರೆಯೊಳ್ ವಿಶ್ರುತಚಂದ್ರಮೌಳಿಸಚಿವಂ ಸೌಜನ್ಯಜನ್ಮಾಲಯಂ ||972||

## ಆಚಿಯಕ್ಕ

ಘನಬಾಹಾಬಹುಳೋರ್ವಿಭಾಸಿತೆ ಮುಖವ್ಯಾಕೋಚಪಂಕೇಜಮುಂ |
ಡನೆ ದೃಷ್ಟಿಮೀನವಿಲಾಸೆ ನಾಭಿವಿತತಾವರ್ತಾಂಕೆ ಲಾವಣ್ಯಪಾ ||
ವನವಾಸ್ಸಂಭೃತೆ ಚಂದ್ರಮೌಳಿಪಥುವೀಶ್ರೀಯಾಚಿಯಕ್ಕಂ ಜಗ |
ಜ್ಜನಸಂಸ್ತುತ್ಯೆ ಕಳಂಕದೂರೆ ನುತೆ ಗಂಗಾದೇವಿ ತಾನಲ್ಲಳೇ ||973||

ಹರಿಣೀಲೋಚನೆ ಪಂಕಜಾನನೆ ಘನಶ್ರೋಣಿ ಸ್ತನಾಭೋಗಭಾ |
ಸುರೆ ಬಿಂಬಾಧರೆ ಕೋಕಿಳಸ್ವನೆ ಸುಗಂಧಶ್ವಾಸೆ ಚಂಚತ್ತನೂ ||
ದರಿ ಭೃಂಗಾವಳಿನೀಳಕೇಶಿ ಕಳಹಂಸೀಯಾನೆಯೀಕಂಬುಕಂ |
ಧರೆಯಪ್ಪಾಚಲದೇವಿ ಕಂತುಸತಿಯಂ ಸೌಂದರ್ಯದಿಂದೇಳಿಪಳ್ ||974||

ಗೌರಿ ತಪಂಗಳಂ ನೆಗಱ್ದು ತಾಂ ನೆರೆದಳ್ ಗಡ ಚಂದ್ರಮೌಳಿಯೊಳ್ |
ನಾರಿಯರ್ಗಿನ್ನದೇಸೊಬಗು ಪೇೞ್ ಪಲವುಂ ಭವದೊಳ್ ನಿರಂತರಂ ||
ಸಾರತಪಂಗಳಂ ಪಡೆದು ತಾಂ ನೆರೆದಂ ಗಡ ಚಂದ್ರಮೌಳಿ ಗಂ |
ಭೀರೆಯೆನಿಪ್ಪ ತನ್ನನೆನಿಪಾಚಲೆವೋಲ್ ಸೊಬಗಿಂಗೆ ನೋಂತರಾರ್ ||975||

### ಚೆಂದವ್ವೆ

ಆತನ ಸತಿಗೆ ಸಿತಾಂಬುಜ | ಶೀತಾಂಶುಶರತ್ಪಯೋದವಿಶದಯಶಃಶ್ರೀ |
ಧೌತಧರಾತಳೆಗಖಿಳವಿ | ನೀತೆಗೆ ಚೆಂದವ್ವೆಗಬಲೆಯರ್ ದೊರೆಯುಂಟೇ ||976||

ಇಂದುಮುಖಿ ಮೃಗವಿಲೋಚನೆ|ಮಂದರಗಿರಿಧೈರ್ಯೆ ತುಂಗಕುಚಯುಗೆ ಭೃಂಗೀ|
ಬೃಂದಶಿತಿಕೇಶವಿಳಸಿತೆ | ಚೆಂದವ್ವೆ ವಿನೂತೆಯಾದಳಖಿಳೋರ್ವರೆಯೊಳ್ ||977||

### ಕಾಳವ್ವೆ

ಸರಸಿರುಹವದನೆ ಘನಕುಚೆ | ಹರಿಣಾಕ್ಷಿ ಮದೋತ್ಕಕೋಕಿಳಸ್ವನೆ ಮದವ |
ತ್ಕರಿಪತಿಗಮನೆ ತನೂದರಿ | ಧರೆಯೊಳ್ ಕಾಳವ್ವೆ ರೂಪಿನಾಗರಮಾದಳ್ ||978||

### ಆಚಿಯಕ್ಕನ ಮಗ ಸೋಮ

ವರಲಕ್ಷ್ಮೀಪ್ರಿಯವಲ್ಲಭಂ ವಿಜಯಕಾಂತಾಕರ್ಣಪೂರಂ ವಿಭಾ |
ಸುರವಾಣೀಹೃದಯಾಧಿಪಂ ತುಹಿನತಾರಕ್ಷೀರವಾರಾಶಿಪಾಂ ||
ಡುರಕೀರ್ತೀಶನುದಗ್ರದುರ್ಧರತುರಂಗಾರೂಢರೇವಂತನು |
ದ್ಧುರಕಾಂತಾಕಮನೀಯಕಾಮನೆಸೆದಂ ಶ್ರೀಸೋಮನೀಧಾತ್ರಿಯೊಳ್ ||979||

---

### 189 ಷಿಕಾರಿಪುರ 119. 1181

ಇದರಲ್ಲಿ ಕಳಚುರ್ಯರಾಜನಾದ ಆಹವಮಲ್ಲನ ಪ್ರಧಾನ ಕೇಶವರಾಜ ಮುಂತಾದವರು ಬಳ್ಳಿಗಾವೆಯ ಗವರೇಶ್ವರದೇವರಿಗೆ ಅಪುತ್ರಿಕಮೃತಕಧನವನ್ನು ಬಿಟ್ಟಂತೆ ಹೇಳಿದೆ.

### ರೇಚಣದಂಡನಾಥ

ವೈರಿನೃಪಾಳಪಟ್ಟಮಹಿಷೀವರಪಾಂಡುರಗಂಡಕಾಂತಿಯಂ |
ಸ್ವೈರಣೆಗೆಟ್ಟ ಚಾತಕಕುಳಂ ಹಿಮದೀಧಿತಿಯೆಂದು ಷಟ್ಪದಂ ||
ಚಾರುಸಿತಾಬ್ಜಮೆಂದು ಕಳಹಂಸಕುಳಂ ಬಿಸಕಾಂಡಮೆಂದು ಸಂ |
ಚಾರಿಸಿ ಲೋಕಮಂ ನಗಿಸುಗುಂ ವಿಭುರೇಚಣದಂಡನಾಥನಾ ||980||

### ಸೋವಣಚಮೂಪ

ಪರಹಿತವೃತ್ತಿಯೊಳ್ ಶಿಬಿ ಪರಾರ್ಥದೊಳಾರವಿನಂದನಂ ನೃತಾ |
ದರತೆಗೆ ಧರ್ಮನಂದನನೆ ಮುಂ ತೊಣೆಯಪ್ಪೊಡದಕ್ಕುಮಲ್ಲದಾ ||
ಪರಹಿತವೃತ್ತಿಗಂ ವಿತರಣೋನ್ನತಿಗಂ ವರಸತ್ಯವಾಣಿಗಂ |
ದೊರೆಯೆನಲಾರೊ ಸೋವಣಚಮೂಪತಿಯಂತಿರಿಳಾತಳಾಗ್ರದೊಳ್ ||981||

**ಕೇಶವಚಮೂಪ**

ಮಲೆವವರಿಲ್ಲ ಗಂಡೆಸೆವರಿಲ್ಲಿದಿರಪ್ಪವರಿಲ್ಲ ತೇಜಮೆಂ |
ದುಲಿವವರಿಲ್ಲ ಟೆಂಟಣಿಪರಿಲ್ಲುಱದಿರ್ಪವರಿಲ್ಲ ಕಾಯ್ದು ಬಂ ||
ದಲೆವವರಿಲ್ಲ ತನ್ನ ಬಿರುದಲ್ಲದೆ ಕಬ್ಬದ ಗೀತದಲ್ಲಿ ಮಾ |
ರ್ಗಲೆಯುವರಿಲ್ಲ ಕೃಷ್ಣವಿಭುಕೇಶವದೇವಚಮೂಪರಾಜ್ಯದೊಳ್ ||982||

**ತಿಕ್ಕರಾಜ**

ಬಲ್ಮೆಯ ಮಾತಿಸೊಳೇಂ ಕಲಿ | ಕಲ್ಮಷರಹಿತಂಗೆ ತಿಕ್ಕರಾಜಂಗುಱಿದೀ |
ಪುಲ್ಮಾನಸರಂ ಪೋಱೆಯೆನೆ | ಕಲ್ಮಾಣಿಕದಂತುಟೆಂದೊಡೆಂತಂತೆ ದಿಟಂ ||983||

---

## 190 ಬೇಲೂರು 137. 1182

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಆದಿಗೌಂಡನು ಒಂದೂರನ್ನು ಕಟ್ಟಿಸಿ ಅದರಲ್ಲಿ ಆದಿಮಲ್ಲಿಕಾರ್ಜುನದೇವಾಲಯವನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

**ಬಲ್ಲಾಳ II**

ಸಕಳಕಳಾಪರಿಪೂರ್ಣಂ | ಸಕಳೋರ್ವೀನಯನಸುಖದನಕಳಂಕಂ ತಾ |
ನಕುಟಿಳನಪೂರ್ವನವಶೀ | ತಕರಂ ಬಲ್ಲಾಳದೇವಸುದಯಂಗೆಯ್ದಂ ||984||

ಶನಿವಾರದಂದೆ ಪಾಂಡ್ಯಾ | ವನಿಪನ ಸಪ್ತಾಂಗಮೆಯ್ದೆ ಸಿದ್ಧಿಸಿದುದಱಿಂ |
ಶನಿವಾರಸಿದ್ಧಿವೆಸರಂ | ಜನಪತಿ ಬಲ್ಲಾಳದೇವನೆಸೆದಿರೆ ತಳೆದಂ ||985||

**ಬೊಪ್ಪದಂಡನಾಥ**

ಮಲೆನಾಡಂ ತುಳುನಾಡನಗ್ಗದ ಬಯಲ್ನಾಡಂ ಲಸಚ್ಚೋಳಮಂ |
ಡಲಮಂ ಪೆರ್ದೊಱೆ ಮೇರೆಯಾಗೆ ಬಡಗಲ್ ಶ್ರೀವಿಷ್ಣುಭೂಪಂಗೆ ಭೂ ||
ತಲಮಂ ಸಾಧಿಸಿ ಕೊಟ್ಟು ಮಾಣ್ದು ರಣದೊಳ್ ಮಾಱಾಂತರಂ ಕೊಂದ ದೋ |
ರ್ಬಲದಿಂ ದ್ರೋಹಘರಟ್ಟನೆಂದು ಪೆಸರ್ವೆತ್ತಂ ಬೊಪ್ಪದಂಡಾಧಿಪಂ ||986||

**ಆದಿಗೌಂಡ**

ಹಸಿದರ ಮೊಗಮಂ ನೋಡಂ | ಹಸಿವುಂ ನೀರಱಿಕೆಯಿಲ್ಲ ಕಂಡೊಡೆ ತನ್ನಂ |
ವಸುಮತಿಗೆಸಿಪ ಮಹಾಪ್ರಭು | ವಸುಧೆಯೊಳಾರ್ ಕಾಣ್ಬರಾದಿಗೌಂಡಂಗೆಣೆಯಂ ||
ಹಸುಗೂಸುಗಳ್ಗೆ ಹಾಲಂ | ಹಸಿದರ್ಗನ್ನಮುಮನಱಿಕೆಯಿಂದಂ ನಿಚ್ಚಂ |
ಹಸಗಾಲದೊಳಂ ಸಲಿಸುವ | ಬೆಸನದಿನಾರಾದಿಗೌಂಡನಂ ಪೋಲ್ಪನ್ನರ್ ||988||

ಕೆಱೆಯಂ ಕಟ್ಟಿಸುತಿರ್ಪುದು | ಮೆಱೆವಂಟಿಗೆಯುಡಿಸುತಿರ್ಪುದೆಸೆವಾರವೆಯಂ |
ನೆಱೆ ಮಾಡಿಸುವುದುಮಲ್ಲದೆ | ಪೆಱತೊಂದಿಲ್ಲಾದಿಗೌಂಡನುಜ್ಜುಗಮೆಂದುಂ ||989||

---

191 ಚೆನ್ನರಾಯಪಟ್ಟಣ 150. 1182

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಂತ್ರಿ ಚಂದ್ರಮೌಳಿಯ ಹೆಂಡತಿ ಆಚಲದೇವಿ ಶ್ರವಣಬೆಳ್ಗೊಳದಲ್ಲಿ ಪಾರ್ಶ್ವನಾಥಬಸದಿಯನ್ನು ಕಟ್ಟಿಸಿದಂತೆ ಹೇಳಿದೆ.

ಬಲ್ಲಾಳ II

ಹೆಸರುಜ್ಜಂಗಿಯ ಕೋಟೆಯ|ನಸದೃಶಭುಜಬಳದೆ ಮುನ್ನೆ ಕೊಂಡರಸುಗಳಾರ್ |
ಅಸಹಾಯಶೂರ ಶನಿವಾ | ರಸಿದ್ಧಿ ಗಿರಿದುರ್ಗಮಲ್ಲ ಬಲ್ಲಾಳನ ವೋಲ್ ||990||

ಏಕಾಂಗವೀರಶೂದ್ರಕ | ನಾಕಾರಮನೋಜನರ್ಥಿಸುರತರು ತುರಗಾ |
ನೀಕವರವತ್ಸರಾಜನ | ನೇಕಪಭಗದತ್ತನಲ್ತೆ ಬಲ್ಲಾಳನೃಪಂ ||991||

ಚಂದ್ರಮೌಳಿ

ಭರತಾಗಮತರ್ಕವ್ಯಾ | ಕರಣೋಪನಿಷತ್ಪುರಾಣನಾಟಕಕಾವ್ಯೋ |
ತ್ಕರವಿದ್ವಜ್ಜನನುತನೆನೆ | ಸ್ಥಿರಪುಣ್ಯಂ ಚಂದ್ರಮೌಳಿಮಂತ್ರಿಲಲಾಮಂ ||992||

---

192 ನಾಗಮಂಗಲ 32. 1183

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಸಾಮಂತರು ಭರತಿಮಯ್ಯ ಬಾಹುಬಲಿ ದಂಡನಾಯಕರು ಅಣುವಸಮುದ್ರದಲ್ಲಿ ಬಸ್ತಿಯನ್ನು ಕಟ್ಟಿಸಿ ಭೂಮಿಯನು ಬಿಟ್ಟಂತೆ ಹೇಳಿದೆ.

ವಿಷ್ಣುವರ್ಧನ

ಅರಿನೃಪರಂ ತಡಂಗಡಿದು ಬೇಲಿಯನಿಕ್ಕಿ ಪಟುಪ್ರತಾಪಮು |
ರ್ಬರೆ ತಳಕಾಡನೀಡುಗಡಿದಳ್ಕಱೆ ಸುಟ್ಟು ತುರಂಗದಂಘ್ರಿಸಂ ||
ಚರಣದಿನುತ್ತು ವೀರರಸದಿಂ ಹದನಾಗಿರೆ ಕೂಡೆ ಬಿತ್ತಿದಂ |
ಸುರುಚಿರಕೀರ್ತಿಯಂ ನೃಪಶಿಖಾಮಣಿ ಸಾಹಸಗಂಗಹೊಯ್ಸಳಂ ||993||

ಭರತದಂಡನಾಥ

ಬೆಸನಂ ಬಲ್ಲಾಳಭೂಪಂ ಬೆಸಸೆ ಭರತದಂಡಾಧಿಪಂ ರಾಗದಿಂ ವಾ |
ಯುಸುತಂ ರಾಮಾಜ್ಞೆಯಿಂದಂ ನಡೆವ ತೆಱದೆ ಬೀಱಿಕೊಂಡು ಸಾಮಗ್ರಿಯಿಂದಂ ||
ದಸುಹೃದ್ದೇಶಂಗಳಂ ಕೇಸುರಿಗೆ ಸೆಱೆಯೆ ಬಿಟ್ಟಂತೆ ನಿಷ್ಕಂಟಕಂ ಭೂ |
ಪ್ರಸರಂ ತಾನಾಯ್ತುಧೀಶಂಗೆನಿಸಿ ಪಗೆಯ ಚಿಂತಿಲ್ಲದಂತಾಗೆ ಕೊಂಡಂ ||994||

ಬಾಹುಬಲಿದಂಡನಾಥ

ಕುದುರೆಯನೇಱಲಂಕವಣಿಗಂಘ್ರಿಯನೊಯ್ಯನೆ ನೀಡೆ ವೈರಿಗಳ್ |
ಕದನಪರಾಙ್ಮುಖರ್ ಪರಿದು ಬಿಟ್ಟಮನೇಱದರುಟ್ಟುದಿಕ್ಕಿದರ್ ||
ನದಿಗಳೊಳಬ್ಧ್ವರಂಗುಳಿಗಳಂ ನೆಱೆ ಕರ್ಚಿದರೆಯ್ದೆ ಹುತ್ತನೇ |
ಱದರಿದು ದಂಡನಾಥಭರತಾತ್ಮಜಬಾಹುಬಲೀಶಪೌರುಷಂ ||995||

---

## 193 ಅರಸಿಯಕೆರೆ 79. 1183

ಇದರಲ್ಲಿ ಹೊಯ್ಸಳರಾಜನಾದ II ನೆಯ ಬಲ್ಲಾಳನ ಆಳಿಕೆಯಲ್ಲಿ ಅರಸಿಯಕೆರೆಯ ಕೊಯ್ಲಾಳ್ಗಳು ಕೊಯ್ಲಾಳೇಶ್ವರ ದೇವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಬಲ್ಲಾಳ II

ಕಮಠಂ ಕಂದಮಹೀಂದ್ರನಾಳಮುದಿತಾಶಾಸಂಕುಳಂ ತದ್ದಳಂ |
ಕಮನೀಯೋನ್ನತದಿಗ್ಗಜಂ ಮಧುಕರಂಬೊಲ್ ಶೋಭಿಪೀದೈತ್ಯಶ ||
ತ್ರುಮಹೀಭೃನ್ನುತಕರ್ಣಿಕಾಕುವಳಯಕ್ಕಾತನ್ನ ಪೀಯೂಷಹ |
ಸ್ತಮೆ ತಾನಾಶ್ರಯಮೆಂದೊಡೇವೊಗಱ್ವುದೋ ಶ್ರೀವೀರಬಲ್ಲಾಳನಂ ||996||

ಕೇತಯ್ಯ

ಮದವದ್ವೈರಿಬಳಪ್ರಭೇದಿ ಸುಮನಸ್ಸಂದೋಹಸೇವೋನ್ನತಾ |
ಸ್ಪದನುದ್ಯದ್ಗುರುವಾಕ್ಯನೀತಿಚರಿತಂ ಕಾತ್ಯಾಯನೀಕಾಂತಸ ||
ತ್ಪದನೀರೇರುಹಪೂಜನಾರತನೆನಲ್ಕೀಧಾತ್ರಿಯೊಳ್ ಶಕ್ರನಂ |
ದದೆ ಪೆಂಪಂ ತಳೆದಿರ್ದನುದ್ಧವಿಭವಂ ಕೇತಯ್ಯನತ್ಯೂರ್ಜಿತಂ ||997||

ಕೊಯ್ಲಾಳ್ಗಳು

ಸ್ಥಿರರೇ ಮೇರುಗೆ ಸನ್ನಿಭರ್ ಗುಣಿಗಳೇ ಧರ್ಮಾತ್ಮಜಪ್ರಖ್ಯರೀ |
ವರೆ ಮಿತ್ರಾತ್ಮಜಪಾಟಿಗಳ್ ಕಲಿಗಳೇ ದೇವೇಂದ್ರಪುತ್ರಂಗವರ್ ||
ದೊರೆಗಳ್ ಶೌಚಿಗಳೇ ನದೀಜನ ಸಮಂ ಗುಣ್ಪುಳ್ಳರೇ ಸಾಗರಂ |
ನಿರುತಂ ಪಾಸಟಿಯೆಂದೊಡೇವೊಗಱ್ವುದೋ ಕೊಯ್ಲಾಳ್ಗಳೊಂದಂದಮಂ ||998||

ಜಲಮಂ ಕಾಂತೆಯರಾರ್ತು ದಾಂಟುವೊಡವರ್ ಗೇಣಂತರಕ್ಕಣ್ಮರೀ |
ನೆಲದೊಳ್ ಚೋದ್ಯಮಿದೇನೊ ಕೇಳುಗುರ ಮೂನೂರ್ವರ್ಕಳೊಳ್ ಕೂಡಿ ನಿ ||

ರ್ಮಲೆ ಕೀರ್ತ್ಯಂಗನೆಯಂಬುಧಿಪ್ರಕರಮಂ ದಾಂಟಿರ್ದು ದಿಗ್ದಂತಿಸಂ |
ಕುಲದಂತಾಗ್ರದೊಳೆಯ್ದೆ ನರ್ತಿಸುತುಮಿರ್ಪಳ್ ಗಾಳುವಿಂತಾವಳೋ ||999||
ಶರಣೆನೆ ಕಾವರ್ ಬೇಡಿದೊ | ಡರದೀವರ್ ವೈರಿಸಂಕುಳಂ ಬಂದೆಡಱಲ್ |
ಧುರದೊಳ್ ಗೆಲ್ವರೆನಲ್ಕೀ | ಧರೆಯೊಳ್ ಕೊಯ್ಲಾಳ್ಗಳಂದಮುಪಮಾತೀತಂ ||1000||

---

## 194 ತರೀಕೆರೆ 15. 1184

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನು ಚಿಕ್ಕಬಮ್ಮಲದೇವಿಗೆ ಶಾಂತ್ಯರ್ಥವಾಗಿ ಯೋಗೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ವಿಷ್ಣುವರ್ಧನ

ಪೆರ್ದೊಱೆ ಸೇತು ಪಶ್ಚಿಮಪಯೋನಿಧಿ ಮೂಡಪಯೋಧಿ ಮೇರೆಯಾ |
ಗಿರ್ದ ಧರಿತ್ರಿಯಂ ತನಗೆ ತೋಳ್ವಲದಿಂ ನೆಱೆ ಮಾಡಿ ದುಷ್ಟರಂ ||
ಮರ್ದಿಸಿ ತುಷ್ಟಿಯಂ ಪಡೆದು ಶಿಷ್ಟಜನಪ್ರಕರಕ್ಕೆ ರಾಮನಂ |
ತಿರ್ದನಪಾರಪೌರುಷಮೆ ತನ್ನೊಳೊಡಂಬಡೆ ವಿಷ್ಣುವರ್ಧನಂ ||1001||

### ಬಲ್ಲಾಳ II

ಆದಂಪತಿಗೆ ತನೂಭವ | ನಾದಂ ರಿಪುನೃಪತಿಮಕುಟಘಟ್ಟಿತಪದಲ |
ಕ್ಷ್ಮೀದಯಿತನಧಿಕಬಳನುದಿ | ತೋದಿತಪುಣ್ಯಪ್ರಭಾವನೀಬಲ್ಲಾಳಂ ||1002||

---

## 195 ಅರಸಿಯಕೆರೆ 88. 1184

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಜ್ಞಾನುಸಾರವಾಗಿ ರಾಜಾಧ್ಯಕ್ಷದ ಹೆಗ್ಗಡೆ ರೇವಣ್ಣ ಮುಂತಾದವರು ಬ್ರಹ್ಮದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಬ್ರಹ್ಮದೇವರು

ಕತ್ತುರಿಗಂಪು ಕೈಸುರಿಗೆ ಹೊನ್ನೊಱೆ ಹಟ್ಟಿಗೆ ಸಣ್ಣ ಗಗ್ಗರಂ |
ಮುತ್ತಿನ ದಂಡೆ ತೋಳಮಣಿ ಬಯ್ತಲೆ ನೆಯ್ದಲೆ ತೂಲಜನ್ನರಂ ||
ಚಿತ್ರದ ಸೆಂಡುಕೋಲ್ ಮೊರೆವ ದಂತದ ಪಾವುಗೆ ಭೃಂಗದೋಲೆ ಮೆ |
ಯ್ವೆತ್ತಿರೆ ರಾತ್ರಿಯೊಳ್ ಸುಱಿವ ಬ್ರಹ್ಮಯಸೀಗೆಮಗಿಷ್ಟಸಿದ್ಧಿಯಂ ||1003||

ಬಲ್ಲಾಳ II

ಕಲಿಕಾಲಕ್ಷತ್ರಪುತ್ರಪ್ರಬಳತರದುರಾಚಾರಸಂದೋಹದಿಂದಂ ।
ಹೊಲೆ ಪೊದ್ದಲ್ ಹೇಸಿ ಬೇಸತ್ತಳವಱಿದ ಮಹೀಕಾಂತೆಯಂ ರಕ್ಷಿಸಲ್ಕಾ ॥
ಜಲಜಾಕ್ಷಂ ತಾನೆ ಬಂದಿಂತವತರಿಸಿದವೋಲ್ ವೀರಬಲ್ಲಾಳಭೂಪಂ ।
ಕುಲಜಾತ್ಯಾಕಾರಭಾರಂ ನೃಪವರನುದಯಂಗೆಯ್ದನಾಶ್ಚರ್ಯಶೌರ್ಯಂ ॥1004॥

---

## 196 ಅರಸಿಯಕೆರೆ 127. 1185

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಪೆಗ್ಗಡೆ ಸಂಕಣ್ಣನು ಪಲ್ಲವಪುರದಲ್ಲಿ (ತಳರೂರು) ಶಂಕರೇಶ್ವರದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ಎರೆಯಂಗ

ತದಪತ್ಯಂ ಸಕಳಗುಣಾ । ಸ್ಪದನಸುಹೃನ್ನೃಪತಿನಿಕರಮದರದನಿಘಟಾ ।
ಬಿದುವಿದಳನಮಾರುತಿಯೆನಿ । ಸಿದನೇಚಲದೇವಿಯೆಱೆಯನೆಱೆಯಂಗನೃಪಂ॥1005॥

ವಿಷ್ಣುವರ್ಧನ

ಅಂತಾಮೂವರೊಳುರ್ವರಾಭರಣದೊಳ್ ನಿಂದೊಪ್ಪಿದಂ ವಿಷ್ಣುಭೂ ।
ಕಾಂತಂ ಪೆರ್ದೊಱೆ ಮೇರೆಯಾದವನಿಯಂ ತಾನಾಳ್ದನಾತ್ಮೀಯಮಾ ॥
ಶಾಂತಕ್ಕುಜ್ವಳಕೀರ್ತಿ ಪರ್ವುವಿನೆಗಂ ನಾನಾಗ್ರಹಾರಸ್ಫುರ ।
ತ್ಕಾಂತಿಪ್ರೋಜ್ವಳಿತಾಮರಾಲಯತಟಾಕಶ್ರೇಣಿಯಂ ಮಾಡಿದಂ ॥1006॥

ನಾರಸಿಂಹ I

ಒಗೆದಂ ಲೋಕದ ಸಯ್ಪು ಸಮ್ಮನಿಸೆ ಸರ್ವೋರ್ವೀತಳಾಳಂಕರಿ ।
ಷ್ಣುಗೆ ವೈರಿಕ್ಷಿತಿಪಾಲಜಿಷ್ಣುಗೆ ನಿಜಾಮ್ನಾಯಾಬ್ಧಿವರ್ಧಿಷ್ಣುಗಾ ।
ವಗಮಾಶಾಪರಿಪೂರಿತೋಜ್ವಳಯಶೋಭ್ರಾಜಿಷ್ಣುಗಾಭೂಪವಿ ।
ಷ್ಣುಗೆ ಪುತ್ರಂ ನರಸಿಂಹದೇವನತುಳಪ್ರೌಢಪ್ರತಾಪೋದಯಂ ॥1007॥

ಬಲ್ಲಾಳ II

ವಿನಯಾದಿತ್ಯನಿನುಳ್ಳರಲ್ದೆಱಗಪೃಥ್ವೀಪಾಳನಿಂ ಕೆಂಪನಾ ।
ಳ್ದ ನೃಪಾಗ್ರೇಸರನಪ್ಪ ವಿಷ್ಣುವಿನ ಕೆಯ್ಯೊಳ್ ತಳ್ತು ತನ್ನಾರಸಿಂ ॥
ಹನ ಶೌರ್ಯಕ್ಕನುರಾಗಮಂ ಪಡೆದು ಪೆಂಪಿಂ ಪೊಯ್ಸಳಾಮ್ನಾಯಕೋ ।
ಕನದಂ ನಿತ್ಯನಿವಾಸಮಾಯ್ತು ಸಿರಿಗೀಬಲ್ಲಾಳಭೂಪಾಳನಾ ॥1008॥

ವಿಜಯಾಕೃಷ್ಟಿಗೆ ತೋಳ ಬಾಳ ಪೊಗರಾಯ್ತಾಲೇಖ್ಯಯಂತ್ರಾಕ್ಷರಂ ।
ಭುಜಗೋತ್ರಾಚಲಮೊಂದೆ ಕಾಳ್ದಿತಖಿಳಕ್ಷ್ಮಾಚಕ್ರಮಂ ವಕ್ತ್ರಪಂ ॥
ಕಜದೊಳ್ ಭಾರತಿ ನರ್ತಿಪಳ್ ಮುದದೆ ವಕ್ಷೋರಂಗದೊಳ್ ಸಂತತಂ ।
ನಿಜದಿಂದಂ ಸಿರಿಯಿರ್ಪಳೇವೊಗಳ್ವುದೋ ಬಲ್ಲಾಳಭೂಪಾಳನಾ ॥1009॥

ಭುವನಾಳೋಕಾಭಿರಾಮಂ ದಿಗವನಿತಳಪೂರ್ಣಾರ್ಜುನಶ್ಲೋಕನಾತ್ಮೀ ।
ತ್ಸವಕೃದ್ದಿಗ್ಜೈತ್ರಯಾತ್ರಾಜಿತನೃಪತಿಶತಾನೀಕನಾಭಾಸಮಾನ ॥
ಸ್ತವಪುಶ್ರೀವತ್ಸಸಲ್ಲಕ್ಷ್ಮಣನೆನೆ ನಿಜಸಾಮರ್ಥ್ಯದಿಂದಾದ್ಯಧಾತ್ರೀ ।
ಧವರಂ ತಾಂ ತನ್ನೊಳುಜ್ಜೀವಿಸಿ ಪೆಸರ್ವಡೆದಂ ವೀರಬಲ್ಲಾಳದೇವಂ ॥1010॥

ಧರೆ ತೇರ್ ದಿಕ್ಕುಂಭಿ ಯುಗ್ಮಂ ರವಿಶಶಿವಳಯಂ ಗಾಲಿಗಳ್ ಮೇರು ಬಿಲ್ ನೀ ।
ಳ್ದುರಗೇಂದ್ರಂ ಮೌರ್ವಿ ಕೃಷ್ಣಂ ಕಣೆ ಶಿಖಿಯಲಗಾವಾಯು ಪಿಳ್ಕಾಗೆ ರುದ್ರಂ ॥
ಸುರಸೈನ್ಯಂ ಕೂಡೆ ಸುಟ್ಟಂ ತ್ರಿಪುರಮನಳವಿಂದಂದು ಬಲ್ಲಾಳನಿಂದು ।
ದ್ಧುರತೇಜಂ ವೈರಿದುರ್ಗೋತ್ಕರಮನಡಸಿ ಸುಟ್ಟಂ ಪ್ರತಾಪತ್ರಿಣೇತ್ರಂ ॥1011॥

ಉಂಡಿಗೆ ಸಾಧ್ಯಮಾಯ್ತು ಹಿಮದಿಂ ಸಲೆ ಸೇತುವರಂ ಸಮಸ್ತಭೂ ।
ಮಂಡಲಮೊಲ್ಲದುದ್ಧತರ ನೆತ್ತಿಯ ಬತ್ತಿವೊಲಾಯ್ತು ತೀವ್ರರು ॥
ಜ್ಮಂಡಲಮಂ ದಿಟಂ ಮಿಗುವ ತೇಜದ ದಳ್ಳುರಿ ಕೀರ್ತಿದಿಗ್ವಧೂ ।
ಮಂಡನಹಾರಮಾಯ್ತುದು ನೃಪೇಂದ್ರಗುಣಂ ಚಲದಂಕರಾಮನಾ ॥1012॥

## ಸಂಧಿವಿಗ್ರಹಿ ಕೇಶಿರಾಜ

ಬರೆದುದು ಕೀರ್ತಿ ದಿಗ್ವಳಯಭಿತ್ತಿಯನೋವದೆ ಬಾರಿಸಿತ್ತು ಭಾ ।
ಸುರರುಚಿಯಿಂದೆ ಚಂದ್ರಮನ ಚಂದ್ರಿಕೆಯಂ ಸಲೆ ಮುದ್ರಿಸಿತ್ತು ಸಾ ॥
ಗರಪರಿವೇಷ್ಟಿತಾವನಿಯನೆಂದೊಡದೇವೊಗಳ್ದಪ್ಪೆ ಸಂದ ಸಾ ।
ಕ್ಷರನಿಧಿ ಸಂಧಿವಿಗ್ರಹಿಲಲಾಮನನಗ್ಗದ ಕೇಶಿರಾಜನಂ ॥1013॥

## ಪೆರ್ಗಡೆ ಸಂಕಣ್ಣ

ಕುಲದೊಳ್ ಶೀಲದೊಳೀಶಭಕ್ತಿಯೊಳನೂನೈಶ್ವರ್ಯದೊಳ್ ಮಿಕ್ಕ ವಾ ।
ಗ್ಬಲದೊಳ್ ಸತ್ಯದೊಳೋಜೆಯೊಳ್ ಸಕಲವಿದ್ಯಾಪ್ರೌಢಿಯೊಳ್ ಧೈರ್ಯದೊಳ್ ॥
ಚಲದೊಳ್ ಚಾಗದೊಳುರ್ವರಾತಳದೊಳಿಂದಾರಯ್ವೊಡಿಂತೀಗುಣಾ ।
ವಲಿಯಿಂ ಪೆರ್ಗಡೆಸಂಕಣಂಗೆ ಸರಿಯಾರ್ ಪೇಳಿನ್ನುಮಂತ್ರೀಶ್ವರರ್ ॥1014॥

ಸಂಕಣ್ಣನ ಹೆಂಡತಿ ಮಾಳವ್ವೆ

ಕಂಪಿಂ ಸೊಂಪಿಂ ಪೆಂಪಿಂ|ಪೊಂಪುಳಿವಡೆದಿರ್ದ ಮಲ್ಲಿನೊದವಿದ ಗುಣದಿಂ |
ಗುಂಪಿಲ್ಲದೆ ಪಡೆದಳ್ ಪತಿ|ಗಿಂಪಂ ಮಾಳವ್ವೆ ಮಾಲತೀಮಾಲೆಯವೋಲ್ ||1015||

ಪಲ್ಲವಪುರ

ಬಳಸಿದ ನಂದನಂಬಿಡಿದ ಪೂರ್ಣತಟಾಕದಿನಂತದಂ ಪುದುಂ |
ಗೊಳೆ ಮದಗಂಧಶಾಲಿವನದಿಂ ಬಿಡದೊಪ್ಪುವ ಕರ್ವುದೋಂಟದಿಂ||
ದೊಳಗೆ ಪೊದಳ್ವ ದೇವಕುಲಸಂಕುಲದಿಂ ದ್ವಿಜಸೌಧಗೇಹದಿಂ |
ದೆಳೆಗೆಸೆದತ್ತು ಪಲ್ಲವಪುರಂ ವಸುಧಾತಳರತ್ನನೂಪುರಂ ||1016||

ಒಂದೆಡೆ ವೇದನಾದಮಯಮೊಂದೆಡೆ ವಾದವಿನೋದರಮ್ಯಮ |
ತ್ತೊಂದೆಡೆ ವಿಸ್ಮೃತಸ್ಮೃತಿವಿಭೂಷಿತಮೊಂದೆಡೆ ತಂತ್ರಸೇವ್ಯಮಿ ||
ನ್ನೊಂದೆಡೆ ಶಬ್ದಶಾಸ್ತ್ರಪರಿಭಾವಿತಮೆಂಬಿನೆಗಂ ವಿದಗ್ಧತಾ |
ಮಂದಿರಮಾಯ್ತು ಪಲ್ಲವಪುರಂ ದ್ವಿಜಪಾವನಮಗ್ರಹಾರದೊಳ್ ||1017||

---

197 ಬೇಲೂರು 119. ಸು. 1185

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಹನ್ನವಣದ ನಕರಂಗಳು (ವರ್ತಕರು) ನಕರೇಶ್ವರದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಯಾದವಕುಳಪೂರ್ವಾದ್ರಿಯೊ | ಳಾದಿತ್ಯನಿದೊರ್ವನೆನಿಸಿ ತನ್ನಯ ತೇಜಂ |
ಮೇದಿನಿಗೆ ತೊಳಗೆ ಕಲಿವಿನ| ಯಾದಿತ್ಯನತಿಪ್ರತಾಪಯುತನುದಯಿಸಿದಂ ||1018||

ಎರೆಯಂಗ

ಎಱೆಯಂಗಂ ಗಂಡಗುಣ | ಕ್ಕೆಱೆಯಂ ಗಂಗಾಸರಿತ್ಸಮಪ್ರಥಿತಯಶ |
ಕ್ಕೆಱೆಯಂಗಂಗಾರ್ ಸಮನೆನಿ|ಪೆಱೆಯಂಗಂ ಗರ್ವಿತಾಂತಕಂ ತತ್ತನಯಂ ||1019||

ವಿಷ್ಣುವರ್ಧನ

ಗಡಿ ಮೂಡಲ್ ಕಂಚಿ ತೆಂಕಲ್ ಪೆಸರೆಸಕದ ಕೊಂಗಿತ್ತ ವಾರಾಶಿತೀರಂ |
ಪಡುವಲ್ ತತ್ಕೃಷ್ಣವೇಣ್ಣಾನದಿ ಬಡಗೆನೆ ದುರ್ವೃತ್ತರಂ ತೋಳ ಬಾಳಿಂ ||
ಕಡಿದಾದಂ ಗುಡ್ಡೆಯಿಟ್ಟುರ್ವರೆಗಿದು ಸತತಂ ಸೀಮೆಯೆಂಬಂತು ಬಲ್ಪಿಂ |
ದೆಡೆಗೊಂಡಂ ವಿಕ್ರಮಕ್ರೀಡೆಯಿನೆಸೆಯೆ ಧರಾಚಕ್ರಮಂ ವಿಷ್ಣುಭೂಪಂ ||1020||

## ನಾರಸಿಂಹ I

ಅರಿನೃಪಶಿಶುಹೃದ್ವಿದಳನ | ಕರಾಳಕರವಾಳಮುಖರನಖರನೃಸಿಂಹಂ |
ಪರರದನಿಸಂಘಸಿಂಹಂ | ನರಸಿಂಹಂ ವಿಪುಳವಿಕ್ರಮಂ ತತ್ತನಯಂ ||1021||

## ಬಲ್ಲಾಳ II

ನೆಲನಂ ಮುನ್ನಲೆದುದ್ಧತಾಸುರನಿಕಾಯಂ ಬದ್ಧರೋಷಾನ್ವಿತಂ |
ಕಲಿಕಲ್ಕಪ್ರಭವರ್ಕಳಾಗೆ ಧರಣೀಸಂರಕ್ಷಣಾರ್ಥಂ ಭುಜಾ ||
ಬಲಯುಕ್ತಂ ಕಲಿಕಾಲದೊಳ್ ನಿಖಿಳವಿದ್ವಿಡ್ದೈತ್ಯವಿಧ್ವಂಸಕಂ |
ಕಲಿ ಪನ್ನೊಂದನೆಯಂ ಮುರಾರಿ ನೆಗೞ್ದಂ ಬಲ್ಲಾಳಭೂಪಾಳಕಂ ||1022||

ಧರೆಯೊಳ್ ಮುನ್ನೆ ನರೇಂದ್ರನೆಂಬೆಸಕದಾಚೋೞಿಂಗೆ ಕೋಳ್ಪೋಗದಿಂ |
ಬರಿದಂ ನಚ್ಚಿನ ದೇವದುರ್ಗಮನದಂ ದಾೞಿಟ್ಟು ಪಾಂಡ್ಯಾವನೀ ||
ಶ್ವರಸಾಮ್ರಾಜ್ಯಸಮೇತಮೊಟ್ಟಜೆಯಿನೀತಂ ಕೊಂಡನುಚ್ಚಂಗಿಯಂ |
ಪರದುರ್ಗತ್ರಿಪುರತ್ರಿಣೇತ್ರನದಟಂ ಒಲ್ಲಾಳಭೂಪಾಳಕಂ ||1023||

## ದೇವೇಂದ್ರವ್ರತಿ

ಪಡೆದು ಮಡಗುವರ ಗಂಡಂ | ಪಿಡಿದ ಜಲಕ್ಕೆಯ್ದೆ ಬಲ್ಪುಗುಂದದ ಗಂಡಂ |
ಪೊಡರ್ವ ಪರಸಮಯಿಗಿವನೋ|ಗಡಿಸದ ಯಮದಂಡಮೆನಿಸಿದಂ ದೇವೇಂದ್ರಂ ||

## ಈಶಾನಶಕ್ತಿವ್ರತಿ

ಶ್ರೀಮತ್ಸತ್ಯಂ ದೃಢತ್ವಂ ಶಮೆ ದಮೆ ದಯೆ ವಾತ್ಸಲ್ಯಧರ್ಮಂ ಸ್ವಭಾವಂ |
ತಾಮೀತಂಗೀತನಂ ಪೋ ಕಲಿಮಲಿನಮಣಂ ಪೊರ್ದಿತಿಲ್ಲೆಂಬಿನಂ ತ ||
ನ್ನೀಮಾರ್ಗಂ ವಿಶ್ವಲೋಕಸ್ತುತಮೆನಿಸುವಿನಂ ಪುಣ್ಯಪಾತ್ರಂ ಸುವಿದ್ಯಾ |
ಧಾಮಂ ದೇವೇಂದ್ರನಿಂ ನೇರ್ಗೆಱೆಯನೆಸೆವನೀಶಾನಶಕ್ತಿವ್ರತೀಶಂ ||1025||

ಯತಿಮೂರ್ತಿಯ ಬಲಿ ತಾಪಸ | ಸುತನುವ ಸುರಧೇನು ವರ್ಣವೇಷದ ನಿಧಿ ವಿ|
ಶ್ರುತಮುನಿರೂಪದ ಪರುಸಂ | ಕ್ಷಿತಿಯೊಳಗೀಶಾನಶಕ್ತಿ ದಾನವಿನೋದಂ ||1026||

---

## 198 ಅರಸಿಯಕೆರೆ 39. 1185

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಬಿಟ್ಟಿಯಣ್ಣನು ಎತ್ತಿಸಿದ ಬೀರೇಶ್ವರದೇವಸ್ಥಾನಕ್ಕೆ ಕುರುವಕ್ಕದ ಎಕ್ಕಟಿಗಂಗರಕ್ಕರು ಭೂಮಿಯನ್ನು ಬಿಟ್ಟಂತೆ ಹೇಳಿದೆ.**

**ವಿಷ್ಣುವರ್ಧನ**

ಹರಿಸಂದೋಹವಿರಾಜಿತಂ ವಿವಿಧಪದ್ಮಾಲಂಕೃತಂ ಹಂಸಸಂ |
ಚರಣಪ್ರೌಢಮುದಾತ್ತವಿಕ್ರಮಗುಣೋದ್ಯತ್ಪುಂಡರೀಕಾಂಕಸೌಂ ||
ದರಮಾಗಿರ್ಪುದಱಿಂದೆ ಪದ್ಮವನದಂದಂ ಭಾವಿಸಲ್ ವಿಷ್ಣುಭೂ |
ವರನಿರ್ಪಾಪುರಮುಂ ಸುರೇಂದ್ರಪುರಮುಂ ವಿದ್ವಿಟ್ಪುರಾನೀಕಮುಂ ||1207||

ಇನತೇಜನಿಂದಿರಾವರ | ನಿನಜಸಮೋದಾರನಿಂದ್ರನಿಭವಿಭವನಿಳಾ |
ಜನವಿನುತನಿದ್ಧಸತ್ಕೀ | ರ್ತಿನಿಧಾನಂ ವಿಷ್ಣುಭೂಪನಂಗಜರೂಪಂ ||1028||

**ಬಲ್ಲಾಳ II**

ಫಣಿನಾಥಂ ಪಾಟಿ ಭೋಗಕ್ಕಮರಪತಿ ಸಮಂ ರೂಪಸಂಪತ್ತಿಗಬ್ಜೇ |
ಕ್ಷಣನುದ್ಯದ್ವಿಕ್ರಮಾಡಂಬರಕೆ ದೊರೆ ಮಹೇಶಂ ನಿಜಾಜ್ಞಾವಿಶೇಷ |
ಕ್ಕೆಣೆ ಧೀರೋದಾತ್ತಚಿತ್ತಕ್ಕಮಮ ಸರಿ ದಶಾಸ್ಯಾರಿ ದಾನಕ್ಕೆ ಮತ್ತಂ
ತೊಣೆ ಕರ್ಣಂ ತಾನೆನಲ್ಕೀವಸುಧೆಯೊಳೆಸೆದಂ ವೀರಬಲ್ಲಾಳಭೂಪಂ ||1029||

ಇಳೆ ಶುದ್ಧಸ್ಫಟಿಕೋಪಳಸ್ಥಗಿತಮಾಶಾಮಂಡಳಂ ದಿಗ್ವಧೂ |
ಕುಳವೇಣೀಕುಸುಮೋಪಹಾರರಚಿತಂ ನಾಕಂ ನಿಳಿಂಪೇಶನಿ ||
ರ್ಮಳಶುಂಡಾಳರದಪ್ರಭಾಧವಳಿತಂ ತಾರಾಪಥಂ ತಾರಕೋ |
ಜ್ವಳಿತಂ ತಾನೆನೆ ಕೊರ್ಬಿ ಪರ್ಬಿತು ಜಸಂ ಬಲ್ಲಾಳಭೂಪಾಳನಾ ||1030||

**ಅಂಗರಕ್ಕ**

ಧುರದೊಳಿದಿರ್ಚಿದ ಪಗೆವರ | ನುರವಣೆಯಿಂ ಗೆಲ್ವ ಶಕ್ಕು ರಿಪುಗಳ ಕುಟಿಲೋ |
ತ್ಕರಮಂ ನೆಗಱ್ಚಿ ಪತಿಯಂ | ಗರಕ್ಷೆಯಂ ಮಾಱ್ಪುದಂಗರಕ್ಕಂಗೆ ನಿಜಂ ||1031||

---

## 199 ಬೇಲೂರು 72. ಸು. 1185

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನು ಬೇಲೂರು ಚೆನ್ನಕೇಶವದೇವಸ್ಥಾನದಲ್ಲಿ ಜಾಳಂದರ, ಬಾಗಿಲುವಾಡ, ಅಡಿಗೆಯ ಮನೆ, ಉಗ್ರಾಣ, ಪ್ರಾಕಾರ, ವಾಸುದೇವಸರಸ್ಸು ಇವುಗಳನ್ನು ಮಾಡಿಸಿದಂತೆ ಹೇಳಿದೆ.**

**ಬಲ್ಲಾಳ II**

ಎಸೆಯಲ್ ಜಾಳಕಜಾಳಕಂ ದೃಢಕವಾಟಂ ದ್ವಾರಶಾಖಾಳಿ ಬಾ |
ಣಸು ಕೊಟ್ಟಾರಮುದಗ್ರವಪ್ರಮುದವಾಸಂ ವಾಸುದೇವಾಖ್ಯತೀ ||

ರ್ಥಸರಂ ಶ್ರೀವಿಜಯಾದಿಶಬ್ದವಿಳಸನ್ನಾರಾಯಣಂಗೊಲ್ದು ಕ |
ಲ್ವೆಸದಿಂ ತೆಂಕಣ ಚಕ್ರಿ ಮಾಡಿಸಿದನೀಬಲ್ಲಾಳಭೂಪಾಳಕಂ ||1032||

ಅಗಱಿಂ ಪಾತಾಳಮೆಂಟುಂ ದೆಸೆಗಳಗಲದಿಂದುದ್ದದಿಂ ವ್ಯೋಮಮಿಂತಿ |
ರ್ವಗಿಯಾಗಲ್ ಪೆರ್ಚಿ ಮೂಱುಂ ಭುವನದೊಳೆಸೆವುಚ್ಚಂಗಿಯಂ ಕೊಂಡ ಗಂಡಂ ||
ಮಗುೞ್ದಿಂ ಪಾಂಡ್ಯಂ ಶರಣ್ಬೊಕ್ಕೊಡೆ ಕರುಣೆಸಿ ತದ್ರಾಜ್ಯಮಂ ಕೊಟ್ಟು ಮೂಱುಂ|
ಜಗದೊಳ್ ವಿಖ್ಯಾತಿವೆತ್ತಂ ಹರಣಭರಣದಿಂ ವೀರಬಲ್ಲಾಳದೇವಂ ||1033||

---

## 200 ಬೇಲೂರು 175. 1186

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ದಂಡನಾಥ ವೀರಯ್ಯನು ದೊರೆಯ ಹೆಸರಿನಲ್ಲಿ ಒಂದಗ್ರಹಾರವನ್ನು ಮಾಡಿ ಅಲ್ಲಿ ಕೆರೆಗಳನ್ನು ಕಟ್ಟಿಸಿ ದೇವಸ್ಥಾನ ಗಳನ್ನು ನಿರ್ಮಿಸಿ ಅವಕ್ಕೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಬಲ್ಲಾಳ II

ನೆರೆದಾಂತ ಕೋಟಿಭಟರೊಳ್|ಪರಿದೊರ್ವನೆಯುಮ್ಮದೂರ ಧುರದೊಳ್ ಧರೆಯು|
ಚ್ಚರಿವಡೆ ನೆತ್ತರ ಕಡಲಂ | ಪರಿಯಿಸಿದಂ ಬಾಲಲೀಲೆಯೊಳ್ ಬಲ್ಲಾಳಂ ||1034||

ಚೋಳಂ ಮುತ್ತಿರೆ ಪನ್ನೆರಡುವರಿಸಕಂ ಕೋಳ್ಪೋಯ್ತೆ ತಾಂ ಪೋದನೆಂ |
ಬಾಳಾಪಂಬೆರಸಾರ್ದದೊಂದು ಪೊೞ್ತಿನಂ ಮೇಲ್ ಪೆರ್ಚುವುಚ್ಚಂಗಿಯಂ ||
ಹೇಳಾಸಾಧ್ಯಮದಾದುದೆಂದು ದಿವಿಜರ್ ಚೋದ್ಯಂಬಡುತ್ತೀಯೆ ಬ |
ಲ್ಲಾಳಾಳ್ದಂ ಗಿರಿದುರ್ಗಮಲ್ಲವೆಸರಂ ಬಲ್ಲಾಳಭೂಪಾಳಕಂ ||1035||

ಕಡುವೇಗಿ ಧರ್ಮಗುಣಮಂ | ಬಿಡುವುದು ಖರದೂಷಣಾನ್ವಿತಂ ಮೊದಲೆಯಂ|
ಪಡೆದುದು ಬಲ್ಲಾಳನ ದಿಟ|ನುಡಿಯೊಳ್ ಪಡಿಯಾಗಲಾರ್ಪುದೇ ರಾಮಶರಂ ||1036||

### ವೀರಯ್ಯನ ತಾಯಿ ಗಂಗಾದೇವಿ

ರತಿಯಂ ರೂಪಿಂದಂ ಪಾ | ರ್ವತಿಯಂ ಸೊಬಗಿಂದೆ ಮೈಮೆಯಿಂದಂ ಸಿರಿಯಂ |
ಸತಿ ಗಂಗಾದೇವಿಯರುಂ|ಧತಿಯಂ ಪತಿಭಕ್ತಿಯಿಂದೆ ನೂರ್ಮಡಿ ಮಿಗುವಳ್||1037||

### ವೀರಯ್ಯನ ಅಣ್ಣ ಅಚ್ಯುತ

ಅಚ್ಯುತಭಾವನಾಪರಿಣತಾಚ್ಯುತನಚ್ಯುತಪುಣ್ಯಮೂರ್ತಿ ಸಂ |
ದಚ್ಯುತರಾಜನೀತಿ ವಿನಯೋನ್ನತಿ ಸಜ್ಜನದಾನಮಾನಜಾ ||

ತಾಚ್ಯುತಕೀರ್ತಿ ಲಕ್ಷ್ಮೀ ವಿಜಯಂ ಯದುರಾಜನ ಮಂತ್ರಿಗೀಗಳಿಂ |
ತಚ್ಯುತದೇವನೆಂಬ ಪೆಸರಾದುದಿದಲ್ಲದೆ ದೇಸೆಗಾದುದೇ ||1038||

ವೀರಯ್ಯ

ನೆನೆದ ಮನಂ ಕೃತಾರ್ಥಮಿರದಱ್ತಿಯೆ ನೋಡುವ ಕಣ್ ಕೃತಾರ್ಥಮೊ |
ಲ್ದನುನಯದಿಂದೆ ಕೀರ್ತಿಸುವ ಜಿಹ್ವೆ ಕೃತಾರ್ಥಮುದಾತ್ತವೃತ್ತನಂ ||
ಧನದಳಿಪಿಂದೆ ತನ್ನನೊಸೆದರ್ಥಿಸುವರ್ಥಿಜನಂ ಕೃತಾರ್ಥಮೆಂ |
ದೆನೆ ವಿಭುವೀರದೇವನೆ ಕೃತಾರ್ಥನೆನಿಪ್ಪುದಿದಾವ ವಿಸ್ಮಯಂ ||1039||

ಇರ್ಮಡಿ ವಾಚಸ್ಪತಿಗೆ ಪ | ದಿರ್ಮಡಿ ಭಟ್ಟಿಗೆ ವಿನೂತಚಾಣಕ್ಯಂಗಂ |
ಸೂರ್ಮಡಿ ಮಂತಣದೊಳ್ ಸಾಸಿರ್ಮಡಿ ಯೌಗಂಧರಾಯಣಂಗೀವೀರಂ ||1040||

ಕಮಠಾಂಘ್ರಿ ಮೀನನಯನಂ | ಕಮಳಾನನಮಮಳಜೀವನಂ ವಿಪುಳಫಳಂ |
ಸಮನಿಸೆ ಕಟ್ಟಿಸಿದಂ ತತ್ಕ್ರಮಮಮರ್ದೆಸೆವಂತು ಕನ್ನೆಗೆಱೆಯಂ ವೀರಂ ||1041||

ಸುರಗಿರಿ ಶರನಿಧಿ ತನ್ನೊಳ್ | ಪಿರಿದುಂ ಮಚ್ಚರಿಪುದುದ್ದಗುಣ್ಪಿಂದವನೊ |
ತ್ತರಿಪಂ ಸುಮಂತ್ರಿವೀರಂ | ಸುರಭವನತಟಾಕದಿಂದಮಿದು ಮಂತ್ರಫಳಂ ||1042||

---

## 201 ಹೊನ್ನಾಳಿ 35. 1187

**ಈ ವೀರಗಲ್ಲಿನಲ್ಲಿ ಸಿಂದರಾಜನಾದ ಮಲ್ಲಿದೇವರಸನ ಆಜ್ಞೆಯಿಂದ ಚಟ್ಟನಾಯಕನು ತುರುಗೋಳಿನಲ್ಲಿ ಕಾದಿ ವೀರಸ್ವರ್ಗವನ್ನು ಪಡೆದನೆಂದು ಹೇಳಿದೆ.**

ಚಟ್ಟನೃಪಾಳಕಂಬೆರಸು ಪಾಂಡ್ಯನುಮೋವದೆ ನೇಲಿವರ್ತಿಯಂ |
ತೊಟ್ಟನೆ ಪಾಯ್ದು ಜೀವಧನಮೆಲ್ಲಮನಾಗಳೆ ಕೊಂಡು ಪೋಗೆ ಬೆ ||
ನ್ನಟ್ಟಿ ತೆರಳ್ಚಿ ತಳ್ತಿಱಿದು ಪೆರ್ವಡೆಯಂ ತುಱುವಂ ಮಗುಳ್ಚಿ ತಾಂ |
ಚಟ್ಟಿಯನಾಯಕಂ ಪದೆದು ಮೆಚ್ಚಿಸಿದಂ ಸುರಕನ್ಯೆಯರ್ಕಳಂ ||1043||

ಮಲ್ಲನೃಪಾಲಕಂ ಬೆಸಸೆ ಪೆರ್ಗಡೆಮಲ್ಲನ ಪುತ್ರನಾಜಿಯೊಳ್ |
ತಲ್ಲಳಮಪ್ಪಿನಂ ಪಗೆಗೆ ಸ್ವಱನೆ ಕಿಱ್ತಲಗಿಂ ತುರಂಗಮಂ ||
ಬಿಲ್ಲಣಿಯಂ ಕಱುತ್ತಿಱಿದು ಚೆಚ್ಚರಮಾತುಱುವಂ ಮಗುಳ್ಚಿ ತಾ |
ನಿಲ್ಲದೆ ಚಿಕ್ಕ ಚಟ್ಟನಮರಾಂಗನೆಯರ್ಕಳೊಳೊಲ್ದು ಕೂಡಿದಂ ||1044||

ಕಂಡದೊಳಿಂಡೆಯಾಡಿ ಬಿಸುನೆತ್ತರೊಳೋಕುಳಿಯಾಡಿ ಪೆರ್ಚಿ ಮಾ |
ಕೊರ್ವಂಡೊಡನೆಚ್ಚ ಪೂಣಿಗರ ಪಂದಲೆಯಂ ಪೊಡೆಸೆಂಡನಾಡಿದೊ ||

ಳ್ಗಂಡನಿವಂ ದಲೆಂದು ಪೊಸ ಮುತ್ತಿನ ಸೇಸೆಯನಿಕ್ಕಿ ಕೂಡೆ ಕೈ ।
ಕೊಂಡೊಡನೊಯ್ದುರಙ್ಗರಸೆಯರ್ ಕಲಿಚಟ್ಟನನಾಜಿರಂಗದೊಳ್ ||1045||

---

## 202 ಚಿಕ್ಕನಾಯಕನಹಳ್ಳಿ 9. 1187

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಬೂದಿಹಾಳ ಮಾಚಿಗೌಡ ಕೇತಗೌಡರು ಧರ್ಮೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಶಿವಸ್ತುತಿ

ಪತ್ತಿರೆ ಗಂಗೆಯ ಪನಿಗಳ್ । ಮುತ್ತಿನ ಜಾಸಿಗಮಿದೆನಿಸಿ ವಾಸುಗಿ ಸುಖದಿಂ ।
ಸುತ್ತಿರ್ದ ಜೂಟದಾದೇ।ವೋತ್ತಮನೆಮಗೊಸೆದು ಕುಡುಗೆ ಸುಖಸಂಪದಮಂ||1046||

### ವಿಷ್ಣುವರ್ಧನ

ಕೊಂಡಂ ತಳಕಾಡಂ ಕೆ । ಯ್ಕೊಂಡಂ ಮೇಲೆತ್ತಿ ಕೋಂಗನವಯವದಿಂದಂ ।
ಕೊಂಡಂ ವಿಷ್ಣುವೆ ಚೋಳನ।ಮಂಡಳಿಕರ ಮಂಡೆಗೊಂಡು ತನುಮಂಡಳಮಂ||1047||

### ಸಾಮಂತ ಬಿಟ್ಟಿದೇವ

ಪಲತೆಱದ ಹೊಯ್ಲು ರಂಜಿಸೆ।ಪಲತೆಱದೋಜೆಗಳ ತತಿಯೊಳಾಸನಗತಿಯೊಳ್।
ಪಲತೆಱದ ಮುಷ್ಟಿಯೊಳ್ ನಿ।ರ್ಮಲಮೆನೆ ತಿಳಿಪಲ್ಕೆ ಬಿಟ್ಟಿದೇವಂ ಬಲ್ಲಂ ||1048||

---

## 203 ತೊರಗಲ್ಲಿನ ಶಾಸನ

## (ಇಂಡಿಯನ್ ಅಂಟಿಕ್ವರಿ XII, 96). 1187

ಇದರಲ್ಲಿ ಬರ್ಮಭೂಪಾಲನ ಹೆಂಡತಿ ಸುಗ್ಗಲದೇವಿ ತಾನು ಪ್ರತಿಷ್ಠಿಸಿದ ಸುಗ್ಗಲೇಶ್ವರ ದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಭೂದೇವಿ

ಶರಧಿತರಂಗಮಾವರಿಸಿದಂಬರಮುನ್ನತಮೇರುಭೂಧರಂ ।
ಗುರುಕುಚಮಬ್ಜಷಂಡಮನುರಾಗಮನಾರ್ಜಿಸುವಾನನಂ ಲಸ ॥
ತ್ಪುರನಿಚಯಂ ವಿಭೂಷಣಮೆನಲ್ ಪರಿರಾಜಿಪ ನಂದನಾತಿವಿ ।
ಸ್ತರತೆಯನಾಂತು ವಿಶ್ವಧರಣೀವಧು ಶೋಭಿಸುಗುಂ ನಿರಂತರಂ ||1049||

### ತೊರಗಲೆದೇಶ

ನೆಱೆದ ಕವುಂಗು ಬಗ್ಗಿಸುವ ಕೋಗಿಲೆ ತಳ್ತಿಲೆವಳ್ಳಿ ಸುತ್ತಲುಂ ।
ತುಱುಗಿ ತಳಿರ್ತ ಮಾವುರನಿಕಾಯಮಗುರ್ವಿನ ಕರ್ವುದೋಂಟಮಿಂ ॥

ತಱಿಕೆಯ ಚಾರುನಂದನವನಾವಳಿ ರಾಜಿಸೆ ಶೋಭೆವೆತ್ತುದೀ |
ತೊಱಿಗಲೆ ಭೂತನಾಥವಿಭುವಿಂ ಬಳಸಿರ್ಪ ಮಲಪ್ರಹಾರಿಯಿಂ ||1050||

### ಬರ್ಮನ ತಂದೆ ಭೂತರಸ

ಕೇಳ್ವನ ಕಿವಿಯೊಳ್ ಗೂಂಟಮು|ನಾಱ್ವನೆಗಂ ಬೆಟ್ಟಿತೆನಿಸುವ್ರೊಟ್ಟಜೆವಿರುದಿಂ |
ದೇಱ್ವರೆಲಕ್ಕೆಯೊಳದಟು | ರ್ವೇಱ್ವನೆಗಂ ನಿಗಳವಿಕ್ಕಿದಂ ಭೂತನೃಪಂ ||1051||

### ಬರ್ಮಭೂಪಾಲ

ಟಂಟಣಿಸುತ್ತುಮಿರ್ಪರಿನೃಪಾಳರ ಹಿಂಡ ನಿಜಾಸಿದಂಡದಿಂ |
ಕಂಟೆಯುಬಾರದೊಳ್ ಸುಱಿಸಿ ಪಾಣಿಯುಬಾರದ ನೀರನೂಡಿ ನಿ ||
ಷ್ಕಂಟಕಮಾಗೆ ಮಾಡಿ ಪಡೆದಂ ಸಲೆ ದಂಡಿನ ಗೋವನೆಂಬುದಂ |
ಬಂಟರ ಬಲ್ಲಹಂ ನೆಗಱ್ದ ಬಲ್ಲಹರೊಳ್ ಕಲಿಬರ್ಮಭೂಭುಜಂ ||1052||

ಅರಿಭೂಪಾಳಕರೊಡ್ಡಿದಲ್ಲಿ ದಿಟದಿಂ ಪುಣ್ಯಾಂಗನಾನೀಕಸೌಂ |
ದರಮಂ ಕಂಡೆಡೆಯಲ್ಲಿ ವಂದಿನಿಕರಂ ಕೆಯ್ಯಾಂತೊಡಂತಲ್ಲಿ ನಿ ||
ರ್ವರವೀರಂ ಶುಚಿ ದಾನಿ ಶೂದ್ರಕನೊಳಾಗಾಂಗೇಯನೊಳ್ ಕರ್ಣನೊಳ್ |
ಸರಿಸಂ ದಂಡಿನ ಗೋವ ಬರ್ಮಮಹಿಪಂ ವಿಶ್ವಂಭರಾಭಾಗದೊಳ್ ||1053||

---

## 204 ಮುತ್ತಗೆಯ ಶಾಸನ

### (ಎಪಿಗ್ರಾಫಿಯಾ ಇಂಡಿಕ XV, 34). 1189

**ಇವರಲ್ಲಿ ಸೇವುಣರಾಜನಾದ ಭಿಲ್ಲಮನ ಮಂತ್ರಿಗಳಾದ ಪೇಯಿಯ ಮತ್ತು ಮಲ್ಲ ಎಂಬವರು ಲಕ್ಷ್ಮೀನರಸಿಂಹದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.**

### ನರಸಿಂಹದೇವರು

ಶ್ರೀನರಸಿಂಹದೇವನಸುರೇಂದ್ರವಿಶಾಲಕಠೋರರೌದ್ರವ |
ಕ್ಷೋನಗವಾಟನೋಗ್ರನಖವಜ್ರನಶೇಷಸುರಾಳಿಮೌಳಿಮಾ ||
ಳಾನವರತ್ನರಂಜಿತಪದಾಂಬುರುಹದ್ವಯನುದ್ಧಭಕ್ತಸಂ |
ತಾನಮನೊಲ್ದು ರಕ್ಷಿಸುತುಮಿರ್ಕೆ ಜಗತ್ತ್ರಯರಕ್ಷಣಕ್ಷಮಂ ||1054||

### ಸಮುದ್ರ

ಎನಸುಂ ಕಣ್ಗೆಯ್ದೆ ಚೆಲ್ವಂ ಪಡೆವುದು ವಿಚಳತ್ಕೂರ್ಮಪಾಠೀನಸಂಘ |
ಟ್ಟನಪಾಥೋದಂತಿದಂತಾಹತಮಕರಕರಕ್ಷೋಭಸಂಜಾತಕಲ್ಲೋ ||

ಲಸಿಕಾಯಕ್ಷಿಪ್ತಮುಕ್ತಾನಿಕರಮುರುತರೋದ್ವೀಸಫೇನವ್ರಜಾಸ್ಫಾ |
ಲನರೌದ್ರಸ್ಫಾರಧೀರಾರವವಿಜಿತಘನಧ್ವಾನಮಂಭೋನಿಧಾನಂ ||1055||

## ಜಂಬೂದ್ವೀಪ

ಆಜಳಧಿಪರಿವೃತಂ ರಾ | ರಾಜಿತವರವಸ್ತುವಿಸ್ತೃತಂ ಸಕಲಕಲಾ |
ಭ್ರಾಜಿತವಿಶ್ರುತವಿಬುಧಸ|ಮಾಜಂ ಸೊಗಯಿಪುದು ನೆಗೞ್ದ ಜಂಬೂದ್ವೀಪಂ||1056||

## ಮೇರು

ಗಗನಪ್ರೋಚ್ಚುಂಬಿನಾನಾಮಣಿಗಣವಿಳಸತ್ಕೂಟಕೋಟಿಪ್ರಭಾಭಾ |
ಸಿ ಗಳನ್ಮಂದಾರಪುಷ್ಪಪ್ರಕರಸುರಭಿಗಂಧಿಸ್ಥಳೀಸಂಚರದ್ದೇ ||
ವಗಣಂ ಕಣ್ಗೆಯ್ದೆ ಚೆಲ್ವಂ ಪಡೆವುದು ವರವಿದ್ಯಾಧರೀಚಾರುವೀಣಾ |
ಪ್ರಗತಪ್ರಸ್ತುತ್ಯಮಂದ್ರಧ್ವನಿಲಲಿತದರೀರುಂದ್ರಹೇಮಾಚಳೇಂದ್ರಂ ||1057||

## ಕುಂತಳದೇಶ

ಶ್ರೀಮಜ್ಜನಲಲಿತಂ ಸುಮ | ನೋಮಾಳಾರಮ್ಯಮುದ್ಭವಸ್ತುವ್ರಜಶೋ |
ಭಾಮಂಡನಮೆಣೆಯೆನಿಪುದು | ಭೂಮಹಿಳೆಯ ಕುಂತಳಕ್ಕೆ ಕುಂತಳದೇಶಂ ||1058||

## ಭಿಲ್ಲಮ

ಚತುರಂಭೋರಾಶಿವೇಳಾವಳಯಿತವಸುಧಾಚಕ್ರಮಂ ವಿಕ್ರಮಶ್ರೀ |
ಯುತನಾಗ್ಮೋದ್ದಂಡಚಂಡಪ್ರಥಿತಪೃಥುಭುಜಾದಂಡದೊಳ್ ನೂತ್ನರತ್ನೋ ||
ಜ್ಜ್ವಿತರಾಜಚ್ಚಾರುಕೇಯೂರದವೊಲೆಸೆದಿರಲ್ ತಾಳ್ದಿದಂ ಪಾದಪದ್ಮಾ |
ನತಶತ್ರುಕ್ಷತ್ರಜಾಳಂ ಯದುಕುಳತಿಳಕಂ ಭಿಲ್ಲಮಕ್ಷೋಣಿಪಾಳಂ ||1059||

## ಜೇಯಿಯ

ಹರನುರಿಗಣ್ಣ ಕಾಯ್ಪು ಸಿಡಿಲೆೞ್ತರಮುರ್ಬಿಪ ಬಾಡಬಾಗ್ನಿಯು |
ರ್ವ್ವರಮುಱಿಯಟ್ಟಿ ಕೊಳ್ವ ಕುಳಿಕಾಹಿಯ ಕೋಳ ಪೊಡರ್ಪು ಲೋಕಭೀ ||
ಕರತರಕಾಳಕೂಟದ ವಿಗುರ್ವಿಪ ಕೂಟವೆನಿಪ್ಪುದಾಂತ ದು |
ರ್ಧರರಿಪುಸಂಕುಳಕ್ಕೆ ವಿಭು ಜೇಯಿಯಸಾಹಣಿಯುಗ್ರವಿಕ್ರಮಂ ||1060||

## ಮಲ್ಲ

ಮಾರಿಯ ಮೂರಿ ರಕ್ಕಸನ ರೌದ್ರತೆ ನಂಜಿನ ಪುಂಜಮುಗ್ರಕಂ |
ಠೀರವದೆೞ್ತರಂ ಸಿಡಿಲ ಕಾಯ್ಪು ಕೃತಾಂತನ ಕೋಪದುರ್ಬು ಮಾ ||

ರಾರಿಯ ಭಾಳನೇತ್ರಶಿಖಿ ಸಂಗರರಂಗದೊಳಾಂತು ನಿಂದ ವೀ ||
ರಾರಿಗೆ ಸಂತತಂ ನೆಗಳ್ದ ಸಾಹಣಿಮಲ್ಲನ ಬಾಹುವಿಕ್ರಮಂ ||1061||

ಶಂಕರಾರ್ಯ

ಬಗೆ ಸಾಹಿತ್ಯರಸಪ್ರಪೂರ್ಣವಿಪುಳಸ್ತೋತ್ರಂ ಶ್ರುತಂ ವಾಗ್ವಧೂ |
ಟಿಗೆ ಕೈಗನ್ನಡಿ ಸೂಕ್ತಿ ಸೂನೃತಸುಧಾವಾರಾಶಿಮುಕ್ತಾಳಿ ನಾ ||
ಲಗೆ ಸಾರಸ್ವತಪೀಠಮಾರ್ಪು ವರವಿಪ್ರವ್ರಾತವಿದ್ವಜ್ಜನಾ |
ಳಿಗೆ ಕಲ್ಪದ್ರುಮಮೆಂದು ಧಾತ್ರಿ ಪೊಗಳ್ಗುಂ ಶ್ರೀಶಂಕರಸ್ವಾಮಿಯಂ ||1062||

---

## 205 ಅರಸೀಕೆರೆ 93. 1189

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನು ರಾಜಧಾನಿಯಾದ ಅರಸಿಯಕೆರೆಯಲ್ಲಿ ಬಲ್ಲಾಳೇಶ್ವರದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

ವಿನಯಾದಿತ್ಯ

ಯದುವಂಶಕಲ್ಪವೃಕ್ಷದೊಳೊದವಿದ ನಿಜಶಾಖೆ ತಾನೆನಲ್ಕುದಯಿಸಿದಂ |
ಸದಮಳಕೃಷ್ಣವಿಳಾಸಂ | ಮುದದಿಂ ಭುವನೈಕವೀರವಿನಯಾದಿತ್ಯಂ ||1063||

2 ನೆಯ ಬಲ್ಲಾಳನ ಮಹಿಷಿ ಉಮಾದೇವಿ

ಲಲನಾನಿರ್ಮಿತಿಕೌಶಲಂ ಪಲವು ಕಾಲಕ್ಕಬ್ಜಜಂಗಿಂದು ಸ |
ತ್ಫಲಮಾಯ್ತುತ್ತಮರೂಪೆಯುಂ ವಿಮಳೆಯುಂ ಬಲ್ಲಾಳವಿಶ್ವಂಭರೇ ||
ಶಲಸತ್ಕಾಮಿನಿಯಂ ಬುಧಾಳಿಗನಿಶಂ ಕೂರ್ತೀವುಮಾದೇವಿಯಂ |
ಲಲನಾರತ್ನಮನುದ್ಧಕೀರ್ತಿಯುತೆಯಂ ಪೆತ್ತುತ್ತಮಪ್ರಾರ್ಥಿಯಿಂ ||1064||

---

## 206 ನಾಗಮಂಗಲ 93. 1190

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಮಹದೇವನು ಕಲಿದೇವರಿಗೆ ಗ್ರಾಮವನ್ನು ಬಿಟ್ಟಂತೆ ಹೇಳಿದೆ.

ಶಿವಸ್ತುತಿ

ಶ್ರೀಮದ್ಬಾಳೇಂದುಲೇಖಾವಳಯವಳಯಿತವ್ಯೋಮಗಂಗಾತರಂಗ |
ಸ್ತೋಮೋದ್ದಾಮಾಭಿರಾಮಾತುಳಕಪಿಳಜಟಾಜಾಳಕಂ ಕೀರ್ತಿಲಕ್ಷ್ಮೀ ||
ಧಾಮಂ ಭಕ್ತವ್ರಜಕ್ಕಾಯುವನವಿಜಳಿತಂ ಶ್ರೀಯುಮಂ ಮಾಳ್ಕೆ ಧೀಶಂ |
ಸೋಮೇಶಂ ಸ್ನಿಗ್ಧಗೌರೀಸ್ತನಕಳಶರುಚಿವ್ಯಾಪಿವಾಮಾರ್ಧದೇಹಂ ||1065||

### ವಿಷ್ಣುವರ್ಧನ

ಪೊಡೆವ ಬಱಸಿಡಿಲ ಕಾಳನ|ಕುಡುದಾಡೆಯ ಹರನ ನೊಸಲ ಕಣ್ಣಾ ಪೊಡರ್ಪಂ |
ಪಡೆವುದು ಸಮರದೊಳೆಡಱಿದ | ಕಡುಗಲಿಗಳ ಕಣ್ಗೆ ಬಿಟ್ಟಿದೇವನ ಸಬಳಂ||1066||

---

## 207 ಕತ್ತೂರು 156. 1191

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಮಹಾಮಂಡಳಿಕ ಆಸಂದಿಯ ನಾರಸಿಂಗದೇವನ ಸೇವಕನಾದ ಮಸಣಯ್ಯನು ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ನಾರಸಿಂಗನ ತಂದೆ ಬಮ್ಮಭೂಪ

ಅರಿವರ್ಗಂ ರೌದ್ರಮಾರ್ಗಂಬೆರಸು ದಶಶಿರಾಕಾರದಿಂದಾಜಿಗೆಣ್ಮಲ್ |
ಶಿರಮಂ ತದ್ವೇಗದಿಂದಂ ದಶರಥತನಯಂ ಪಾಱಲೆಚ್ಚಂತೆ ಮಾಱಾಂ ||
ತರಿಯಂ ಕಣ್ಣಂಬಿನಾತಂ ರಿಪುಶಿರಮುರುಳಲ್ ಗಂಗವೀರಾರ್ಜುನಂ ಸಂ |
ಗರಧೀರಂ ಧಿಪ್ಪೆನೆಚ್ಚಂ ಜಯವಧು ನಲವಿಂ ನರ್ತಿಸಲ್ ಬಮ್ಮಭೂಪಂ ||1067||

### ನಾರಸಿಂಗ

ಅರಿಭೂಪಾಳಶಿರಂಗಳಿಂದೆ ಸೊರೆಯಂ ತದ್ಬಾಹುಸಂದೋಹದಿಂ |
ಕರೆಯಂ ದಂಡಿಗೆಮಾಡಿ ಬೆನ್ನೆಸೆವ ಬೀಎಂ ತಂತಿಯುಂ ಕಟ್ಟಿ ತ ||
ದ್ಧುರದೊಳ್ ಪಾಡುತುಮಿರ್ಪಳೊಲ್ದು ನಲವಿಂ ಶ್ರೀಕಾಂತೆಯಾನಂದದಿಂ |
ಧರಣೀಶೋತ್ತಮನಾರಸಿಂಹನೃಪನಂ ಸದ್ಭಾವದಿಂ ಸಂತತಂ ||1068||
ಕದನಕ್ಕಾಂತ ವಿರೋಧಿಭೂಪತಿಗಳಂ ಕೊಂದಿಕ್ಕಿದಾಬಾಹುವಿಂ |
ಮದಮಾತಂಗದ ಕೊಂಬನುರ್ಚಿ ಬಳೆಯಂ ತನ್ಮೌಕ್ತಿಕಾಹಾರಮಂ ||
ಪದುರಿಂದಂ ತುಡಿಸುತ್ತುಮಿರ್ಪನು ಜಯಶ್ರೀಕಾಂತೆಗಂ ಕಾಂತೆಗಂ |
ಮುದದಿಂ ಶ್ರೀನರಸಿಂಹಭೂಪತಿಯೆನಲ್ಕೇವಣ್ಣಿಪೆಂ ಶೌರ್ಯಮಂ ||1069||

---

## 208 ಅರಸಿಯಕೆರೆ 2. 1194

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಜವನೆಯ ಮಾವಂತನು ಕೋಳಿಗುಂದದಲ್ಲಿ ವಿನಾಯಕಪ್ರತಿಷ್ಠೆಯನ್ನು ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

## ಹೊಯ್ಸಳವಂಶ

ಸ್ವಸ್ತಿಶ್ರೀಯಿರ್ಪುದತ್ತಮ | ವಾಸ್ತು ಜಗಜ್ಜನಮನೋಹರಂ ಸುಜನಜನ |
ಪ್ರಸ್ತುತ್ಯಂ ವಿಶದಯಶೋ | ವಿಸ್ತಾರಿತಮೆಸೆವುದಮಮ ಹೊಯ್ಸಳವಂಶಂ ||1070||

## ಬಲ್ಲಾಳ II

ಪುದಿದಿರ್ದಟ್ಟಳೆ ಪೆರ್ಚಿದಾಳ್ವೆಱೆಯಗುರ್ವಾಗಿರ್ದ ಮೇಲ್ಕೋತ್ತಳಂ |
ಕದನಕ್ಕದ್ಭುತಮಪ್ಪ ಡೆಂಕಣಿ ಕರಂ ಗುಣ್ಪುಳ್ಳಗಱ ಕಾದಿ ಹೋ |
ಗದೆನಿಪ್ಪಗ್ಗದ ದುರ್ಗದೊಂದು ಬಲದಿಂದಂ ಜೈತುಗಂ ಕಾದೆ ಜೇ |
ಗದೆ ಕೊಂಡಂ ಕಲಿ ಲೊಕ್ಕಿಗೊಂಡಿಯನದಂ ಬಲ್ಲಾಳಭೂಪಾಳಕಂ ||1071||

---

## 209 ಅರಸಿಯಕೆರೆ 150. 1195

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಸಾಮಂತ ಕಾಟಯ್ಯ ಮುಂತಾದವರು ಮುಡವಡಿಯೂರ ಕೆರೆಯನ್ನು ಕಟ್ಟಿಸಿದಂತೆ ಹೇಳಿದೆ.**

### ವಿಷ್ಣುವರ್ಧನ

ಜಾರನೆ ವಜ್ರಿ ವಹ್ನಿ ಸುಡುವೋಜೆಯನುಳ್ಳವನರ್ಕಜಂ ಮಹಾ |
ಕ್ರೂರನೆ ನಿಷ್ಕೃಪಂ ನಿರುತಿ ಬಾಡವಪೀಡಿತನಬ್ಧಿ ಸಂಚಳಂ ||
ಮಾರುತನರ್ಥತತ್ಪರನೆ ಪಿತ್ರುಪನೀಶ್ವರನಾಳ್ದನೆಂದು ಲಕ್ಷ್ಮೀ ಸಂ |
ಚಾರಿಸಿ ನೋಡಿ ಕೂಡಿದಳು ವಿಷ್ಣುವಿನೊಳ್ ಬಗೆಗೊಂಡು ನಲ್ಮೆಯಿಂ ||1072||

---

## ✓210 ಹೊನ್ನಾಳಿ 51. 1195

**ಈ ವೀರಗಲ್ಲಿನಲ್ಲಿ ಸಿಂದರಾಜನಾದ ಮಲ್ಲಿದೇವರಸನ ಆಜ್ಞಾನುಸಾರವಾಗಿ ಕಲ್ಲೆಯನಾಯಕನು ಶತ್ರುಗಳೊಡನೆ ಕಾದಿ ವೀರಸ್ವರ್ಗವನ್ನು ಪಡೆದಂತೆ ಹೇಳಿದೆ.**

ಮಲ್ಲಿನೃಪಾಳಕಂ ಬೆಸಸೆ ಮಚ್ಚರದಿಂದಮೆ ಅಟ್ಟಿಪಳ್ಳಿಯಾ |
ಬಲ್ಲಣಿಯಂ ಕಱುತ್ತಿಱದಿದಿರ್ಚಿದರಂ ತವೆ ಕೊಂದು ಸೇನೆಯೊಳ್ ||
ತಲ್ಲಳಮಂ ತಗುಳ್ಚಿ ಕಟಿ ಪಲ್ಲಟಮಾಗಿರೆ ಪೊಯ್ದು ವೈರಿಯುಂ |
ಕಲ್ಲೆಯನಾಯಕಂ ಕರಮೆ ಮೆಚ್ಚಿಸಿದಂ ಸುರಕನ್ಯೆಯರ್ಕಳಂ ||1073||

ತರತರದಿಂದಮಾರ್ದಿಸುವ ಪೊಯ್ವಿಡುವಾಂಕುವ ನೂಂಕುವಾಂಕೆಗೊ |
ಳ್ವರನದಟಿಂ ಕಱುತ್ತಿಱದು ಸಂಗರದೊಳ್ ಜವನೊಕ್ಕಲಿಕ್ಕಿದಂ ||

ತಿರೆ ನೆಱೆ ಮಾಡಿದಂಗರಿಕ ಕಲ್ಲೆಯನಾಯಕನಂ ಮಹೋತ್ಸವಂ |
ಬೆರಸಿದಿರ್ಗೊಂಡರಚ್ಚರಸೆಯರ್ಕಳಿದೇಂ ಕಲಿಯೋ ವಿಳಾಸಿಯೋ ||1074||

---

## 211 ಹೊನ್ನಾಳಿ 37 1196.

**ಈ ವೀರಗಲ್ಲಿನಲ್ಲಿ ಸಿಂದರಾಜನಾದ ಮಲ್ಲಿದೇವರಸನ ಅಂಗರಕ್ಷಕ ಗಟ್ಟಯ್ಯನು ತುರುಗೋಳಿನಲ್ಲಿ ಕಾದಿ ಸ್ವರ್ಗಸ್ಥನಾದಂತೆ ಹೇಳಿದೆ.**

ತೊಟ್ಟನಲುಮ್ಮಾಬಾಯಿಯ|ಕಟ್ಟಾಳ್ಗಳ್ ಕುದುರೆವೆರಸು ತುಱುಗೊಳೆ ಕೆಟ್ಟಾ |
ಗಟ್ಟಿಯನಾಯಕನುಱದಿಱೆ|ದೊಟ್ಟಜೆಯಿಂದಾಂತವಂ ಮಗುಱ್ಚಿದನಾಗಳ್||1075||

ಜೊಪ್ಪಾದೇವಿಸಮೇತಮಿರ್ದು ಬೆಸಸಲ್ ಮಲ್ಲಕ್ಷ್ಮಮಾಪಾಲನಿಂ |
ತೊಪ್ಪಂಬೆತ್ತಿದಿರಾಂತ ವೈರಿಬಲಮಂ ಬೆಂಕೊಂಡು ತೀವ್ರಾಸಿಯಿಂ ||
ತೊಪ್ಪೆಂದೋವದೆ ಪೊಯ್ದನಂಗರಿಕರೊಳ್ ಬಲ್ಲಾಳ್ ಕರಂ ಗಟ್ಟಿಯಂ |
ಬಾಪ್ಪೆಂದೀಧರೆ ಬಣ್ಣಿಸಲ್ಕೆ ಪಡೆದಂ ಸ್ವರ್ಗಾಪವರ್ಗಂಗಳಂ ||1076||

ಭರದಿಂ ಮಲ್ಲೆಯನಾಯಕಪ್ರಿಯಸುತಂ ಗಟ್ಟಯ್ಯನುಗ್ರಾಜಿಯೊಳ್ ||
ತುರಗಂ ಮುತ್ತಿದೊಡಿಕ್ಕಿ ತತ್ತುರಗಮಂ ಬಲ್ಲಾಳ್ಗಳಂ ಖಡ್ಗದಿಂ || .
ಕರುಳುಂ ಕಂಡಮುಮಾಲಿ ಸೂಸುವಿನೆಗಂ ಶ್ರೀರಂಗ ಗೋವಿಂದೆನು |
ತ್ತುರುತೇಜಂ ಪೊಡೆದಪ್ಸರೋಗಣಯುತಂ ವೈಕೊಂತಮಂ ಪೊರ್ದಿದಂ ||1077||

---

## 212 ಹೊನ್ನಾಳಿ 38. 1196

**ಈ ವೀರಗಲ್ಲಿನಲ್ಲಿ ಸಿಂದರಾಜನಾದ ಮಲ್ಲಿದೇವರಸನ ಅಂಗರಕ್ಷಕ ಮೈಲೆಯನಾಯಕನು ಉಮ್ಮಾಬಾಯಿಯ ದಾಳಿಯಲ್ಲಿ ಕಾದಿ ಸತ್ತನೆಂದು ಹೇಳಿದೆ.**

ಉಮ್ಮಾಬಾಯಿಯ ದಾಱಿಯ | ದೊಮ್ಮೆಯೆ ಕವಿತಂದೊಡೆಯ್ದಿ ಸಂಗರ ದೆಡೆಯೊಳ್ |
ಉಮ್ಮಳಿಯಪ್ಪಿನಮರಿಬಳ|ವಮ್ಮಿ ಕಱುತ್ತಿಱದನುಱದೆ ನಾಯಕಮೈಲಂ ||1078||

ತೊಡೆ ಕಡಿವೋಪಿನಂ ಬರಿಯೆರಱಿಕ್ಕಿಲನೊಮ್ಮೆಯೆ ಜೆಕ್ಕೆವೋಪಿನಂ |
ನಡು ಬಿಳಿವೋಪಿನಂ ತಲೆ ಕಣಕ್ಕೆನಲಾಗಳುರುಳ್ದು ಪೋಪಿನಂ ||
ತೊಡರ್ದರನೋವದಂಗರಿಕಮೈಲೆಯನಾಯಕನಾತ್ಮಖಡ್ಗದಿಂ |
ಕಡುಗಲಿ ಪೊಯ್ದುವೊಯ್ದಿರದೆ ಮೆಚ್ಚಿಸಿದಂ ಸುರಕನ್ಯೆಯರ್ಕಳಂ ||1089||

ಭಾಸುರಕೀರ್ತಿವೆತ್ತೆಸೆವ ಮಲ್ಲನೃಪಾಳಕನಂಗರಕ್ಕನಾ |
ಕೇಸವನಾಯಕಪ್ರಿಯಸುತಂ ಕಲಿಮೈಲೆಯನಾತ್ಮಖಡ್ಗದಿಂ ||
ದಾಸುರಮಪ್ಪಿನಂ ರಿಪುತುರಂಗಬಲಂಗಳನಿಕ್ಕಿ ಗೆಲ್ದದಿಂ |
ಸಾಸಿಗನೊಳ್ಪುವೆತ್ತಮರಕಾಮಿನಿಯರ್ಕಳೊಳೊಲ್ದು ಕೂಡಿದಂ ||1080||

---

## 213 ಅರಸಿಯಕೆರೆ 23. 1197

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ತಂತ್ರಪಾಳಮಹಾದೇವನು ಬೀಚೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿಷ್ಣುವರ್ಧನ

ಚೋಳನ ಜೂಬು ಮಾಳವನ ಗೋಙ್ಮುರಿ ಚೇರನನಟ್ಟಿ ತಿಂಬ ಮಾ |
ಕಾಳಿ ವರಾಳನಂ ತುಱಿವಗಂಧಗಜಂ ಖಚನಳ್ಕೆಯಂಬು ನೇ ||
ಪಾಳನ ಬೆನ್ನ ಚೆಮ್ಮಟಿಗೆಯೀನಡೆತಂದನೆ ವೀರವಿಷ್ಣುಭೂ |
ಪಾಳಕನೆಂಬ ಸಂಭ್ರಮಮೆ ವೈರಿನೃಪಾಳರ ಮಂಡಲಂಗಳೊಳ್ ||1081||

---

## 214 ಬೇಲೂರು 77. 1198

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಚಂದಿಸೆಟ್ಟಿ ಬಾಚಲೇಶ್ವರದೊಳಗೆ ಹರಿಹರದೇವಾಲಯವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ವಿಷ್ಣುವರ್ಧನ

ತುಳುದೇಶಂ ಚಕ್ರಗೊಟ್ಟಂ ತಳವನಪುರಮುಚ್ಚಂಗಿ ಕೋಳಾಲಮೇಱಿಂ |
ಮಲೆ ವಲ್ಲೂರ್ ಕಂಚಿ ಕೊಂಗರ್ಬಿಸುವ ಹಡಿಯಘಟ್ಟಂ ಬಯಲ್ನಾಡು ನೀಳಾ ||
ಚಳದುರ್ಗಂ ರಾಯರಾಯೋತ್ತಮಪುರಿ ತೆರೆಯೂರ್ ಕೋಯತೂರ್ ಗೊಂದವಾಡಿ |
ಸ್ಥಳಮಂ ಭ್ರೂಭಂಗದಿಂ ಕೊಂಡತುಳಭುಜಬಳಾಟೋಪನೀವಿಷ್ಣುಭೂಪಂ ||1082||

### ಬಲ್ಲಾಳ II

ನೃಗನಹುಷನಳಭಗೀರಥ | ಸಗರಪುರೂರವಯುಧಿಷ್ಠಿರಾದಿನೃಪಾಳ |
ರ್ಗಗಣಿತಮಹಿಮಂ ನೂರ್ಮಡಿ | ಮಿಗೆವಂದಂ ನಿಜಚರಿತ್ರದಿಂ ಬಲ್ಲಾಳಂ ||1083||

ಅಸುಹೃತ್ಪಾಂಡ್ಯನೃಪಾಳರಕ್ತಜಳದಿಂ ನೀರೂಡಿ ಸುಟ್ಟಿಂಬಿನಂ |
ಮಸೆದಂ ಬಿಲ್ಲನಃಮಸ್ತಶಾಣತಳದೊಳ್ ಘೋರೆಂಬಿನಂ ಜೈತುಗಿ ||

ಪ್ರಸೃತಾಸ್ಯಾಂಬುಜಕೋಶದೊಳ್ ಕಿಱಿವುವಂ ಘರ್ಮಾಂಬಿಸಂ ಕೂರ್ಪ್ಪು ದ |
ಳ್ಪಿಸೆ ಬಲ್ಲಾಳನೃಪಾಳಕಂ ನಿಜಭುಜಪ್ರೌಢಪ್ರತಾಪಾಸಿಯಂ ||1084||

## 215 ಸೊರಬ 140. 1198

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಂತ್ರಿ ಮಹದೇವದಂಡನಾಯಕನ ಎರಗಜಿನಾಲಯವನ್ನು ಮಾಡಿಸಿ ಶಾಂತಿನಾಥನನ್ನು ಪ್ರತಿಷ್ಠಿಸಲು, ಎಕ್ಕಲರಸ ಮುಂತಾದವರು ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಬಲ್ಲಾಳ II

ಭುವನಂ ಭೂಚಕ್ರಚಕ್ರಾಯುಧನೆನೆ ನೆಗೞ್ದಂ ವೀರಬಲ್ಲಾಳನುರ್ವೀ |
ಸ್ತವನೀಯಪ್ರಾಂಶುಮತ್ಸ್ಯಚ್ಛವಿ ಸುಚರಿತಕೂರ್ಮೋದಯಂ ಸಾರಸೌಕ ||
ರ್ಯವಿಳಾಸಂ ವಿಕ್ರಮಶ್ರೀನರಹರಿ ಪರಮಂತ್ರಿಕ್ರಮಂ ರಾಮರಾಮೋ |
ತ್ಸವರಾಮಾನಂದಿ ವಿದ್ಯಾಸುಗತನತಿಕಲಿಪ್ರಾಭವಪ್ರೌಢತೇಜಂ ||1085||

ಬಲವದ್ಬಲ್ಲಾಳನುಗ್ರಾಹವಪಟಹರವಂ ಕರ್ಣಮಂ ತಾಗೆ ವಿದ್ವಿ |
ಟ್ಕುಲಕಾಂತಾಕರ್ಣಪತ್ರಂ ಕೆಡೆವುದಣಕಮಲ್ತೊಂದೆ ಕೇಳ್ ವಿಸ್ಮಯಂ ಕ ||
ಣ್ಮಲರಿಂ ಬಾಷ್ಪಾಂಬು ಕೆಯ್ಯಿಂ ಕಡಗಮಡಿಗಳಿಂ ನೂಪುರಂ ವಕ್ತ್ರದಿಂ ಸುಯ್ |
ತಲೆಕಟ್ಟಿಂ ಮಾಲೆವೂವಾಕೆಗಳ ಗಳಕದಿಂ ಬೀೞ್ವುದುತ್ತಾರಹಾರಂ ||1086||

ಜಿತಧಾತ್ರೀಚಕ್ರಚಕ್ರಾಧಿಪ ನೃಪವರ ಬಲ್ಲಾಳ ಕೇಳ್ ನಿನ್ನೊಳಾಂತು |
ದ್ಧತವೀರಾರಾತಿಯೂಥಂ ವಿಗತವಿಭವಮಾಗಿರ್ದೊಡಂ ರಂಜಿಕುಂ ವಿ ||
ಶ್ರುತನಾನಾವಾಹಿನೀಸಂಕುಲಪರಿಗತಶೋಭಾನುಕೂಲ್ಯಂ ಸದಾಸೇ |
ವಿತರಾಜದ್ರಾಜವಂಶಂ ಸಕಲಕವಿನಿಕಾಯಸ್ವನಾಕೀರ್ಣಕರ್ಣಂ ||1087||

ಎನಸುಂ ತೀವ್ರಪ್ರತಾಪಕ್ಕಗಿದು ದಿನಕರಂ ಮಿತ್ರನಾಗಿರ್ದಪಂ ನೆ |
ಟ್ಟನೆ ರಾಜಂ ರಾಜನಾಮಂ ತನಗೆ ಪಗೆಯೆನಿಪ್ಪುಮ್ಮಳಂ ಪೆರ್ಚೆ ಕಂದಿ ||
ರ್ಪನವಂ ಮತ್ತಾವನಣ್ಮಂ ಮೆಱೆವನದಟಿನಿಂ ತೋರ್ಪನಾವಂ ಮಹೋಗ್ರಾ |
ರಿನೃಪಾಳಂ ವಿಶ್ವಭೂಚಕ್ರದೊಳಲೆ ಚಲದಿಂ ವೀರಬಲ್ಲಾಳ ನಿನ್ನೊಳ್ ||1088||

ಆನೊಲವಿಂದೆ ಬಣ್ಣಿಸದೊಡೇಂ ಗಳ ದಕ್ಷಿಣಚಕ್ರಿ ಯುದ್ಧದೊಳ್ |
ತಾನಸಹಾಯಶೂರನೆನಿಪುನ್ನತಿಯಂ ರಿಪುರಾಯಸೇವುಣಾ ||
ನೂನಗಜಾಶ್ವಸದ್ಭಟಬಲಂಗಳನಳ್ಕಱದೊಂದೆ ಮೆಯ್ಯೊಳೊಂ |
ದಾನೆಯೊಳೊಕ್ಕಲಿಕ್ಕಿದ ಪರಾಕ್ರಮದುನ್ನತಿ ತಾನೆ ಹೇೞದೇ ||1089||

### ಬನವಾಸಿದೇಶ

ಪಲವುಂ ಪೂರ್ಣತಟಾಕದಿಂ ಬೆಳೆದ ನಾನಾಶಾಳಿಕೇದಾರದೊ |
ಳ್ಪೊಲದಿಂ ವಾರಿಜಷಂಡದಿಂ ಪರಿಮಳಭ್ರಾಂತಾಳಿಮಾಳೋದ್ಘಪು ||
ಷ್ಪಲತಾಸಂಕುಳದಿಂ ಫಳೋನ್ನಮಿತಚೂತಾದಿಕ್ಷ್ಮಾಜಂಗಳಿಂ |
ನೆಲೆಯಾಗಿರ್ಪುದು ಮನ್ಮಂಥಂಗೆ ಬನವಾಸೀದೇಶಮೆತ್ತೆತ್ತಲುಂ ||1090||

### ಉದ್ಧರೆಯಪುರ

ಸರಸಿಜವಕ್ತ್ರದಿಂ ಕುಮುದಲೋಚನದಿಂ ವಿಳಸಲ್ಲತಾಂಗದಿಂ |
ಸುರುಚಿರಪಲ್ಲವಾಧರದಿನಾಶುಕಭಾಷಣದಿಂದೆ ಮಲ್ಲಿಕಾ ||
ಪರಿಮಳದಿಂ ಮದಾಳಿಕುಳಕುಂತಳದಿಂ ವನಲಕ್ಷ್ಮಿ ರೂಪನು |
ದ್ಧರೆಯ ಪುರೋಪಕಂಠವನದೊಳ್ ಪಡೆದೊಪ್ಪುವಳಾವಕಾಲಮುಂ ||1091||

### ಎರಗ

ಮಱೆದುಂ ಪರಸತಿಯಗ್ಗರ್ | ಱ್ಕೆಱೊಳಚ್ಯುತನಲ್ಲದನ್ಯದೈವಕ್ಕಾರ್ಪಂ |
ಮಱೆಯಿಸ ನಿಜಧನಲೋಭ|ಕ್ಕೆಱಗನೆಱಗನೆಱಗನೆಱಗನೃಪನೆನೆ ನೆಗೞ್ದಂ||1092||

### ಎಕ್ಕಲರಸ

ಜವನಂ ಜಕ್ಕುಲಿಪಂ ಕಡಂಗಿ ಸಿಡಿಲಂ ಮಾರ್ಕೊಳ್ವನಾಭೀಳಕಾ |
ಳವಿಷೋಗ್ರಾಹಿಯನೆತ್ತಿ ಮಾರಿಡುವನೌರ್ವಜ್ವಾಳೆಯಂ ಮಟ್ಟಿಗಿಪಂ ||
ತವಿಪಂ ತೀವ್ರನಿಶಾಟದಗ್ಗಳಿಕೆಯಂ ತಾನೆಂದೊಡಿಂದುರ್ಕಿ ನಿ |
ಕ್ಕುವಮಾರಾಂತಪರೆಕ್ಕಲಕ್ಷಿತಿಪನಂ ಸಂಗ್ರಾಮರಂಗಾಗ್ರದೊಳ್ ||1093||
ದವರೂಪಂ ರಿಪುಕಾನನಕ್ಕೆ ಪವಿರೂಪಂ ಶತ್ರುಶೈಲಕ್ಕೆ ಬಾ |
ಡವರೂಪಂ ದ್ವಿಷದರ್ಣವಕ್ಕೆ ನಿಜತೀವ್ರಾತ್ಯುಗ್ರಕೋಪಪ್ರರೂ ||
ಪವೆನಲ್ ಪೊಂಗಿ ಕಡಂಗಿ ನಿಂದತುಳಬಾಹಾಗರ್ವದಿಂದಾಂಪರಾ |
ರವನೀಪಾಳಕರೆಕ್ಕಲಕ್ಷಿತಿಪನಂ ಸಂಗ್ರಾಮರಂಗಾಗ್ರದೊಳ್ ||1094||
ಇಂ ಬೆಸಗೊಳ್ವುದೇಸೊ ಸುಭಟೋತ್ತಮನೆಕ್ಕಲದೇವನಿಷ್ಟರೊಳ್ |
ನಂಬುಗೆದಪ್ಪಿದಂದು ಪರಕಾಂತೆಯೊಳೊಲ್ದೊಡಗೂಡಿದಂದು ಲೋ ||
ಭಂಬಿಡಿದರ್ಥದತ್ತಳಿಪಿದಂದಿದಿರಾಂತೊಡೆ ಕೊಲ್ಲದಂದು ಕೇ |
ಳಂಬುಧಿ ಮೇರೆಯಿಂ ತೊಲಗುಗುಂ ತಳರ್ಗುಂ ನೆಲೆಯಿಂ ಸುರಾಚಳಂ ||1095||

ತಕ್ಕತನಕ್ಕೆ ಮಿಕ್ಕ ಪರಕಾಮಿನಿಯರ್ಕಳನೆಮ್ಮ ತಂಗೆಯೆ |
ಮ್ಮಕ್ಕನೆನುತ್ತೆ ನಂಬೆ ಮೊಱೆಗೊಂಡೊಡಗೂಡುವ ಸಾಧುಗಳ್ಳರೇ ||
ತಕ್ಕುಪಯೋಗ್ಯವಾಮಹಿಪರೇಂ ಗಳ ಪೋಲ್ವರೆ ಶೌಚದೇಱೆಗಯಿಂ |
ದೆಕ್ಕಲಭೂಪನಂ ಪರವಧೂವಿನುತೋದರಪದ್ಮಗರ್ಭನಂ ||1096||

ಗತಿ ಭಾವಂ ಚಾರಿ ಸೂತ್ರಂ ನಿಱಿಸಳವಿ ಒಳಂ ಕಾಣ್ಕೆ ಬಲ್ಟೋಜೆ ಕಾಯ್ಪು |
ನ್ನತಿ ಗಾಢಂ ಲಾಗು ಬೇಗಂ ತೆಱಿಪು ಪಸರಮಾರಯ್ಕೆ ತೀರ್ಕೈಕೆ ಕೂರ್ಪಂ ||
ಕಿತಮಾಕಾರಂ ತಡಂ ಕಿತ್ತಡಮೆನಿಪ ಭೃಗುಪ್ರೌಢಿಯಿಂ ಕೊಲ್ವನುಗ್ರಾ |
ಹಿತನಂ ಮಾಱಿಂಕಮಂ ಮಾರ್ಮಲೆದೊಡೆ ಜಲದಿಂದೆಕ್ಕಲಕ್ಷೋಣಿಪಾಳಂ ||1097||

## ಬೊಪ್ಪ

ಎರೆದರ್ಥಾರ್ಥಿಜಯಕ್ಕೆ ಕಲ್ಪಕುಜಮಿರ್ಪಂತಿರ್ಪನಂ ಬೊಪ್ಪನಂ |
ವರವಂಶಾಂಬುಧಿವರ್ಧನಕ್ಕೆ ಶಶಿಯಿರ್ಪಂತಿರ್ಪನಂ ಬೊಪ್ಪನಂ ||
ನಿರವದ್ಯಾಚರಣಕ್ಕೆ ತೀರ್ಥಕರನಿರ್ಪಂತಿರ್ಪನಂ ಬೊಪ್ಪನಂ |
ಧರೆ ಬಣ್ಣಿಪ್ಪುದುದಾತ್ತಕೀರ್ತಿವನಿತಾಕಂದರ್ಪನಂ ಬೊಪ್ಪನಂ ||1098||

## ಸೋಮಚಮೂಪ

ಸೂರಿಜಕೋರಸೋಮನನವದ್ಯಕಳಾಗಮಸೋಮನುದ್ಧತೋ |
ಗ್ರಾರಿಸರೋಜಸೋಮನತಿನಿರ್ಮಳವಂಶಪಯೋಧಿಸೋಮನಾ ||
ಚಾರವನಪ್ರವರ್ಧನವಸಂತಕಸೋಮನಶೇಷಭವ್ಯಹೃ |
ತ್ಕೈರವಸೋಮನೆಂದೆನಿಪ ಸೋಮಚಮೂಪನಿದೇನುದಾತ್ತಸೋ ||1099||

## ರಾಮಚಮೂಪ

ಪರಸೇನಾಜಯವಿಕ್ರಮೋನ್ನತಿಯೊಳಾದಂ ಭೀಮನುಂ ರಾಮನುಂ |
ಧರಣೀಸ್ತುತ್ಯಕಳಾವಿಳಾಸದೊದವಿಂದಾಸೋಮನುಂ ರಾಮನುಂ ||
ವರನಾರೀಜನಮೋಹನಾಕೃತಿಯೊಳುದ್ಯತ್ಕಾಮನುಂ ರಾಮನುಂ |
ಸರಿಯೆಂದೀಜಗಮೆಯ್ದೆ ಬಣ್ಣಿಪುದು ಕೀರ್ತಿಪ್ರೇಮನಂ ರಾಮನಂ ||1100||

## ಕೇಶವ

ಶ್ರೀರಾಮನನುಜನೆನಿಸಿದ | ನಾರಾಮಚಮೂಪನನುಜನುರುಲಕ್ಷ್ಮಣವಿ |
ಸ್ತಾರಸುಮಿತ್ರಾಧಿಕಪು | ಣ್ಯಾರಾಮಂ ಕೇಶವಂ ಜಗಜ್ಜನವಿನುತಂ ||1101||

ಎರೆದಂದಾಗಳೆ ಮಾಣಿಪಂ ಬುಧವಿಪಕ್ಷಸಂಕ್ಲೇಶವಂ ಕೇಶವಂ |
ಬಿರುದಿಂದಾಂತರನೆಯ್ದಿಪಂ ಸ್ಫುರದರಣ್ಯೋದ್ದೇಶವಂ ಕೇಶವಂ ||
ಶರಣಾಗೆಂದೊಡೆ ನೀಡುವಂ ಬಹಳಬಾಹಾಪಾಶವಂ ಕೇಶವಂ |
ಚಿರಕೀರ್ತಿಪ್ರಭೆಯಿಂ ಬೆಳಪ್ಪನಖಿಳಾಶಾಕಾಶವಂ ಕೇಶವಂ ||1102||

## ಮಹದೇವಮಂತ್ರಿ

ಮಱಿಸಿ ಪರಾರ್ಥಮಂ ತೆಗೆವ ಮೋಳಿಸಿ ಪೊರ್ದಿ ಪರಾಂಗನಾರತ |
ಕ್ಕೆಱಗುವ ನಂಬಿದಾಳ್ದನಿರೆ ಮತ್ತೆ ಪತಿತ್ವಮನಾಸೆಗೆಯ್ವು ಬೇ ||
ಸಱನುಸಿರ್ವನ್ಯಮಂತ್ರಿನಿಕರಕ್ಕದಟಿಂ ತೊಡರಿಕ್ಕಿದಂ ಗಡೇ |
ನಱೆಯಿರೆ ಸಾಮಿವಂಚಕರ ಗಂಡನನೀಮಹದೇವಮಂತ್ರಿಯಂ ||1103||

ಪರವಧು ರಂಭೆಗಂ ರತಿಗಮಗ್ಗಳವೊಪ್ಪುವೊಡಂ ಪರಾರ್ಥಮೀ |
ಶ್ವರಸಖನರ್ಥದಿಂ ವರುಣನರ್ಥದಿನೂರ್ಜಿತಮಾಗಿ ಬಪ್ಪೊಡಂ ||
ಪರನೃಪನೊಲ್ದು ಮನ್ನಿಸುವೊಡಂ ಪಿರಿದೀವೊಡಮತ್ತ ಚಿತ್ತಮೋ |
ಸರಿಸದಿದೇಂ ಮಹತ್ವದೊಡವೋ ಮಹಿಯೊಳ್ ಮಹದೇವಮಂತ್ರಿಯಾ ||1104||

ಬಹುವಕ್ತ್ರಂ ಪದ್ಮಗರ್ಭಂ ದನುಜಗುರು ಗುರುದ್ವೇಷಿ ಜೀವಂ ಸುರಾಧೀ |
ಶಹಿತಾತ್ಮಂ ಸುಪ್ರಬುದ್ಧೋದ್ಧವನೆನಿಪವನುಂ ತಾನಕಾರ್ಯಪ್ರಯುಕ್ತಂ ||
ಮಹಿಯೊಳ್ ಪೋಲ್ವನ್ನನಾವಂ ತನಗೆನೆ ನೆಗಳ್ದಂ ವಿಶ್ವಲೋಕಪ್ರಸಿದ್ಧಂ ||
ಮಹದೇವಂ ಮಂತ್ರಿಮುಖ್ಯಂ ಮನುಮುನಿಚರಿತಂ ಮಂತ್ರಯುದ್ಧಪ್ರವೀಣಂ||1105||

ಗೆಡೆಗೊಂಡಂ ಧನ್ಯನೊಲ್ದೋಲಗಿಸಿದನೆ ಕೃತಾರ್ಥಂ ಮನಂಬೆತ್ತು ಮೆಯ್ಯಾ |
ರ್ದೊಡನುಂಡಂ ಪುಣ್ಯಪುಂಜಂ ಪೊರೆವ ನೃಪನೆ ನೈರ್ಮಲ್ಯಧರ್ಮಾನುಸಂಗಂ ||
ನುಡಿಗಲ್ತಂ ವಿಶ್ವವಿದ್ವಜ್ಜನವಿನುತಕಳಾಪ್ರೌಢನೆಂದಂದು ತನ್ನೊಳ್ |
ಪಡಿಯಾವಂ ಮಂತ್ರಿವರ್ಯಂ ಬುಧನಿಧಿ ಮಹದೇವಂಗೆ ಮತ್ತೋರ್ವನನ್ಯಂ ||1106||

ಮತಿ ಕೃತಿಗಳ್ಗೆ ದೃಷ್ಟಿಯೆನಿಸಿರ್ಪುದು ತನ್ನಯ ಸೂಕ್ತಿಶಕ್ತಿ ಭಾ |
ರತಿಗೆ ವಿವೇಕಮಂ ಕಲಿಸುವೋಜುವೊಲಿರ್ಪುದು ಚಾರುಸತ್ಕಳಾ ||
ಜ್ಞತೆ ಚತುರಾನನಂಗಱವನೀವೆಱವಟ್ಟೆನಿಸಿರ್ಪುದೆಂದು ವಂ |
ದಿತತಿ ನಿರಂತರಂ ಪಡೆದು ಬಣ್ಣಿಪುದೀಮಹದೇವಮಂತ್ರಿಯಂ ||1107||

### ಮಹದೇವನ ಹೆಂಡತಿ ಲೋಕಲದೇವಿ

ಅತನು ಮನಃಪ್ರಿಯಂ ರತಿಗೆ ಲಕ್ಷ್ಮಿಗೆ ಭಾವಿಪೊಡೊರ್ವ ಗೋವಳಂ |
ಪತಿ ಗಿರಿರಾಜಪುತ್ರಿಗೆ ಮರುಳ್ಗಿಱಿಯಂ ವರನೆನ್ನ ಕಾಂತನ ||
ಚ್ಯುತನತಿಸೇವ್ಯನೂರ್ಜಿತಕಳಾಧರನೆಂದಿಱಿಕೆಯ್ವಳೀಮಹಾ |
ಸತಿ ಮಹದೇವಮಂತ್ರಿಯ ಮನಃಪ್ರಿಯೆ ಲೋಕಲದೇವಿ ಸಂತತಂ ||1108||

ಚತುರತೆಗಾದ ಸೈಪು ಸುಚರಿತ್ರತೆಗಾದ ಪೊಡರ್ಪು ಜೈನದು |
ನ್ನತಿಕೆಗೆ ಸಾರ್ದ ಪುಣ್ಯಮಭಿಮಾನಕೆ ತಳ್ತ ಮಹತ್ವಮೀಜಗ ||
ನ್ನುತಮಹದೇವಮಂತ್ರಿಯ ಮನಃಪ್ರಿಯೆ ಲೋಕಲದೇವಿ ನಿನ್ನ ಸ |
ತ್ಪತಿಹಿತದಿಂದಮಾಯ್ತೆನಲದೇವೊಗಱ್ಪಂ ನಿಜಸದ್ಗುಣಂಗಳಂ ||1109||

### ಕುಲಭೂಷಣವ್ರತಿ

ತನಗಾದಂ ಪರಿಚಾರಿಕಾಕೃತಿ ಯಶಶ್ಶ್ರೀ ಚಾರುಚಾರಿತ್ರಕಾ |
ಮಿನಿ ರಾಜಚ್ಛಮರೀಜಕಾಂತೆ ಮನೆಗಾದಿರ್ಪಾಕೆ ನಿಚ್ಚಂ ದಯಾಂ ||
ಗನೆ ವಾಗ್ವಲ್ಲಭೆ ಬುದ್ಧಿವಾನಸೆ ಕರಂ ಭಾಸ್ವತ್ತಪೋಲಕ್ಷ್ಮಿ ಸ |
ಜ್ಜನಮಾಗಲ್ ಕುಲಭೂಷಣವ್ರತಿವರಂ ಸ್ತ್ರೀರಾಜ್ಯದಿಂ ರಾಜಿಪಂ ||1110||

### ಸಕಲಚಂದ್ರ

ಶ್ರೀವನಿತೆಗೆ ಮೊಗಮಿತ್ತು ತ|ಪೋವನಿತೆಗೆ ಮೆಯ್ಯನೊಡ್ಡಿ ಮುಕ್ತ್ಯಂಗನೆಯಂ|
ಭಾವಿಸುವ ಬಮ್ಮಚಾರಿಯ | ನೇವೊಗಱ್ವುದೊ ಸಕಲಚಂದ್ರಭಟ್ಟಾರಕರಂ ||1111||

---

## 216 ನಾಗಮಂಗಲ 47. 1199

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಸಾಮಂತ ಮಂಡಲಸ್ವಾಮಿ ಬೆಳ್ಳೂರಲ್ಲಿ ಮಂಡಲೇಶ್ವರದೇವಾಲಯವನ್ನು ಕಟ್ಟಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ಮಂಡಲಸ್ವಾಮಿ

ರವಿಸುತನೊಂದು ನನ್ನಿ ಪವಮಾನತನೂಜನದೊಂದು ಬಲ್ಪು ವಾ |
ಸವಸುತನೊಂದು ವಿಕ್ರಮದನುಕ್ರಮಮಶ್ವಿನಿದೇವಪುತ್ರರೊಂ ||
ದವಿಚಳಮಪ್ಪ ಶಸ್ತ್ರದ ನೆಗಱ್ತೆಯ ಶಾಸ್ತ್ರದ ಪೆರ್ಮೆ ತನ್ನೊಳೊ |
ಪ್ಪುವುದೆನೆ ಪಾಂಡವಪ್ರತಿಮನಲ್ಲನೆ ಮಂಡಲಸಾಮಿ ಲೋಕದೊಳ್ ||1112||

ದಿಕ್ಕರಿಯ ಕರಟತಟಮಂ | ಚಿಕ್ಕುಲಿಸಿದುದಮರನಗಮನಡರ್ದುದು ಹರಹಾ |
ಸಕ್ಕೆ ಸೆಣಸಿದುದು ದೆಸೆಯಂ | ಮಿಕ್ಕುದು ಮಂಡಲನ ಕೀರ್ತಿ ಮಹಿಮೋ
ನ್ನತಿಯಿಂ ||1113||

ಮಂಡಲೇಶ್ವರದೇವಾಲಯ

ತಳದಿಂದಂ ಕಳಶಂಬರ | ಮೆಳವಡೆ ಕಲ್ವೆಸದ ಚೆಲ್ವು ಬೆಳ್ಳೂರೊಳ್ ಮಂ |
ಡಳಸಾಮಿ ಮಾಡಿಸಿದ ಮಂ | ಡಳೇಶ್ವರದ ಸರಿಗೆ ಬರ್ಪ ದೇಗುಲವೊಳವೇ ||1114||

---

## 217 ತಿಪಟೂರು 123 ಎ. 1200

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಮಹದೇವಸೆಟ್ಟಿ ಶಿವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟನೆಂದು ಹೇಳಿದೆ.**

**ವಿನಯಾದಿತ್ಯನ ಹೆಂಡತಿ ಕೆಳೆಯಬ್ಬರಸಿ**

ಸೆಳೆನಡುವಿನುರುಳಿಗುರುಳಿನ | ತೊಳಪಧರದ ಬೆಳಪ ಕಣ್ಗಳಬ್ಜಾನನದೀ |
ಕಳಶಕುಚದ್ವಯದಾಕೆಯೆ | ವಿಳಸಿತವಾದರಸಿ ಕೆಳೆಯಬರಸಿಯೆ ತನಗಂ ||1115||

**ನಾರಸಿಂಹ I**

ವಿಸಸನದೊಳ್ ಕಿಱಿಕ್ತೊಡೆ ನಿನ್ನಸಿಲತೆ ವೈರಿಗಳ ಹೃದಯದೊಳ್ ನಾಂಟಿ ತಳಿರ್|
ಪಸರಿಸಿ ಬೆನ್ನೊಳ್ ಬೆಳೆವುದು|ಪೊಸತೊಂದಚ್ಚರಿ ನೃಸಿಂಹ ಭಾವಿಸೆ ಜಗದೊಳ್||1116||

---

## 218 ಶಿಕಾರಿಪುರ 186. 1200

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಸಾಮಂತ ತ್ರಿಲೋಚನದೇವನು ತಾಣಗುಂದೂರಿನಲ್ಲಿ ಮಾಧವದೇವರನ್ನು ಪ್ರತಿಷ್ಠೆ ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

**ತಾಣಗುಂದೂರು**

ಆರವೆಯಿಂ ಪೊದಱ್ದ ಗಿಳಿವಿಂಡುಗಳಿಂ ಕಳಮಾಲಯಂಗಳಿಂ |
ವಾರಿಜಷಂಡದಿಂ ಬಹುತಟಾಕದಿನುದ್ಧಲತಾಗೃಹಂಗಳಿಂ ||
ಚಾರುವನಂಗಳಿಂ ಬೆಳೆದ ಕೆಯ್ವೊಲದಿಂ ಸೊಗಯಿಪ್ಪ ತಾಣಗುಂ |
ದೂರತಿಶೋಭಿಕುಂ ಸಿರಿಯ ಕಣ್ಬೊಲದಂತೆ ಧರಾತಳಾಗ್ರದೊಳ್ ||1117||

ಅಂಗಭವಂ ಸಂಗಡಿಗಂ | ತಿಂಗಳೆ ಪೊಂಗೊಡನಪಾರಸುಧೆ ನೀರೂಟಂ |
ಪಿಂಗದ ಮಧು ವನಪಾಳಂ|ಸಂಗಡಿಸಲ್ ಬೆಳೆದುದೆಂಬುದೇನಚ್ಚರಿಯೋ ||1118||

---

## 219 ಚೆನ್ನರಾಯಪಟ್ಟಣ 205 ಸು. 1200

**ಈ ವೀರಗಲ್ಲಿನಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ನಡೆದ ಗೋಗ್ರಹಣದಲ್ಲಿ ಕೇತಮಲ್ಲನು ಕಾದಿ ಸ್ವರ್ಗಸ್ಥನಾದನೆಂದು ಹೇಳಿದೆ.**

ಅರಸರ ದಾಱಿ ಮುತ್ತಿದೆಡೆಯೊಳ್ ತಱಿಸಂದಿದಿರಾಗಿ ತಾಗಿ ತ |
ಳ್ತಿಱಿದು ಪಲಂಬರಂ ತಗುಳ್ದು ಕೋಳ್ಗೆಱೆಯಂ ತುಱುವಂ ಮಗುಱ್ಚಿ ಚಿ ||
ಚ್ಚರಮಿದಿರಾದ ವೀರಭಟರಂ ತಱಿದಿಕ್ಕಿಯೆ ತನ್ನದೊಂದು ದೋ |
ರ್ಬಲದೊಳೆ ಕೇತಮಲ್ಲ ಸುರಲೋಕಮನೆಯ್ದಿದನಾಜಿರಂಗದೊಳ್ ||1119||

ಸುರದುಂದುಮೆಯೆಸೆಯುತ್ತಿರೆ | ಸುರಕನ್ಯೆಯರೊಲ್ದು ಚಾಮರಂಗಳನಿಕ್ಕಲ್ |
ಕರಮೆಸೆವ ಸುರವಿಮಾನದೊ|ಳಿರಲುಯ್ದರ್ ಕೇತಮಲ್ಲನಾಯಕನಸುವಂ ||1120||

---

## 220 ಶ್ರವಣಬೆಳ್ಗೊಳ 314. ಸು 1200

**ಇದರಲ್ಲಿ ಜಿನವರ್ಮನು ಕಂಖರಿವಾದ್ಯದಲ್ಲಿ ಚತುರನೆಂದು ಸೂಚಿಸಿದೆ.**

ಜಿನವರ್ಮನ ಕಂಖರಿಯ | ಧ್ವನಿ ಕಿವಿವುಗೆ ದುರ್ಜನಂಗೆ ಭಯಮುಂ ಸುಜನಂ|
ಗನುರಾಗವುಮುದಯಿಸುಗುಂ | ಘನನಾದದಿನೆಂತು ಹಂಸೆಗಂ ನವಿಲಿಂಗಂ ||1121||

---

## 221 ಅರಸಿಯಕೆರೆ 130. ಸು. 1200

**ಇದರಲ್ಲಿ ರೇವಣನು ತಳಿರೂರಗ್ರಹಾರದಲ್ಲಿ ವಿಷ್ಣುದೇವಸ್ಥಾನವನ್ನು ಕಟ್ಟಿಸಿದಂತೆ ಹೇಳಿದೆ.**

**ರೇವಣ**

ಪರಹಿತದೊಳ್ ಚಲಮಂತಾ|ಸುರಗೃಹಮಂ ಮಾಡಿ ಕೀರ್ತಿವಡೆಯಲ್ ಚಲಮು|
ರ್ವರೆಯೊಳ್ ಬುಧರಂ ದ್ವಿಜರಂ | ಪೊರೆವೆಡೆಯೊಳ್ ರೇವಣಂಗೆ ಚಲಪುಸೆ
ದಿರ್ಕುಂ ||1122||

ವನನಿಧಿಪರಿವೃತವಿಶ್ವಾ | ವನಿತಳದೊಳಗಿದು ವಿಚಿತ್ರಮೆಂಬಂದದೆ ಸ |
ಜ್ಜನವಿನುತರೇವಣಾರ್ಯ್ಯಂ | ಮನುಚರಿತಂ ವಿಷ್ಣುಭವನಮುಂ ಮಾಡಿಸಿದಂ ||1123||

---

## 222 ಬೇಲೂರು 140. 1200

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಬೆನಕನ ಮಾರವ್ವೆ ಶಾಂತಲೇಶ್ವರದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಎರೆಯಂಗ

ಎಱಗದವಂದಿರ ತಲೆಗಳ । ನೆಱಗಿಪನೆಱಗಿಪನರಾತಿಲಕ್ಷ್ಮಿಯನಿದಿರಿಂ ।
ಗೆಱಗದ ಬಲ್ಪಿಂದಂ ತನ । ಗೆಱಗಿಪನೆಱೆಯಂಗನತುಳವಿಜಯಶ್ರೀಯಂ ॥1124॥

### ವಿಷ್ಣುವರ್ಧನ

ಅವರೊಳ್ ಮಧ್ಯಮನಾಗಿಯುಂ ಧರಣಿಯಂ ಪೂರ್ವಾಪರಾಂಭೋಧಿಯೆ ।
ಯ್ದುವಿನಂ ಕೂಡೆ ನಿಮಿರ್ಚುವೊಂದು ನಿಜನಿಷ್ಪ್ರತ್ಯೂಹವಿಕ್ರಾಂತದು ॥
ದ್ಧವದಿಂದುತ್ತಮನಾದನುತ್ತಮಗುಣಭ್ರಾಜಿಷ್ಣು ಲಕ್ಷ್ಮೀವಧೂ ।
ಧವನುದ್ವೃತ್ತವಿರೋಧಿದೈತ್ಯಮಥನಂ ಶ್ರೀವಿಷ್ಣುಭೂಪಾಳಕಂ ॥1125॥

---

## 223 ಕಡೂರು 36. 1203

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ದಂಡನಾಯಕ ಅಮೃತಯ್ಯನು ಜಿನಾಲಯವನ್ನು ಮಾಡಿಸಿ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ಬಲ್ಲಾಳ II

ಜಯಜಾಯಾಪ್ರಿಯವಲ್ಲಭಂ ಸಕಳಭೂಭೃನ್ಮಸ್ತಕನ್ಯಸ್ತಪಾ ।
ದಯುಗಂ ದೋರ್ಬಲದೃಪ್ತನಪ್ರತಿಮನತ್ಯೌದಾರ್ಯನತ್ಯೂರ್ಜಿತೋ ॥
ದಯನತ್ಯದ್ಭುತವಿಕ್ರಮಂ ರಿಪುಬಳಪ್ರಧ್ವಂಸನಿಶ್ಶೇಷನಿ ।
ರ್ದಯನಿಸ್ತ್ರಿಂಶನಿರರ್ಗಳಂ ನಿಯಮದಿಂ ಬಲ್ಲಾಳಭೂಪಾಳಕಂ ॥1126॥

ಕಾಳೆಗದೊಳ್ ನಿಶಾತಕರವಾಳಹತಕ್ಕೆ ಹತಪ್ರಭರ್ ಮಹೀ ।
ಪಾಳಕರೋಡಿ ಪೊಕ್ಕು ಗಹನಾಂತರದೊಳ್ ಕ್ಷುಧೆಯಳ್ವೆ ವನ್ಯಭೂ ॥
ಜಾಳದೊಳಿರ್ದ ಹಣ್ಗಳನೆ ಹಣ್ಣೆನಲಮ್ಮದೆ ಕಾಯಿ ಕಾಯಿ ಬ ।
ಲ್ಲಾಳನೃಪಾಳ ಎಂಬಿದನೆ ಪಂಬಲಿಸಿರ್ದರದೇಂ ಪ್ರತಾಪಿಯೋ ॥1127॥

### ಚಟ್ಟ

ಮಾರಿಟ್ಟಂಬರಮಂ ಸುರಾಚಲಮನೊರ್ಕೈಸಿಟ್ಟು ದಿಂಕಿಟ್ಟು ತ ।
ತ್ಪಾರಾವಾರಮನಂತುಮಿಂತುಮಳೆದುಂ ಮೂಱ ತೂಗಿಯುಂ ಪೋಗಿಯುಂ ॥

ಪಾರಂಗಂಡವರುಂಟು ಪೋಲಿಪೊಡೆ ಪೇಪಿಂ ಬಿಣ್ಪಿನಿಂ ಗುಣ್ಪಿನಿಂ |
ದಾರುಂ ಪೋಲಿಪರುಂಟೆ ವೈರಿಪೃತನಾಸಂಘಟ್ಟನಂ ಚಟ್ಟನಂ ||1128||

ಬಂದೆರೆದಂಗೆ ಕೊಟ್ಟು ಸಲೆ ವೈರಿಗೆ ಬೆಂಗುಡನೆಂದುಮೆಂಬಿದಾ |
ವಂದಮೊ ತನ್ನೊಳಿಲ್ಲ ಭಯಮಾಭಯಮಂ ಪಗೆಗೀವನುಂತೆ ಚಿ ||
ತ್ರಂ ದಲೆನುತ್ತೆ ಮತ್ತೆ ಪೊಗೞ್ಗುಂ ವಸುಧಾತಳಮೞ್ಕಱಿಂದೆ ನಿ |
ರ್ಗುಂದದ ಚಟ್ಟನಂ ರಿಪುಘರಟ್ಟನನಿಂದುಲಲಾಟಪಟ್ಟನಂ ||1129||

## ಅಮೃತ

ಗುಣಿ ಗಂಭೀರಂ ಪ್ರಸಿದ್ಧಂ ಪತಿಹಿತನದಟಂ ಧಾರ್ಮಿಕಂ ಗೋತ್ರಚಿಂತಾ |
ಮಣಿ ಧೀರಂ ದಾನಿ ದಕ್ಷಂ ಪಟು ಶುಭಮತಿ ಪುಣ್ಯಾಧಿಕಂ ಮಂತ್ರಿಚೂಡಾ ||
ಮಣಿ ಸೇವ್ಯಂ ಸೌಮ್ಯರಮ್ಯಾಕೃತಿ ಕಲಿ ಕುಲಜಂ ಸಚ್ಚರಿತ್ರಂ ಸಭಾಭೂ |
ಷಣರತ್ನಂ ಸ್ವಭಾಷಾಸಮಿತನಮಿತದಂಡಾಧಿಪಂ ಕೀರ್ತಿವೆತ್ತಂ ||1130||

ಅಮಮ ಜಗಕ್ಕೆ ತನ್ನ ನುಡಿಯೊಂದಮೃತಂ ನಗೆವೆತ್ತ ನೋಟಮೊಂ |
ದಮೃತಮುದಾರಮೊಂದಮೃತಮಾದರಮೊಂದಮೃತಂ ವಿವೇಕಮೊಂ ||
ದಮೃತಮೆನಲ್ಕೆ ಹೊಯ್ಸಳನೃಪಾಳನ ರಾಜಿತರಾಜ್ಯದಲ್ಲಿಯೊಂ |
ದಮೃತಮೆನಿಪ್ಪ ಮಂತ್ರಿಯಮೃತಂಗಮೃತಂ ಸಮನಾಗಲಾರ್ಪುದೇ ||1131||

---

## 224 ಷಿಕಾರಿಪುರ 225. 1203

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಅಧಿಕಾರಿ ಮಲ್ಲಿಸೆಟ್ಟಿ ಮುಂತಾದವರು ಬಂದಣಿಕೆಯ ಶಾಂತಿನಾಥದೇವರಿಗೆ ಭೂಮಿ ಯನ್ನು ಬಿಟ್ಟಂತೆ ಹೇಳಿದೆ.**

## ನಾಗರಖಂಡ

ಧರಣೀಕಾಂತೆಯ ಮುಖದಂ|ತಿರೆ ಬನವಸೆನಾಡು ರಂಜಿಸುವುದದಱೊಳ್ ನಾ|
ಗರಖಂಡಂ ತಿಲಕದವೊಲ್ | ಪರಿಶೋಭಿಪುದಾವಕಾಲಮುಂ ಸಿರಿಯೊದವಿಂ ||1132||

ಊರೂರ್ ನಂದನದಿಂ ಲತಾಭವನದಿಂದೂರೂರ್ ತಟಾಕಂಗಳಿಂ |
ದೂರೂರಾ ತಳ್ತಿಲೆವಳ್ಳಿಯಿಂ ಕೊಳಗಳಿಂದೂರೂರ್ ಫಲೋರ್ವೀಜದಿಂ ||
ದೂರೂರ್ ಕಬ್ಬಿನ ತೋಂಟದಿಂ ಕಱವೆಯಿಂದೂರೂರ್ ಪ್ರಜಾವ್ರಾತದಿಂ |
ದೂರೂರ್ ದೇವಗೃಹಂಗಳಿಂ ವಿಬುಧರಿಂದೂರೂರ್ ಕರಂ ರಂಜಿಕುಂ ||1133||

## ಬಾಂಧವವನಗರ (ಬಂದಣಿಕೆ)

ಪರಲೊಳ್ ಪರುಸಂ ಧೇನೂ | ತ್ಕರದೊಳ್ ಸುರಧೇನು ನಂದನದೊಳಮರಕುಜಂ|
ಕರಮೆಸೆವಂತಿರೆ ಸಲೆ ನಾ | ಗರಖಂಡದೊಳೆಸೆವುದೆಸೆವ ಬಾಂಧವನಗರಂ ||1134||

ಅದು ಬಳಸಿರ್ದ ನಂದನದಿನಂಬುಜಷಂಡದಿನೊಳ್ಗವುಂಗಿನಿಂ |
ಪುದಿದೆಲೆವಳ್ಳಿಯಿಂ ಬೆಳೆದ ಶಾಳಿಯಿನೊಪ್ಪುವ ಕೋಂಟೆಯಿಂ ಸಮಂ ||
ತೊದವಿದ ಲಕ್ಷ್ಮಿಯಿಂ ವಿಭವದಿಂ ವಿಳಸಜ್ಜನದಿಂ ಸುದೇವಗೇ |
ಹದ ಕಡುಚೆಲ್ವಿನಿಂದಮಳಕಾಪುರಮಂ ನಗುತಿರ್ಪುದೊರ್ಮೆಯುಂ ||1135||

## ಮುದ್ದಸಾಮಂತ

ಕವಿಗಳ ಮುದ್ದನಾಶ್ರಿತರ ಮುದ್ದನಸಾಥರ ಮುದ್ದನಿಷ್ಟರ |
ಪ್ಪವರ್ಗಳ ಮುದ್ದನರ್ಥಿಗಳ ಮುದ್ದನೆಡರ್ ನೆಲೆಗೊಂಡ ಶಿಷ್ಟಬಾಂ ||
ಧವರೆಸೆವೊಂದು ಮುದ್ದನೆನಸುಂ ಪರಿವಾರದ ಮುದ್ದನಂಗನಾ |
ನಿವಹದ ಮುದ್ದನೆಯ್ದೆ ಸಲಿಪಂ ಪ್ರಭುಮುದ್ದನಿಳಾತಳಾಗ್ರದೊಳ್ ||1136||

## ಸೋಮಗವುಂಡ

ಜಲದ ನೆಲೆ ಚಾಗದಾಗರ | ಮಲಘುಗುಣಂಗಳ ನಿಧಾನಮಱಿತದ ತವರು |
ಜ್ವಲಕೀರ್ತಿಯ ಕರುವೆನಿಪಂ | ಸಲೆ ಹಲರಿಂದಬ್ಬಲೂರ ಸೋಮಗವುಂಡಂ ||1137||

## ಶುಭಚಂದ್ರ

ಮಳಿನತೆಯಿಲ್ಲದ ಕುಂದಂ | ತಳೆಯದ ಸಲೆ ರಾಹುಪೀಡೆಯೆಯ್ದದ ದೋಷಾ |
ವಳಿಯೊಳ್ ಚರಿಯಿಸದಸ್ತಾ | ಚಳಕೆಳಸದ ಚಂದ್ರನೆನಿಸುವಂ ಶುಭಚಂದ್ರಂ ||1130||

## ಮಲ್ಲದಂಡಾಧಿಪ

ಕಡಿವಂ ಮಾಱಾಂತರಂ ಬೇಗಡೆ ಕರಗಿಸುವಂ ಶತ್ರುಸೈನ್ಯಂಗಳಂ ಸಂ |
ಗಡಕೆಲ್ಲಂ ಧೈರ್ಯವರ್ಣಕ್ರಮಮನೆಸೆಯೆ ತಾಂ ತೋಱುವಂ ಕೀರ್ತಿಯಚ್ಚಂ ||
ಕಡುಚೆಲ್ವಪ್ಪಂತಿರಚ್ಚೊತ್ತುವನಖಿಳದಿಶಾದಂತಿದಂತಂಗಳೊಳ್ ನೋ |
ೞ್ಪೊಡೆ ಸಂತಂ ಕಮ್ಮಟಕ್ಕಂತೊಡೆಯನೆನಿಸುವಂ ಮಲ್ಲದಂಡಾಧಿನಾಥಂ ||1139||

## ಸೂರ್ಯಚಮೂಪ

ಅಳಱಿ ವಿರೋಧಿಸಂತಮಸಮಳ್ಕಿರೆಯಾಟವಿಕೋದ್ಧಕೈರವಂ |
ಸಲೆ ಪೊದಱಿದ್ದೆಯ್ದೆ ಸಜ್ಜನಬಿಸಂ ಪ್ರವಿಕಾಸಮನೆಯ್ದೆ ರಾಗಮ ||

ಗ್ಗಳಿಸಿರೆ ಮಿತ್ರಚಕ್ರಚಯದೊಳ್ ಬೆಳಪಂ ನುತವಿಶ್ವಧಾತ್ರಿಯಂ |
ಸುಲಲಿತಮೂರ್ತಿ ಕೀರ್ತಿನಿಧಿ ಸೂರ್ಯಚಮೂಪತಿ ಸೂರ್ಯನಂದದಿಂ ||1149||

---

## 225 ಹೊನ್ನಾಳ 7. 1204

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಸಾಮಂತ ಬೂವನು ಕುರುವದ ರಾಮನಾಥದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಬೂವ

ಅದಟಿಂದಾಂತ ಪದಾತಿಯೆಂಬ ಮಲೆಯೊಳ್ ಕ್ರೂರಾರಿಯೆಂಬುದ್ಧತೋ |
ನ್ಮದದಂತಿವ್ರಜಮಂ ನಿಜೋನ್ನತಚಲತ್ತೀವ್ರಾಸಿಯೆಂಬಂಕುಶ ||
ಕ್ಕೆ ದಿಟಂ ತಾಂ ಬಸಮಾಗಿಸಿಂತು ಜಯಮೆಂಬಾಲಾನದೊಳ್ ಕಟ್ಟುವಂ |
ಪದುಳಂ ತಾನೆನಲಾಂಪರಾರ್ ಸಮರದೊಳ್ ಸಾಮಂತಬೂವಾಂಕನೊಳ್ ||1141||

### ಬೋವಿಸೆಟ್ಟಿ

ಶುಭಚರಿತಂ ಪರಾರ್ಥನಿಧಿ ಸತ್ಯಗುಣಾನ್ವಿತನಿಕ್ಷುಚಾಪಸ |
ನ್ನಿಭನಭಿಮಾನಮೂರ್ತಿ ವಿನಯಾಭರಣಂ ರಣಧೀರನುನ್ನತಂ ||
ಸುಭಗನನೂನದಾನನಿಧಿ ತಾನೆನೆ ಸಂದ ನೆಗಱ್ತೆವೆತ್ತ ನಾ |
ಱ್ಪ್ರಭುತೆಯ ಬೋವಿಸೆಟ್ಟಿಯೆಸೆದಂ ನಿಸದಂ ವಸುಧಾತಳಾಗ್ರದೊಳ್ ||1142||

---

## 226 ತರೀಕೆರೆ 42. 1205

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಸಾಮಂತ ನಾಗಗಾವುಂಡನು ಅಮೃತೇಶ್ವರದೇವರಿಗೆ ಗ್ರಾಮವನ್ನು ಬಿಟ್ಟನೆಂದು ಹೇಳಿದೆ.**

### ಹೊಯ್ಸಳರ ಧ್ವಜ

ಅಲಗಿಂ ಸಿಂಗಮನಿಱಿದನ| ಕಲಿತನಮಂ ನಗುವ ತೆಱದೆ ಮೆಱೆವುದು ಸೆಳೆಯಿಂ|
ಪುಲಿವೊಯ್ದು ಕುಱುವು ಪೊಯ್ಸಳ | ಕುಲತಿಲಕನ ಮತ್ತಗಜದ ಟಕೆಯದೊ
ಳೀಗಳ್ ||1143||

### ವಿನಯಾದಿತ್ಯ

ಅನಿತೊಂದುನ್ನತಿವೆತ್ತ ಪೊಯ್ಸಳಕುಳಂ ಪೂರ್ವಾದ್ರಿಯಂ ಪೋಲ್ವಿನಂ |
ವಿನಯಾದಿತ್ಯನೃಪಾಲನುದ್ಭವಿಸಿದಂ ಭೂಲೋಕದಾದಿತ್ಯನಂ ||

ಬಿನೆಗಂ ಕಟ್ಟಿಲೆ ಕೂಡೆ ಕಣ್ಗೆ ಕವಿದತ್ತನ್ಯಾವನೀಶರ್ಗೆ ತೊ |
ಟ್ಟಿನೆ ಕೆಯ್ಕೊಂಡುದಲರ್ಕೆಯಂ ಕುವಳಯಂ ಮತ್ತಾತನಿಂ ಕೌತುಕಂ ||1114||

## ವಿನಯಾದಿತ್ಯನ ಹೆಂಡತಿ ಕೆಳೆಯಬ್ಬರಸಿ

ಕೆಳೆ ನಡೆಯಿಂ ಕಳಹಂಸೆಗೆ| ಕೆಳೆ ನುಡಿಯಿಂ ಕೋಕಿಳಕ್ಕೆ ಸೋಗೆಗೆ ಮುಡಿಯಿಂ |
ಕೆಳೆ ಕೆಳೆಯಬ್ಬರಸಿಯೆ ತ | ತ್ಕುಳವಧುವಾದಳ್ ತದೀಯಸುತನೆಱೆಯಂಗಂ ||1115||

## ಎರೆಯಂಗ

ಜಲದೆಱೆಯಂಗೆ ಚಾಗದೆಱೆಯಂಗೆ ಜಸಕ್ಕೆಱೆಯಂಗೆ ಮಿಕ್ಕ ದೋ |
ರ್ವಲದೆಱೆಯಂಗೆ ವೀರದೆಱೆಯಂಗೆ ಕುಲೋನ್ನತಿ ತನ್ನೊಳೊಪ್ಪುವೇ ||
ಜಲೆಯೆಱೆಯಂಗೆ ಕೀರ್ತಿಯೆಱೆಯಂಗೆಱೆಯಂಗನೃಪಂಗೆ ನಂದನಂ |
ಜಲಧಿಪರೀತಭೂವಲಯವರ್ಧನನಂಕದ ವಿಷ್ಣುವರ್ಧನಂ ||1146||

## ವಿಷ್ಣುವರ್ಧನ

ಬಿಟ್ಟಿಗನಾಹವಾಂಗಣಕೆ ಜಟ್ಟಿಗನೆತ್ತಿದೊಡತ್ತ ಕಾಂಚಿ ಬೆಂ |
ಗೊಟ್ಟುದು ಕೊಂಗು ಕೂಡೆ ನೆಲೆವಿಟ್ಟುದು ಮಿಕ್ಕ ವಿರಾಟಕೋಟೆ ಕೂ ||
ಗಿಟ್ಟುದು ಕೋಯತೂರ್ ಕೆದಱೆ ಕೆಟ್ಟುದು ರೂಥಿಯ ಚಕ್ರಗೊಟ್ಟಮಿಂ |
ಬಿಟ್ಟುದು ಕೆಯ್ದುವಿಕ್ಕಿ ಕಡಲೊಳ್ ಪಡಲಿಟ್ಟುದು ಸಪ್ತಕೊಂಕಣಂ ||1147||

## ನಾರಸಿಂಹ I

ನರಸಿಂಹಂ ನರಸಿಂಹನಂತೆ ಮುನಿಸಿಂ ಮಾಱಾಂತ ವೀರಾರಿಭೂ |
ಪರನಣ್ಮಿಟ್ಟಿನೊಳಿಂತು ಕಂಡೊಡೆ ಬಱಿಕ್ಕಮ್ಮಮ್ಮ ಪೋಱ್ದಿಕ್ಕಿ ಪೇ ||
ರುರಮಂ ಘೊಕ್ಕನೆ ಕುತ್ತಿ ಚಕ್ಕನೆ ಭುಜದ್ವಂದ್ವಂಗಳಿಂದೆತ್ತಿ ಬ |
ಲ್ಗರುಳಂ ಕೋದೆಱಲಿಕ್ಕಿ ಬೀರಸಿರಿಗೆತ್ತಂ ತೋರಣಂಗಟ್ಟಿನೇ ||1148||

## ಬಲ್ಲಾಳ II

ಶುಂಡಾಳಂ ಮದಮುಳ್ಳ ಚೋಳನಳವಿಂದಾಸಿಂಹಳಂ ಸಿಂಹಮು |
ದ್ದಂಡಂ ಸೇವುಣನಾವಗಂ ಶರಭಮಿಂತೀಮೂವರಂ ರಾಯರಂ ||
ತುಂಡಂ ಮುಂಡದೊಳಾಟಿಸಿ ಪೊಯ್ಯುದಿರನಾನೇಂಪೇೞ್ದಪೆಂ ರಾಯಭೇ |
ರುಂಡಂ ರಾಯರ ಚಕ್ರವರ್ತಿ ರಣದೊಳ್ ಬಲ್ಲಾಳಭೂಪಾಳಕಂ ||1149||

ಉರಿಯೆಂತಂತಟ್ಟೆಯಂ ಸುಟ್ಟುರಿಸಿ ನೆಗೆಯೆ ನೆತ್ತರ್ ಮಹೀಚಕ್ರದೊಳ್ ಕ |
ಗ್ಗರಿಕೆಂತಂತೆತ್ತಲುಂ ಪಂದಲೆ ಪಡಲಿಡೆ ಧಂಧಂಧಗಿಲ್ ಭುರ್ಭುಗಿಲ್ ಘಂ ||
ಘರಿಲೆಂದೇನಳ್ವಿತೋ ಸೇವುಣಬಳವನಮಂ ವೀರಬಲ್ಲಾಳಕೋಪೋ |
ದ್ಧುರದಾವೋಗ್ರಾನಳಂ ಶಾತ್ರವನೃಪತಿಮೃಗವ್ರಾತಮಳ್ಕಾಡುವನ್ನಂ ||1150||

### ನಾಗ

ಅರಿಸಾಮಂತಕುಳಾಕುಳಾಚಳದಳದ್ದಂಭೋಳಿ ದಂಭೋಳಿನಿ |
ಷ್ಠುರಸಾಮಂತಗಜೇಂದ್ರಯೂಥವಿದಳನ್ನಾಗಾರಿ ನಾಗಾರಿಭೀ ||
ಕರಸಾಮಂತನಿಕಾಯದೈತ್ಯಬಳವತ್ಕಂಸಾರಿ ಕಂಸಾರಿಸಂ |
ಗರರಂಗಕ್ಕಹಿವೈರಿವೈರಿಯೆನಿಪಂ ಸಾಮಂತನಾಗಾರ್ಜುನಂ ||1151||

### ನಾಗನ ಮಗ ಕೇತ

ಛಟಛಟ ಛಚ್ಛಟಚ್ಛಟ ಎನಲ್ ಮುಱಿದತ್ತಿದಿರಾಂತ ಬೀರರಂ |
ಘಟಿಘಟಿ ತಾಗೆ ನುರ್ಗಿದುದು ಕೋಳೆಲುಗಳ್ ನೆಳಿಲುಂ ನೆಡಿಲ್ಲೆನಲ್ ||
ಭಟರನನೇಕರಂ ಭರದೆ ಸೀಳ್ದುದು ಸೞಿನೆ ಸೞಿನಲ್ ಮದೋ |
ತ್ಕಟಮಿದೆ ಕೇತನೆಂಬ ಕಲಿನಾಗಗವುಂಡನ ಗಂಧವಾರಣಂ ||1152||

ಧರಣೀದರ್ಪಿಷ್ಠಸಾಮಂತಕರುರದಲಗುದ್ದಂಡವಿದ್ವಿಷ್ಟಸಾಮಂ |
ತರ ಸೇನಾವಾರ್ಧಿಯಂ ಗೋಳಿಡೆ ಕದಡುವ ಮಂಥಾಚಲಂ ಧೂರ್ತಸಾಮಂ ||
ತರ ಬೀರಂ ಕಿಱಿತ್ತು ವಾರಾಶಿಯೊಳಲೆವಸುರಂ ಮಚ್ಚರಂದೋರ್ಪ ಸಾಮಂ |
ತರನಾಟಂದೊತ್ತಿ ಗೋಣಂ ನುಲಿದು ಬಿದಿರ್ವ ಮಾಕಾಳಿ ಸಾಮಂತಕೇತಂ ||1153||

---

## 227 ಷಿಕಾರಿಪುರ 317 ಸು. 1205

**ಇದರಲ್ಲಿ ಏಚಣನು ಗೊಗ್ಗವೆಂಬ ಗ್ರಾಮದಲ್ಲಿ ಒಂದು ಜಿನಾಲಯವನ್ನು ಎತ್ತಿಸಿದನೆಂದು ಹೇಳಿದೆ.**

### ಏಚಣ

ಊರೊಳ್ ತಪ್ಪದೆ ಬಸದಿಯ | ನೋರಂತಿರೆ ಮಾಡಿ ಬೆಳಗವತ್ತಿಯ ನಾಡಂ |
ಧಾರಿಣಿಗೆ ನೆಗಱ್ದಕೂಪಣ | ಕ್ಕೋರಗೆಮಾಡಿದನುದಾರನಿಧಿಯೇಚರಸಂ ||1154||

**ಏಚಣನ ಹೆಂಡತಿ ಸೋವಲದೇವಿ**

ಎಱೆಯನ ದೈವಮಾವುದದು ತನ್ನಯ ದೈವಮುದಾವುದಾತನೊಳ್ |
ನೆಱೆದ ಗುಣೋನ್ನತಿಕ್ಕೆಯದು ತನ್ನಯ ಮಿಕ್ಕ ಗುಣೋನ್ನತಿಕ್ಕೆ ಕ ||
ಣ್ಡೆಱೆದುದದಾವ ಧರ್ಮಮಧಿನಾಥನೊಳಂತದೆ ತನ್ನ ಧರ್ಮಮೆಂ |
ದೆಱಕದೆ ಮಂತ್ರಿಯೇಚಣನ ವಲ್ಲಭೆ ಸೋವಲದೇವಿ ಭಾವಿಪಳ್ ||1155||

ನಗೆ ನಗೆಮೊಗಮಂಬುಜಮಂ| ಮಿಗೆ ಮೃಗವೀಕ್ಷಣಮನೀಕ್ಷಣಂ ಮೃಗಧರನಂ|
ತೆಗೞ್ ಮುಖಕಾಂತಿ ಚೆಲ್ವಂ| ತ್ರಿಗುಣಿಸಿದುದು ನಿನ್ನ ರೂಪು ಸೋವಲದೇವೀ||1156||

---

## 228 ಕಡೂರು 149. 1206

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಮಂತ್ರಿ ಹರಹನು ಬಲ್ಲೇಶ್ವರ ದೇವರನ್ನು ಪ್ರತಿಷ್ಠಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

**ನಾರಸಿಂಹ I**

ಕುಲಜನೆ ಯಾದವಾನ್ವಯಶಿರೋಮಣಿ ಜೀವಿವರ್ಗೀವನೇ ವಧೂ |
ತಿಲಕೆಯೆನಿಪ್ಪ ಲಕ್ಷ್ಮಿಯ ಮಗಂ ಕಡುಚೆಲ್ವನೆ ಲೋಕವೆಲ್ಲಮಂ ||
ಸಲೆ ನಿಲೆ ಕಾವ ವಿಷ್ಣುವಿನ ಪುತ್ರಕನೆಂದೊಡೆ ಬಣ್ಣಿಸಲ್ಕೆ ಭೂ |
ವಲಯದೊಳಾರ್ಪರಾರೊ ನರಸಿಂಹನೃಪಾಳಕನಂ ನಿರಂತರಂ ||1157||

**ಹರಹ**

ತುರಗದ ಖುರಪುಟವಾದ್ಯಂ | ಬಿರುದರ ಕೊರಲಗಿನೆಸೆವ ನಾದಮೆ ತಾಳಂ |
ನರರಟ್ಟೆಯ ಪೆಕ್ಕಣದಿಂ| ಕರಮೆಸೆದುದು ಹರಹನಿಱಿದ ರಣಭೂಮಿಕೆಯೊಳ್||1158||

ಕೇಳೆಲೆ ಸಾಹಣಿ ಹರಹನ | ಕಾಳೆಯ ದನಿಗೇಳಲೊಡನೆ ವೈರಿನಮೂಹಂ |
ಬಾಳನವಧರಿಸದಾತ್ಮಗ | ಳಾಳಿಯ ತಡವರಿಸಿ ಭಯದೆ ನೋಡುತ್ತಿರ್ಕುಂ ||1159||

---

## 229 ಅರಸಿಯಕೆರೆ 40. 1208

ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಕಳಕಟ್ಟೆಯ ಪ್ರಜೆ ಗಾವುಂಡುಗಳು ಬಿಟ್ಟಯ್ಯನಿಗೆ ಉಂಬಳಿಯನ್ನು ಕೊಟ್ಟಂತೆ ಹೇಳಿದೆ.

**ಕಳಕಟ್ಟೆ**

ತೀವಿದ ಜೆನ್ನನಪ್ಪ ಕೆಱೆಯೊಪ್ಪುವ ಕಾತ ಕವುಂಗು ಸುತ್ತಲುಂ |
ಶ್ರೀವನಲಕ್ಷ್ಮಿ ಕಣ್ದೆಱೆದವೋಲ್ ಬೆಳೆದಿರ್ದ ಸುಗಂಧಶಾಲಿಯಿಂ ||

ದೀವಸುಧಾತಳಾಗ್ರದೊಳು ರಮ್ಯಮೆನಲ್ ಕಳಿಕಟ್ಟೆ ನಾಡೆಯುಂ |
ದೇವಗೃಹಂಗಳಿಂದೆಸೆದು ಶೋಭಿಸುತಿರ್ದುದು ನೋಟ್ಪೊಡೂರ್ಗಳೊಳ್ ||1160||

---

## 230 ಸೊರಬ 28. 1208

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ನೇಮಿಸೆಟ್ಟಿ ಕೊಡಕಣಿಯಲ್ಲಿ ಶಾಂತಿನಾಥಬಸದಿಯನ್ನು ಮಾಡಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಭರತಕ್ಷೇತ್ರ

ಅಂಬುಧಿಕಮಲಾಕರದೊಳ್ | ಜಂಬೂದ್ವೀಪಾಬ್ಜದೊಂದು ಕರ್ಣಿಕೆಯೆನಿಕುಂ |
ಪೊಂಬೆಟ್ಟದಱಿಂ ತೆಂಕಲ್ | ಜೆಂಬೆತ್ತೆಸೆಯಿಸಿಪುದಲ್ತೆ ಭರತಕ್ಷೇತ್ರಂ ||1161||

### ಬನವಾಸದೇಶ

ಭರತಶ್ರೀಭೂಷಣದಂ | ತಿರೆ ಕುಂತಣದೇಶಮಲ್ಲಿ ನಾಯಕಮಣಿಯುಂ |
ತುರುತರಶೋಭಾವಿಭ್ರಮ | ಕರಮೆನೆ ಬನವಾಸದೇಶಮೊಳ್ಪಂ ಪಡೆಗುಂ ||1162||

### ಬಲ್ಲಾಳ II

ಉದಯಿಸಿದನಮೃತವಾರ್ಧಿಯೊ | ಳುದಯಂಗೆಯ್ವಮರಭೂಜಮೆಂಬಿನೆಗಂ ಜೆ |
ಲ್ವೊದವಿರೆ ಬಲ್ಲಾಳನೃಪಂ|ಯದುಕುಲದೊಳ್ ವಿಶದಕೀರ್ತಿ ದಾನಾಭರಣಂ||1163||

ಧುರರಂಗಂ ನೃತ್ಯರಂಗಂ ಪರನೃಪತಿಕಪಾಲಾಳಿ ತಾಳಾಳಿ ನಕ್ತಂ |
ಚರಿಯರ್ಕಳ್ ಪಾಡುವರ್ ತದ್ವಿಜಯರುಹಯಶಂ ದುಂದುಭಿಧ್ವಾನಮಾಗು ||
ತ್ತಿರೆ ವಿದ್ವಿಷ್ಟಾವನೀಪಾಳಕನಿಕರದ ರುಂಡಂಗಳಿಂ ತಾಂಡವಾಡಂ |
ಬರಮಂ ಮಾಟ್ಪೊಳ್ಪಿನಿಂ ನಟ್ಟವಿಗನೆನಿಸಿದಂ ವೀರಬಲ್ಲಾಳಭೂಪಂ ||1164||

ಪಗೆವರ ಪೆಂಡಿರ ಕಣ್ಣಿಂ | ದೊಗೆದಂಜನಪಂಕಿತಾಂಬುವಿಂದಂ ಬೆಳಕಂ |
ಮಿಗುವುದು ವಿಚಿತ್ರಮಿಂತಿದು | ಜಗದೊಳ್ ಬಲ್ಲಾಳಭೂಪನಿಜವಿಶದಯಶಂ||1165||

### ಮಸಣಗಾವುಂಡ

ವನವಾಸದೇಶಭೂಷಣ | ನೆನಿಪಂ ಗಾವುಂಡಮಂಡನಂ ದಿಕ್ಕಾಂತಾ |
ಸ್ತನಮಂಡಳಪರಿಶೋಭಿತ | ಘನತರತೇಜಃಪ್ರಕಾಶಘುಸೃಣಂ ಮಸಣಂ ||1166||

### ಕೀರ್ತಿಗಾವುಂಡ

ದ್ಯುನದೀಪ್ರೋತ್ತುಂಗರಂಗದ್ಬಹಳಲಹರಿಕಾಂದೋಳನೋದ್ಭೂತಸಂಘಾ |
ತನಮೇರೂದ್ಯಲ್ಲತಾಂತಾವಳಿವಳಯಿತಡಿಂಡೀರಪಿಂಡಪ್ರಭಾಮಂ ||

ಡನಪಾಂಡುಪೌತ್ರಿ ಥಕೀರ್ತಿಪ್ರಸರವಿಸರಿತೋರ್ವೀನಭಶ್ಚಕ್ರದಿಕ್ಚ |
ಕ್ರನಿಕಾಯಂ ತಾನೆನಿಪ್ಪೊಂದೆಸಕದಿನೆನಸುಂ ಕೀರ್ತಿಗಾವುಂಡನಾದಂ ||1167||

ಆರ್ತೀವ ದಾನಿಯಂ ಧರೆ ' ಕೀರ್ತಿಕುಮುಭಿಮಾನಮೂರ್ತಿಯಂ ಘನತೇಜ |
ಸ್ಫೂರ್ತಿಯನೀಪ್ರಭುಮಂಡನ | ಕೀರ್ತಿಯನಂಗಭವಮೂರ್ತಿಯಂ ಪ್ರಿಯ
ದಿಂದಂ ||1168||

**ಮಹಾದೇವಚಮೂಪ**

ವಿತತೈಶ್ವರ್ಯನುಮಾಧಿನಾಥವಿಭವಂ ರಾಜಪ್ರಿಯಂ ವಾಹಿನೀ |
ಪತಿ ಭೋಗೀಶ್ವರಭೂಷಣಂ ನುತವೃಷಾಂಕಂ ಕೇಶವಪ್ರೇಮವಿ ||
ಶ್ರುತನೆಂಬೊಳ್ಪೆನಸುಂ ವಿರಾಜಿಸೆ ಮಹಾದೇವಂ ಮಹಾದೇವನೆಂ |
ಬ ತದೀಯಾಂಕಮನಸ್ವಿತಾರ್ಥಮೆನಲರ್ಥವ್ಯಕ್ತಿಯಂ ಮಾಡಿದಂ ||1169||

ಸುಮನೋಭೂಧರರಾಜಿತಂ ವಿಪುಳಶಾಖಂ ಬಂಧುರಸ್ಕಂಧಮೂ |
ರ್ತಿ ಮಹೀಜಾತವರಂ ಸುಪತ್ರಸಿಜಯಸ್ತುತ್ಯಂ ಧರಾಶೇಖರಾಂ |
ಘ್ರಿ ಮಹೋದಾರಿ ದಲೆಂಬ ತನ್ನೆಸಕದಿಂದಂ ಭವ್ಯಕಲ್ಪಾವನೀ |
ಜಮೆನಿಪ್ಪಂ ವಿಬುಧಸ್ತುತಂ ವಿಭು ಮಹಾದೇವಂ ಚಮೂಪೋತ್ತಮಂ ||1170||

ಕವಿರಿಪು ಗುರು ಗುರುರಿಪು ಭೃಗು|ವವರೇವರೆನಲ್ ಧರಿತ್ರಿ ಕವಿಗುರುಜನತೋ |
ದ್ಭವವೊದವೆ ಮಂತ್ರಗುಣಮೊ | ಪ್ಪುವುದು ಮಹಾದೇವದಂಡನಾಥೋತ್ತಮ
ನೊಳ್ ||1171||

---

## 231 ಚೆನ್ನರಾಯಪಟ್ಟಣ 243-44. 1209

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಹಾಪ್ರಧಾನ ಕೇಶಿರಾಜನು ಬೆಳುಗಲಿ ಯನ್ನು ಕೇಶವಪುರವೆಂಬ ಅಗ್ರಹಾರಮಾಡಿ ಕೆರೆಗಳನ್ನು ಕಟ್ಟಿಸಿ ಕೇಶವ ದೇವಾಲಯುವನೆತ್ತಿಸಿ ಆದಕ್ಕೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

**ಸಳ**

ಸಳನೆಂಬೊಂ ಯಾದವೇಂದ್ರಂ ಶಶಕಪುರದ ವಾಸಂತಿಕಾದೇವಿಯಂ ಸಿ|
ಶ್ಚಳಮಂತ್ರಂ ಮಾಣದಾರಾಧಿಸೆ ಬನದೊಳಗಾಭೀಳಶಾರ್ದೂಳಮಾಭೂ ||
ತಳನಾಥಂಗೆಯ್ದೆ ಕಂಡಾಜಿನಮುನಿ ಸೆಳೆಯಂ ಕೊಟ್ಟು ಶಾರ್ದೂಳಮಂ ಪೊಯ್ |
ಸಳ ಎಂದಂ ಪೊಯ್ದೊಡಾತಂಗೆಸೆದುದು ಜಗದೊಳ್ ಪೊಯ್ಸಳೋರ್ವೀಶ
ನಾಮಂ ||1172||

### ಎರೆಯಂಗ

ಆವಿನಯಾದಿತ್ಯನ ಸುತ ನೀಪಸುಧಾತಳದ ಕಲ್ಪತರು ವಂದಿಜನ |
ಕ್ಕೀವೆಡೆಯೊಳ್ ಮಱೆವೊಕ್ಕೊಡೆ ಕಾವೆಡೆಯೊಳ್ ಖೇಚರನೆನಿಸಿದಂ ನೃಪ
ತಿಲಕಂ ||1173||

### ಎರೆಯಂಗನ ಮಹಿಷಿ ಏಚಲೆ

ಎಱೆಯಂಗದೇವನರಸಿಯು | ಸಱಿಯುಂ ಪೊಗೞಲ್ ಫಣೀಂದ್ರನುಂ ಸುರ
ಪತಿಯುಂ |
ನೆಱಿಯುಂ ನೋಡಲ್ ಸೊಬಗಿನ|ನೆಱಿವ್ರಂ ರೂಪಿನ ಬೆಡಂಗುಮಾಸತಿಗಧಿಕಂ||1174||

### ವಿಷ್ಣುವರ್ಧನ

ಅವರೊಳ್ ವಿಷ್ಣುನೃಪಾಳಂ | ಭುವನಾಧಿಪನಾದನಾದಿರಾಜರ ಚರಿತ್ರ |
ಕ್ಕವನೊರೆಗಲ್ಲಾದಂ ತ್ರೈ | ಭುವನಾಂತರ್ವರ್ತಿಕೀರ್ತಿವಲ್ಲಭನಾದಂ ||1175||
ನೆಟ್ಟನೆ ಬಿಟ್ಟದೇವನೊಳಿದಿರ್ಚಿದರಾತಿನೃಪಾಳನಾವನುಂ |
ಕೆಟ್ಟನೆ ಕಂಡು ತನ್ನೊಡಮೆಯೆಲ್ಲಮನೋವದೆ ಕೊಟ್ಟು ಪೊಣ್ಟು. ||
ಪಿಟ್ಟಿಗಮಿರ್ದಸಿರ್ದನೆ ನಿಜಾನ್ವಯರಾಜ್ಯದೊಳೆಂದರಾತಿಗಳ್ !
ಬಿಟ್ಟು ವಿರೋಧಮಂ ಬಿಡದೆ ಕಾಲ್ವಿಡಿದಂದುದುಗೆಯ್ವರಾಗಳುಂ ||1176||

### ನಾರಸಿಂಹ I

ಆನರಸಿಂಹನೃಪಾಲಕ | ನಾನಲರಾತಿನೃಪರಿಲ್ಲ ಭೂತಳದೊಳ್ ಕೈ |
ಯಾನಲಧನರ್ಕಳಿಲ್ಲೆನೆ | ತಾನಿಱಿವಂ ಪಿರಿದನೀವನಿಭರಿಪುಶೌರ್ಯಂ ||1177||

### ಬಲ್ಲಾಳ II

ಅವಿಧೇಯಕ್ಷೋಣಿಭೃತ್ಸಂತತಿ ಸಮರದೊಳಾವೀರಬಲ್ಲಾಳಧಾತ್ರೀ |
ಧವನೊಳ್ ಮಾರಾಂತು ನಿಂದಂದವನ ಭುಜಭುಜಂಗೋಗ್ರದಂಷ್ಟ್ರಾಗ್ರಭಿನ್ನ ||
ಪ್ರವಿಘಾತಾಘೀಳಕಾಯೋತ್ಥಿತರುಧಿರಜಳಾಸಕ್ತನಕ್ತಂಚರೀನ್ಯ |
ತ್ಯವಿಳಾಸಾಳೋಕನಪ್ರೀತಿಯನೊದವಿಸದೇ ನಾರದಂಗಂ ಜವಂಗಂ ||1178||

### ನಾರಸಿಂಹ II

ದಿವಿಜೇಂದ್ರೇಭಕ್ಕೆ ಕೊಂಬುರ್ವರೆಯು ಕಮಮನೆತ್ತಿಬಟ್ಟುವರ್ಕಂಗೆ ತೇಜಂ |
ತವದುರ್ಕಂ ತಾಳ್ದಿ ಕೂರ್ಪಿಂದೆಸೆವ ಮಿಸುಪ ವಜ್ರಕ್ಕೆ ಬಲ್ಪುಗ್ರದೈತ್ಯಾ ||
ಟವಿಯಂ ತನ್ನಿಚ್ಛೆಯಿಂ ತಳ್ತುಳುರ್ವ ಬಗೆಯು ಭರ್ಗಂಗೆ ಭಾಳಾಂಬಕಂ ಪು |
ಟ್ಟುವವೋಲ್ ಬಲ್ಲಾಳರಾಯಂಗತುಳಭುಜಬಳಂ ಪುಟ್ಟಿದಂ ನಾರಸಿಂಹಂ ||1179||

ನರಸಿಂಹರಾಯನುದ್ಧತ | ಕರಾಸಿಗಗನಾಹಿ ನುಂಗುವುದು ಸಂಗರದೊಳ್ |
ನರತುರಗಕರಿಕಳಂಕಾ | ಕರಮೆನಿಪರಿರಾಯವಿಪುಳವಿಧುಮಂಡಳಮಂ ||1180||

### ನಾರಸಿಂಹನ ಸೋದರಿ ಸೋವಲದೇವಿ

ಹರಿಯೊಡವುಟ್ಟಿದಂದಿನ ಸುಭದ್ರೆಯೊ ರುಕ್ಮಿಯ ತಂಗೆಯಾದಳಾ |
ಸಿರಿಯೆನೆ ಸಂದ ರುಕ್ಮಿಣಿಯೊ ಮದ್ರನೃಪಾನುಜೆಯಾದ ಮಾದ್ರಿಯೋ ||
ನಿರುಪಮಮಪ್ಪ ರೂಪವತಿ ಸಚ್ಚರಿತಾನ್ವಿತೆಯೆಂದು ಬಣ್ಣಿಕುಂ |
ಧರೆ ನರಸಿಂಹರಾಯನೊಡವುಟ್ಟಿದ ಸೋವಲದೇವಿರಾಣಿಯಂ ||1181||

ತೋಳೆ ಪೊದಱ್ದು ನೀಳ್ದ ವಿಟಪಂ ಕರಶಾಖೆಗಳಳ್ಳೆಗೊಂಬಿನೊಂ |
ದೋಳಿ ತಳಂ ವಿರಾಜಿಪ ತಳಿರ್ ನಖರಂ ಕುಸುಮಾಳಿ ಪೂಣ್ದು ಸ |
ಲ್ಲೀಲೆಯಿನೀವ ಕಾಂಚನಮೆ ತಳ್ತಿಡಿದಿರ್ದ ಫಲೌಘಮಾಗೆ ಬ |
ಲ್ಲಾಳನ ಪುತ್ರಿ ಕಲ್ಪಕುಜದಂದದೆ ಸೋವಲದೇವಿ ಕೊಟ್ಟಪಳ್ ||1182||

### ಕೇಶಿರಾಜ

ದಿಗಿಭವ್ರಾತದೊಳಿಂದ್ರದಂತಿ ದಿಗಧೀಶವ್ರಾತದೊಳ್ ಶಕ್ರನ |
ಬ್ಧಿಗಳೊಳ್ ಪಾಲ್ಗಡಲದ್ರಿಸಂಕುಲದೊಳಸ್ವರ್ಣಾದ್ರಿ ದೇವರ್ಕಳೊಳ್ ||
ನಗಜಾವಲ್ಲಭನಿರ್ಪ ಪೆಂಪುವಡೆದಿರ್ಪಂ ಹೊಯ್ಸಳೋರ್ವೀಶಮಂ |
ತ್ರಿಗಳೊಳ್ ಕೇಶವದಂಡನಾಯಕನನೂನಶ್ರೀಗಧಿಷ್ಠಾಯಕಂ ||1183||

ಜಲನಿಧಿಯಂ ಜಕ್ಕುಲಿಸುವ | ಕುಲನಗಮಂ ನಗುವ ಕೆಱೆಗಳಂ ದೇಗುಲಮಂ |
ಕಲಿಯುಗಕಾನೀನಂ ಬೆ | ಳ್ಗಲಿಯೊಳ್ ಕೇಶವಚಮೂವರಂ ಮಾಡಿಸಿದಂ ||1184||

ಸಿಖಿಳಚಮೂಪರ ನುಡಿ ಜಳ | ಲಿಖಿತಂ ಕೇಶವಚಮೂವರಂ ಚತುರಚತು |
ರ್ಮುಖನಾಡಿದ ನುಡಿಯೆ ಶಿಲಾ|ಲಿಖಿತಂ ಬಲ್ಲಾಳಭೂಮಿಪಾಳನ ಸಭೆಯೊಳ್||1185||

---

## 232 ಶಿಕಾರಿಪುರ 196. 1212

**ಈ ನಿಸಿದಿಗಲ್ಲಿನಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಜಕ್ಕವ್ವೆ ಸನ್ಯಾಸನವಿಧಿಯಿಂದ ಜೀವವನ್ನು ತೊರೆದು ಸ್ವರ್ಗಸ್ಥಳಾದಂತೆ ಹೇಳಿದೆ.**

ಸಲೆ ಮೋಹಧ್ವಾಂತದಿಂದಂ ಮುಗಿದ ಹೃದಯನೀರೇಜಮಂ ಜೈನವಾಕ್ಯಾ |
ಮಲಭಾನುಜ್ಯೋತಿಯಿಂದಂ ವಿಕಚಿಸಿಯುದಱೊಳ್ ದೇವದೇವೇಶನಂ ನಿ ||

ಶ್ಚಲಮಾಗಿರ್ದಾ(ತ್ಮ) ಸಂತೋಷದೊಳೆ ಜಿನಪನಂ ಜಾಸಿಸುತ್ತಾಲತಾಕೋ |
ಮಲೆ ಬಿಟ್ಟಳ್ ಜಕ್ಕಿಯಕ್ಕಂ ತನುವನುಱಿದರಾರ್ ಪೋಲ್ವರೆಂಬಂತು ತನ್ನಂ||1186||

ನೆಱೆಯೆ ಘುನೀಂದ್ರರುಂ ಪೊಗೞ್ವಿಣಂ ತಲೆದೂಗೆ ಪರಿಗ್ರಹಂಗಳಂ |
ತೊಱೆದು ಗೃಹೀತಸನ್ಯಸನದಿಂ ನಿಜಬಾಂಧವಮೋಹಪಾಶಮಂ ||
ಪಱಿದು ಸುವೃತ್ತೆ ಜಕ್ಕಲೆ ಮಹಾಸತಿ ಚಿತ್ತಮನಾಪ್ತತತ್ವದೊಳ್ |
ಸಿಱಿಸಿ ಸಮಾಧಿಯಿಂ ನೆಱೆಯೆ ಸಾಧಿಸಿದಳ್ ಸುರಲೋಕಸೌಖ್ಯಮಂ ||1187||

ತಳರ್ದಿರದೇಕಪಾರ್ಶ್ವನಿಯಮಸ್ಥಿತಿ ದೃಷ್ಟಿ ಸುನಾಸಿಕಾಗ್ರದಿಂ |
ಕಳಿವೆಡೆ ಬಲ್ಪು ಬಳ್ಕಿರದೆ ಮೆಯ್ ಮಿಡುಕಾಡದೆ ಜೈನಭಕ್ತಿ ಸಂ ||
ಚಳಿಸದೆ ಮಾಣದುಚ್ಚರಿಸಿ ಪಂಚಪದಂಗಳನಾತ್ಮತತ್ವದೊಳ್ |
ನೆಲಸಿದ ಸತ್ಸಮಾಧಿವಿಧಿ ಜಕ್ಕಲೆನಾರಿಗಿದೆಕ್ಕಲಾವಣಂ ||1188||

ತತ್ವಮನಾಜಿನೇಂದ್ರಮತದಿಂ ತಿಳಿದುಜ್ವಳಮಾದ ಶುದ್ಧದೃ |
ಷ್ಟಿತ್ವಗುಣಾರ್ಕನಿಂದಲರೆ ಶೀಲಗುಣವ್ರತವಾರಿಜಾಳಿ ಮಿ ||
ಥ್ಯಾತ್ವತಮಸ್ತಮಂ ಪರೆಯೆ ಸತ್ಪಥವರ್ತಿನಿಯಾಗಿ ಶುದ್ಧಸಂ |
ವಿತ್ಪದಿನೆಯ್ದಿದಳ್ ನೆಗೞ್ದ ಜಕ್ಕಲೆನಾರಿ ಸುರೇಂದ್ರಲೋಕಮಂ ||1189||

ಲಲಿತಪತಿವ್ರತಾಚರಣಚಾರುನದೀಸಲಿಲಪ್ರವಾಹದಿಂ |
ಕಲಿಮಲಮಂ ಕಱಲ್ಚಿ ನಿಜನಿರ್ಮಳಕೀರ್ತಿಲತಾವಿತಾನಮಂ ||
ಬಳೆಯಿಸಿ ಶೀಲಶಾಲಿವನಮಂ ಪರಿವರ್ಧಿಸಿ ಪುಣ್ಯನಂದನಂ |
ಗಳನೆ ನಿಮಿರ್ಚಿ ಜಕ್ಕಲೆ ವಲಂ ಪಡೆದಳ್ ಸುಮನೋವಿಭೂತಿಯಂ ||1190||

ಪರಿಕಿಸಿ ಸದ್ಬುಧರ್ ಪೊಗೞೆ ತನ್ನ ಚರಿತ್ರಗುಣಾಂಕಮಾಲೆಯಂ |
ವಿರಚಿಸಿ ಸುಪ್ರಬಂಧಮನೆ ದಿಕ್ಕುಳಭಿತ್ತಿಗಳೊಳ್ ತೆರಳ್ಚಿ ಮುಂ ||
ಬರೆದುದಸೀಗಳಾದಿವಿಜಲೋಕದೊಳೊಪ್ಪುವ ಲೇಖಜಾಳದೊಳ್ |
ಬರೆಯಿಪೆನೆಂದು ಜಕ್ಕಲೆಮಹಾಸತಿಯೇಱಿದಳಲ್ತೆ ಸಗ್ಗಮಂ ||1191||

---

## 233 ಸೊರಬ 276· 1215

**ಇದರಲ್ಲಿ ಸೇವುಣರಾಜನಾದ ಸಿಂಹಣನ ಆಳಿಕೆಯಲ್ಲಿ ಅವನ ಅಧಿಕಾರಿಗಳೊಳಗೆ ಹಲವರು ಕುಪ್ಪಟೂರು ಕೋಟಿನಾಥದೇವರಿಗೆ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ಕುಪ್ಪಟೂರು

ಅಳಿಗಿಳಿವಿಂಡಿನಿಂದುಲಿವ ನಂದನದಿಂ ಕಳಹಂಸಮತ್ತಕೋ |
ಕಿಳಕಳನಾದದಿಂದೆಸೆವಲಗ್ಗೊಳನಿಂ ಬೆಳೆದೊಪ್ಪಿ ತೋರ್ಪ ಕೆ ||
ಯ್ಗೊಲನಿನನೇಕರತ್ನಮಣಿಕೂಟದಿನೊಪ್ಪುವ ದೇವತಾಲಯಂ |
ಗಳಿನ ಱಿ ಕುಪ್ಪಟೂರಾ ಕರಮೆ ರಂಜಿಸುಗುಂ ಧರಣೀತಳಾಗ್ರದೊಳ್ ||1192||

### ಸಿಂಹಣ

ಬಲದಿಂ ಧಾತ್ರಿಯೊಳುಳ್ಳ ಭೂಭುಜರುಮಂ ದೋರ್ವಿಕ್ರಮೋದ್ಯಚ್ಛಿಖೋ |
ಜ್ವಳನಿಂದಂ ನೆಱಿ ಸುಟ್ಟು ವೈರಿಲಲನಾವೈಧವ್ಯಮಂ ಮಾಡಿ ಕುಂ ||
ದಲತಾಂತೋಜ್ವಳಕೀರ್ತಿಯಂ ಮೆಱಿದು ಪಾರಾವಾರಪರ್ಯಂತ ಮಾ |
ರ್ತಲೆಯಿಲ್ಲೆಂಬ ನೆಗೞ್ತೆವೆತ್ತನತುಳಂ ಶ್ರೀಸಿಂಹಣೋರ್ವೀಶ್ವರಂ ||1193||

---

## 234 ಹೊನ್ನಾಳಿ 48. 1216

**ಈ ವೀರಗಲ್ಲಿನಲ್ಲಿ ಸೇವುಣರಾಜನಾದ ಸಿಂಹಣದೇವನ ಆಳಿಕೆಯಲ್ಲಿ ಸಿಂದರಾಜನಾದ ಈಶ್ವರದೇವರಸನ ಆಜ್ಞೆಯಿಂದ ಚೆಣ್ಣಯ್ಯನು ತುರುಗೋಳಿನಲ್ಲಿ ಕಾದಿ ಸತ್ತನೆಂದು ಹೇಳಿದೆ.**

ಮಾದನಬಾಗಂ ಬೇಡರ್ | ಭೇದಿಸಿ ಪಾಯ್ದುಱಿದು ತುಱುಗಳಂ ಕೈಕೊಂಡೀ |
ಪೋದರೆನೆ ಮುಳಿದ ಜವನಂ | ತಾದಂ ಜೆನ್ನಟ್ಟಿ ಪಟ್ಟಸಾಹಣಿ ಚಿಣ್ಣಂ ||1194||
ಭರದಿಂದಂ ಪರಿದೆಯ್ದಿ ಬೇಡವಡೆಯಂ ಕಂಡಾರ್ದು ಬೆಂಕೊಂಡು ತ |
ತ್ತುರಗಂ ವಾಯುಜವಾಧಿಕಂ ಪರಿಯಿಸುತ್ತುಂ ಕುತ್ತಿ ಕೊಂದಿಕ್ಕಿ ತ ||
ಚ್ಛಿರಮಂ ತಾಂ ಪೊಡೆಸೆಂಡನಾಡೆ ಪದಪಿಂದಾಳ್ದಂ ಕರಂ ಮೆಚ್ಚಿಲ |
ಚ್ಚರಿಯಾಗಲ್ ತುಱುವಂ ಮಗುೞ್ಚಿ ಪಗೆಯಂ ಪರ್ದಿಂಗೆ ಬಿರ್ದಿಕ್ಕಿದಂ ||1195||

---

## 235 ಬೇಲೂರು 136. 1217

**ಇದರಲ್ಲಿ ಹೊಯ್ಸಳರಾಜನಾದ 2ನೆಯ ಬಲ್ಲಾಳನ ಆಳಿಕೆಯಲ್ಲಿ ಶಿವನಯ್ಯನು ಶಿವನಯ್ಯನಹಳ್ಳಿಯಲ್ಲಿ ಶಿವಲಿಂಗೇಶ್ವರದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ಯಾದವವಂಶ

ಸಿರಿಗೆ ತವರ್ಮನೆ ವಿಷ್ಣುಗೆ । ಪರಮೋತ್ಸವಭೂಮಿ ನಿರ್ಮಳಂ ವಿಸ್ತೀರ್ಣಂ ।
ನಿರತಂ ಪಾಲ್ಗಡಲೊಳ್ಪಿಂ । ಪೊರೆದುದು ಗಂಭೀರಮಾದ ಯಾದವವಂಶಂ ॥1196॥

### ವಿನಯಾದಿತ್ಯ

ವಿನಯಂ ಪ್ರತಾಪಮೆಂಬೀ । ಜನನಾಥೋಚಿತಚರಿತ್ರಯುಗದಿಂ ಜಗಮಂ ।
ಜನನಯನಮೆನಿಸಿ ಪೊರೆದಂ । ವಿನಯಾದಿತ್ಯಂ ಸಮಸ್ತಭುವನಸ್ತುತ್ಯಂ ॥1197॥

### ಎರೆಯಂಗ

ಆತಂಗತಿಮಹಿಮಂ ಹಿಮ । ಸೇತುಸಮಾಖ್ಯಾತಕೀರ್ತಿ ಮೂರ್ತಿಮನೋಜಂ ।
ಪಾತಿತಸಂಗರರಿಪುನೃಪ । ಜಾತಂ ತನುಜಾತನಾದನೆಱೆಯಂಗನೃಪಂ ॥1198॥

---

## 236 ಕಡೂರು 129. 1218

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಮಹಿಷಿ ಬೈಚಲದೇವಿ ಪ್ರಸನ್ನಮಾಧವದೇವಸ್ಥಾನವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಬಲ್ಲಾಳ II

ವರಕೂರ್ಮಂಗಮಹೀಶ್ವರಂಗಮಖಿಳಾಶಾದಂತಿಗಂ ದುರ್ವಹಂ ।
ಪಿರಿದುಂ ಭೂಭರಮೆಂದು ತನ್ನ ಭುಜದೊಳ್ ಕೇಯೂರಮಂ ತಾಳ್ದುವಂ ॥
ತಿರೆ ಸರ್ವೋರ್ವರೆಯಂ ದಯಾಪರತೆಗಾಯೌಚಿತ್ಯಮೆಂಬಂತೆ ಸಾ ।
ದರದಿಂ ತಾಳ್ದಿದನಪ್ರತರ್ಕ್ಯಮಹಿಮಂ ಬಲ್ಲಾಳಭೂಪಾಳಕಂ ॥1199॥

ಅರಿಭೂಭೃದ್ಗಿರಿದುರ್ಗಸಂಗಭಿದುರಜ್ವಾಳಾನಳಂ ವೈರಿಭೀ ।
ಕರನಾನಾವನದುರ್ಗನಿರ್ಗತರುವದ್ದಾವಾನಳಂ ಶತ್ರುಬಂ ॥
ಧುರಮಾದ್ಯಜ್ಜಳದುರ್ಗವರ್ಗಮಹದುಗ್ರೌರ್ವಾನಳಂ ತಾನೆನಲ್ ।
ದೊರೆ ಬಲ್ಲಾಳನೃಪಾಳಭೈರವತರಪ್ರೋದ್ಯತ್ಪ್ರತಾಪಾನಳಂ ॥1200॥

ಪರಭೂಪಾಳಬಳೋಗ್ರವಾರಿನಿಧಿಯಂ ಪ್ರೋಚ್ಚಂಡದೋರ್ದಂಡಮಂ ।
ದರದಿಂದೋವದೆ ಮಾಡಿ ತಾಂ ಪ್ರಮಥನಪ್ರಾರಂಭಮಂ ಭದ್ರಸಿಂ ॥
ಧುರಜಾತ್ಯಶ್ವಸಮೂಹಮಂ ಘನತರಶ್ರೀಯಂ ಜಯಶ್ರೀಯನಿಂ ।
ತು ರಣಪ್ರಾಂಗಣರಂಗದೊಳ್ ಪಡೆದನಾಬಲ್ಲಾಳಭೂಪಾಳಕಂ ॥1201॥

ರತಿಯುಂ ಬೈಚಲದೇವಿ ಪುಷ್ಪಶರನಂ ಬಲ್ಲಾಳನಾಭೂಮಿಭೃ |
ತ್ಸುತೆಯುಂ ಬೈಚಲದೇವಿ ಚಂದ್ರಧರನಂ ಬಲ್ಲಾಳನಂಭೋರುಹ ||
ಸ್ಥಿತೆಯುಂ ಬೈಚಲದೇವಿ ಚಕ್ರಧರನಂ ಬಲ್ಲಾಳನನ್ಯೋನ್ಯಸಂ |
ಗತಿಯಿಂ ಪೋಲ್ಪರೆನಲ್ಕದೇವೊಗಳ್ವುದೋ ಸೌಭಾಗ್ಯಸಂಪತ್ತಿಯಂ ||1202||

ಮಾಧವಪುರ

ಕ್ಷೀರಾಂಭೋನಿಧಿಯುಂ ತಟಾಕನಿಕರಂ ಕಲ್ಪಾಂಘ್ರಿಪೋದ್ಯಾನಮುಂ |
ಚಾರೂದ್ಯಾನವನಂ ಮುನಿಪ್ರಕರಮುಂ ವಿಪ್ರವ್ರಜಂ ಲಕ್ಷ್ಮಿಯುಂ ||
ಪೌರಸ್ತ್ರೀನಿವಹಂ ಕುಳಾದ್ರಿಕುಳಮುಂ ಪ್ರಾಸಾದಸಂದೋಹವಿ |
ಸ್ತಾರಂ ಪೋಲ್ತಿರೆ ಸಂದ ಮಾಧವಪುರಂ ಸಂತಂ ಬಸಂತಂ ಕರಂ ||1203||

ಪುದಿದೆತ್ತಂ ದೋರೆವಣ್ಣಾಯ್ಗೊನೆಯಿನೊಲೆವ ಪೊಂಬಾಳೆ ಪೆಣ್ಬುಂಬೆಗಳ್ ಮು |
ತ್ತಿದ ಚೆನ್ನೆಯ್ದಲ್ಗೊಳಂ ಬೇರ್ವಿಡಿದು ತುದಿವರಂ ತೋರವಣ್ಣೇಱಿದೊಳ್ಪ ||
ಕ್ಕೆ ದಳತ್ಪದ್ಮಾಕರಂ ಬಣ್ಗೊನೆದಳೆದೆಳಗೌಂಗಜ್ಜನೀರ್ಗಾಯ್ಗಳಂ ಪೇ |
ಱಿದ ಜೆಂದೆಂಗೋಳಿಯುಂ ಮಾಧವಪುರವರದುದ್ಯಾನದೊಳ್ ಕುಂದವೆಂದುಂ||1204||

ಮಾಧವ

ಭುವನನುತೇಂದಿರೋನ್ನತಘನಸ್ತನಕುಂಕುಮಪಂಕರಾಗಪ |
ಲ್ಲವಿತವಿಶಾಲವಕ್ಷನಖಿಳಾಮರಚಾರುಕಿರೀಟಕೋಟಿಸಂ ||
ಭವಕಿರಣೌಘಕೇಸರಿತಪಾದಪಯೋಜಯುಗಂ ಪ್ರಸನ್ನಮಾ |
ಧವನಭಿವಾಂಛಿತಾರ್ಥಫಲಮುಂ ಕುಡುತಿರ್ಕೆ ಜಗಕ್ಕೆ ಸಂತತಂ ||1205||

---

## 237 ಸಾಗರ 15. 1218

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಬಾಳೆಯಮ್ಮವೆರ್ಗಡೆ ಕಲಿಸೆಯಲ್ಲಿ ಸೋಮನಾಥದೇವಸ್ಥಾನವನ್ನು ಕಟ್ಟಿಸಿದನೆಂದು ಹೇಳಿದೆ.

ಬಾಳೆಯಮ್ಮ

ನಿಸ್ಸಾಣಧ್ವನಿತಂಬಟಸ್ಫುಟಢಡಂಢಂನಾದಭೀತರ್ ಪಲರ್ |
ನಿಸ್ಸತ್ವರ್ ಬಿಸುಟೋಡಿ ನಾಡ ನಗರೀಭಂಡಾರಮುಂ ಪೆಂಡಿರಂ ||
ಸುಸ್ಪಷ್ಟರ್ ಗಿರಿಗಹ್ವರಸ್ಥರದಟರ್ ಮಾಱಾಂತು ತತ್ಖಡ್ಗದಿಂ |
ಸುಸ್ಪಷ್ಟರ್ ಕೆಲರೆಂಬ ಕೌತುಕಮಿದೇಂ ಪ್ರೋದ್ದಾಮನೋ ಬಾಳೆಮಂ ||1206||

ಸೂಸುವ ನೆತ್ತರುಣ್ಮುವ ನೆಣಂ ಪೊಱಪೊಣ್ಮುವ ಕೋಱುಮ್ಮದುಳ್ ಪೊದ |
ಱ್ದಾಸುರಮಾಗೆ ಸೋರ್ವ ಕರುಳಾಕರುಳ್ಗಾಟಿಪ ಬಳ್ಳು ಬಳ್ಳುವಂ ||
ಸೋಸುವ ವೀರರಟ್ಟೆ ಭಟರಟ್ಟೆಯನಟ್ಟುವ ಭೂತಕೋಟಿಯಿಂ |
ದಾಸುರಮಾಯ್ತು ಮಂಡಳಿಕಬಾಳೆಗನಾಂತಿಱಿದಾಹವಾಂಗಣಂ ||1207||

ಮೂಳೆಯಃ ಸನ್ನೆಗಾಳೆಪಿಡಿಯಲ್ ನೊರೆನೆತ್ತರನೀಂಟಿ ಸೊಕ್ಕಿ ಕ |
ಣ್ಣಾಲಿಯ ಮಾಲೆಸೂಡಿ ಬಲುಗಂಡದ ದಂಡೆಯನೊಪ್ಪೆ ಕಟ್ಟಿಕೊಂ ||
ಡಾಳಿಸಿಯುಟ್ಟು ಪಂಡೊವಲನಾಹವದೊಳ್ ನಲಿದಾಡಿ ಪಾಡಿದರ್ |
ಸೂಳೆಮರುಳ್ಗಳುಗ್ಗಡಿಸಿ ಹೆಗ್ಗಡೆಬಾಳೆಗನಂಕಮಾಲೆಯಂ ||1208||

ಅದಟರ ಗಂಡನಂಜದರ ಗಂಡನದಿರ್ಪರ ಗಂಡನಾಜಿಗ |
ಳ್ಕದ ಮದವದ್ವಿರೋಧಿಗಳ ಗಂಡನುದಗ್ರರ ಗಂಡನದ್ಭುತಾ ||
ಸ್ಪದಕದನಪ್ರಚಂಡನೊಳುಗಂಡನೆರೞ್ಪಡೆ ಮೆಚ್ಚೆ ಗಂಡನೆಂ |
ಬುದು ಕದನೋಗ್ರಮಂಡಳಿಕಬಾಳೆಗನಗ್ಗದ ಕಾಹಳಾರವಂ ||1209||

ತೊಡರ್ದರನೊತ್ತಿ ತೊಂಡರನವುಂಕಿ ಕಡಂಗುವರಂ ಕೞಲ್ಚಿ ಮಾ |
ರ್ಪಡೆಯ ವಿರೋಧಿಯಂ ತವಿಸಿ ಮೀಱಿದರಂ ಮುಱಿದಾಂತುದಗ್ರರಂ ||
ಕಡೆಕಳಕಿಕ್ಕಿ ಗಂಡಗಳಗತ್ತರಿ ಬಾಳೆಮಮಂಡಲೀಕ ತಾಂ |
ಪಡೆದನಪಾರಶೌರ್ಯಮಪಿಮೋನ್ನತಿಯಂ ವಸುಧಾತಳಾಗ್ರದೊಳ್ ||1210||

---

## 238 ಸೊರಬ 224. 1218

ಈ ವೀರಗಲ್ಲಿನಲ್ಲಿ ಕಾದಂಬಚಕ್ರವರ್ತಿ ಮಲ್ಲಿದೇವರಸನ ಆಳಿಕೆಯಲ್ಲಿ ಬಿಸವನು ಕಳ್ಳರೊಡನೆ ಕಾದಿ ಸತ್ತನೆಂದು ಹೇಳಿದೆ.

ತಾಗಿದೊಡೆ ಮುಳಿದು ಕಳ್ಳರ್ | ಪೋಗದೆ ನಿಲ್ ನಿಲ್ಲೆನುತ್ತೆ ಕವಿತರೆ ಬಿಸವಂ |
ರಾಗಿಸಿ ಬೊಬ್ಬಿಱಿದಳ್ಕದೆ | ನಾಗಂಗಳ ಕಂಡ ಗರುಡನಂತಾಂತಿಱಿದಂ ||1211||

ಜವನುಂಡು ಕಾಱಿದಂದದಿ|ನವಂದಿರಂ ಕೊಂದು ಬಿಸವ ತಾಂ ಬಸವೞಿಯ |
ಲ್ಕವನಂ ವಿಮಾನದೊಳ್ ವಾ|ಸವನ ಪುರಕ್ಕೊಯ್ದರಮರಗಣಿಕೆಯರೊಲವಿಂ||1212||

---

## 239 ನಾಗಮಂಗಲ 29. 1219

ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಸಾಮಂತ ಮಲ್ಲನಾಯಕನು ನಾಸಲ ಕೆರೆಯ ಮಲ್ಲಿಕಾರ್ಜುನದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.

## ಬಲ್ಲಾಳ II

ಘನಕೂರ್ಮೋತ್ಕೃಷ್ಟಪಾಂಸುಪ್ರಚಯಶಯನದಿಂದೆಬ್ಬಿ ಶೇಷಸ್ಫಟಾಕಾ |
ನನದೊಳ್ ತಾನಾಡಿ ದಿಕ್ಕುಂಜರನಿಬಿಡದೃಢಸ್ಕಂಧಮಂ ನೆರ್ಮಿ ಗೋತ್ರಾ ||
ವನಿಭೃತ್ಕುಂಜಂಗಳೊಳ್ ಸಂಚರಿಸಿ ಪದುಳಮಿರ್ದಪ್ಪುದುದ್ದಾಮದೊಳ್ ಕುಂ |
ಭಿನಿಯೀಗಳ್ ವೀರಬಲ್ಲಾಳನ ವಿಜಯಭುಜಾಳಾನದೊಳ್ ಲೀಲೆಯಿಂದಂ ||1213||

## ಬಲ್ಲಾಳನ ಮಹಿಷಿ ಪದ್ಮಲೆ

ಕುಲದೊಂದುನ್ನತಿ ರೂಪಿನೊಂದತಿಶಯಂ ಸೌಭಾಗ್ಯದೊಂದುದ್ಭವಂ |
ಸಲೆ ಸಂಪತ್ತಿಯೊಳೊಂದಿದೊಂದಧಿಕಪುಣ್ಯಾಂ ಧಾತ್ರಿಯಂ ತನ್ನ ತೋ ||
ಳ್ವಲದಿಂದಾಳ್ವ ಸುಪುತ್ರನಂ ಪಡೆದ ಸೈಪೇನುಂಟೊ ಪೇೞ್ವಂದು ಪ |
ದ್ಮಲಮಾದೇವಿಯೊಳಲ್ಲದೀಯದುನ್ನೃಪಾಳಪ್ರೇಯಸೀವರ್ಗದೊಳ್ ||1214||

## ಮಲ್ಲನಾಯಕ

ಇದಿರೊಳೆ ಪಣ್ತ ಕಲ್ಪಕುಜದಾರವೆಯಿಂತಿದೆ ಬೇಡುವಂಗೆ ಮೆ |
ಚ್ಚದೆ ಬಲಗರ್ವಮಂ ನುಡಿವವಂಗೆ ಕೃತಾಂತನ ಕಾಲದಂಡಮಿಂ ||
ತಿದೆ ಶರಣೆಂಬವಂಗೆ ಖಚರೇಶ್ವರನಾರ್ಪಿದೆ ನೋೞ್ಪುದೆಂದು ಮಾ |
ಣದೆ ಮೆಱೆಗುಂ ಪ್ರತಾಪನಿಧಿ ಮಲ್ಲನ ಬೀರದ ಕಾಹಳಾರವಂ ||1215||

---

## 240 ಅರಸಿಯಕೆರೆ 77. 1219

**ಇದರಲ್ಲಿ ಹೊಯ್ಸಳರಾಜನಾದ II ನೆಯ ಬಲ್ಲಾಳನ ಮಂತ್ರಿ ವಸುಧೈಕಬಾಂಧವ ರೇಚರಸ ಮೊದಲಾದವರು ಅರಸಿಯಕೆರೆಯಲ್ಲಿ ಸಹಸ್ರಕೂಟ ಜಿನ ಬಿಂಬವನ್ನು ಪ್ರತಿಷ್ಠೆಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

## ಯಾ ದ ವ ವಂ ಶ

ಶ್ರೀರಾಮಾವಸಥಂ ಜಗಜ್ಜನನುತಂ ಗೋತ್ರಾಸ್ಪದಂ ಭೂರಿಗಂ |
ಭೀರಂ ಸತ್ವಸಮನ್ವಿತಂ ನಿಖಿಲವಸ್ತುಸ್ಥಾನಮುರ್ವೀತಳಾ ||
ಧಾರಂ ನಿತ್ಯಮುದಾತ್ತಮಪ್ರತಿಮಮೆಂಬೀಪೆರ್ಮೆಯಿಂ ಭಾವಿಸಲ್ |
ಪಾರಾವಾರದವೊಲ್ ನೆಗೞ್ತೆವಡೆದಿರ್ಕುಂ ಯಾದವಾಖ್ಯಾನ್ವಯಂ ||1216||

### ಬಲ್ಲಾಳ II

ಬುಧನಂತಿಳಾವರಂ ಪಾ । ರಿಧಿಯಂತೆ ವಿಶಾಲವಿಲಸದಷಡಕ್ಷ್ಮೀಣಂ ॥
ಮಧುಸಖನಂತಸಮಾಸ್ತ್ರಂ । ಸುಧಾಂಶುಧರನಂತುಮಾಧವಂ ಬಲ್ಲಾಳಂ ॥1217॥

### ರೇಚರಸ

ವದನಂ ವಾಗ್ವನಿತಾವಿಲಾಸಸದನಂ ವಕ್ಷಂ ರಮಾನರ್ತಕೀ ।
ವಿದಿತಾನರ್ತಮುದಾರಮರ್ಥಿಜನತಾಸಂತರ್ಪಣಂ ಕೀರ್ತಿಕೌ ॥
ಮುದಿ ಜೈನಾರ್ಣವವರ್ಧನಂ ಗುಣಗಣಂ ಭೂಭೂಷಣಂ ಮೂರ್ತಿ ಚಾ ।
ರುದಯಾಸ್ಪೀತಮೆನಲ್ಕೆ ರೇಚಣಚಮೂಪಂ ಪೆರ್ಮೆಯಂ ತಾಳ್ದಿದಂ ॥1218॥
ಒಸೆದವರಿವರೆನ್ನದೆ ಸಂ । ತೊಸಮಪ್ಪಿನಮಿತ್ತು ಪಡೆದನೀವನುಮತಿಯೊಳ್ ।
ವಸುಧೈಕಬಂಧುವೆಂಬೀ । ಪೆಸರಂ ರೇಚರಸನುಂತು ದೇಸಿಯಿನಾಯ್ತೋ ॥1219॥

### ಅರಸಿಯಕೆರೆ

ಸತತಭೃಂಗಾಂಭೋಜಷಂಡಂ ಶುಕಪಿಕವಿವಿಧೋದ್ಯಾನಸಂಕೀರ್ಣಮಾಪೂ ।
ರ್ಣತಟಾಕಂ ಗಂಧಶಾಲೀಪರಿಮಳಕಳಿತಂ ಪುಷ್ಪಪುಂಡ್ರೇಕ್ಷುವಾಪೀ ॥
ವೃತಮುತ್ತುಂಗಪ್ರಭಾಭಾಸುರಸುರಗೃಹಸಂಪನ್ನಮುದ್ಯತ್ಪ್ರಜಾಪೂ ।
ರಿತಮುರ್ವೀಮಂಡನಂ ಸಂದರಸಿಯಕೆಱೆಯಂ ಬಣ್ಣಿಸಲ್ ಬಲ್ಲನಾವಂ ॥1220॥

---

## 241 ಬೇಲೂರು 112 ಸು. 1220.

ಇದರಲ್ಲಿ ಹೊಯ್ಸಳರಾಜನಾದ II ನೆಯ ಬಲ್ಲಾಳನು ಸಾಯಲು ತನ್ನ ಸ್ವಾಮಿಯ ಮರಣಾನಂತರ ತಾನು ಬದುಕಿರುವುದು ನಾಚಿಕೆಗೇಡೆಂದು ಭಾವಿಸಿ ಆ ದೊರೆಯ ದಂಡನಾಥನಾದ ಕುವರಲಕ್ಷ್ಮನು ತನ್ನ ಸತಿಯೊಡನೆಯೂ, ತನ್ನ ಕೈಯ ಕೆಳಗಿದ್ದ ಸಾವಿರ ಜನ ವೀರರೊಡನೆಯೂ ಮೃತಿಯನ್ನು ಹೊಂದಿದಂತೆ ಹೇಳಿದೆ.

### ಬಲ್ಲಾಳ II

ದ್ವಿಷದುರ್ವೀಪಾಲರಂ ವಿಕ್ರಮಗುಣನಿಲಯಂ ವೀರಬಲ್ಲಾಳದೇವಂ ।
ವಿಷಮಾರಣ್ಯಾಂಗಳೊಳ್ ನಿರ್ಜರಯುವತಿಯರುತ್ಸಂಗದೊಳ್ ತಮ್ಮ ರಾಜ್ಯಾ ।
ಭಿಷವವ್ಯಾಸಂಗದೊಳ್ ಸಂಗರದೊಳೆಡಱಿ ಬೆನ್ನಿತ್ತರಂ ಸತ್ತರಂ ತ ।
ನ್ನಿಷುವಿಂಗೂಪಾಗವಾಳಾದರನಿರಿಸಿದನೇಂ ಭೂಪರಿಂತಾಗವೇದಾ ॥1221॥

ನೃಗನಳನಹುಷಯುಧಿಷ್ಠಿರ | ಸಗರಭಗೀರಥದಿಲೀಪಪುರುಪುತ್ಸಾಯು |
ರ್ಗಗನಜರಭರತರಾಮಾ | ದಿಗಳಳವೇ ನೆಗೞ್ದ ವೀರಬಲ್ಲಾಳನೃಪಂ ||1222||

ನೃಪರಾರುಂ ವೀರಬಲ್ಲಾಳನೊಳದಿರದೆ ಮಾಱಾಂಪರೇ ಮಾಱ ಶಾರ್ದೂ |
ಳಪತಾಕಾದಂಡಮಲ್ಲಾಡಿದೊಡೆ ಮನದೊಳಲ್ಲಾಡುವರ್ ಪುಲ್ಲೆವಿಂಡಂ ||
ತೆ ಪೊಲಂಗೊಂಡೋಡುವರ್ ಪೊಣ್ಮಿದ ಭಯದೊದವಿಂ ಸಂಗರಕ್ಷೋಣಿಯಿಂದಾಂ|
ತಪೆನೆಂಬಾಗಾಂಪುನೇಪಾರಱಿಯದರೊಳರೇ ಕಾದುವಣ್ಮಾಳ್ಕ ಗಂಡರ್ ||1223||

ಗಿರಿವನಜಲದುರ್ಗಂಗಳ | ನುರವಣೆಯಿಂ ಪವಿವೊಲಗ್ನಿವೋಲ್ ಗ್ರೀಷ್ಮದವೋ |
ಲಿರದೊಡೆವುದು ಸುಡುವುದು ಪುಡಿ | ವರೆ ತವಿಪುದು ಯದುನೃಪಾಲಕೋಪಾ
ಟೋಪಂ ||1224||

ಅಸದಾಳಾಪಕ್ಕೆ ಪಕ್ಕಾಗದ ನುಡಿ ತೊಡರ್ದರ್ಗಂದಾರುಮಂ ಯುದ್ಧದೊಳ್ ಭಂ |
ಗಿಸಿ ಗೆಲ್ಲಂಗೊಳ್ವ ಶೌರ್ಯಂ ನೆರೆದೆರೆಯೆ ಬುಧಶ್ರೇಣಿ ಪೊಣ್ಮೀವ ದಾನ ||
ವ್ಯಸನಂ ಮರ್ಯ್ಯಾದೆಯಂ ದಾಂಟದೆ ವಸುಮತಿಯಂ ಕಾವ ಕಾರುಣ್ಯಮಾವೊಂ |
ಗೆಸೆಗುಂ ಬಲ್ಲಾಳದೇವಂಗೆಸೆಗುಮುಮುಮ ಭೂಪಾಳರಿಂತಾಗವೇಡಾ ||1225||

## ಕುವರಲಕ್ಷ್ಮ

ಎನೆ ನೆಗೞ್ದನೃಪೋತ್ತಮನ ಮಂತ್ರಿಶಿಖಾಮಣಿ ವಂದಿಬೃಂದನಂ |
ದನವನಮಾಧವಂ ಖರಕರಪ್ರತಿಮೋರ್ಜಿತತೇಜನಾಹವಾ ||
ವನಿಯೊಳರಾತಿಭೂಭುಜರನಿಕ್ಕುವ ತಕ್ಕಿನ ವಿಕ್ರಮಾರ್ಜುನಂ |
ಮನುಜಮಹೇಶ್ವರಂ ಕುವರಲಕ್ಷ್ಮನನಿಂದಿತವೀರವಂಶಜಂ ||1226||

ಅರಮನೆ ತೊಟ್ಟಿಲ್ ನೆಗೞ್ದಾ | ದರಮದು ಬಾಯೆಣ್ಣೆ ದಾದಿಯರ್ ಕನ್ನಂತಃ |
ಪುರಮೆನೆ ಬಲ್ಲಾಳನೃಪಂ | ಪೊರೆದ ಮಗಂ ಕುವರಲಕ್ಷ್ಮದಂಡಾಧೀಶಂ ||1227||

ಗುರುವುಂ ದೈವಮುಮಾಳ್ದನೆ | ಪರತ್ರೆಗಂ ತನಗಿಹತ್ರೆಗಂ ಪೆಱನೊರ್ವಂ |
ಗುರುವಿಲ್ಲ ದೈವಮಿಲ್ಲೆನೆ | ಧರೆಗೆಸೆದೊಂ ಕುವರಲಕ್ಷ್ಮದಂಡಾಧೀಶಂ ||1228||

ಅರಮನೆ ನೆರೆಮನೆ ನಂಟಂ | ನರಪತಿ ತನಗಾಪ್ತಪರಿಜನಂ ಸಚಿವರೆನಲ್ |
ದೊರೆವಡೆದಂ ಬಲ್ಲಾಳನ | ಪುರದಳವಿಗೆ ಕುವರಲಕ್ಷ್ಮದಂಡಾಧೀಶಂ ||1229||

ಆಳರಸೆಂಬ ಭೇದಮಿನಿತಪ್ಪೊಡಮಿಲ್ಲಿವರಲ್ಲಿ ತೇಜಮುಂ |
ಲೀಳೆಯು ರಾಜ್ಯಚಿಹ್ನಮುಮವರ್ವರೊಳಂ ಸಮಮಕ್ಕುಮೆಂಬವನಂ ||

ಪಾಳಿಸುವರ್ ಧರಾವಳಯಮಂ ಪರಮೋತ್ಸವದಿಂದೆ ವೀರಬ |
ಲ್ಲಾಳನೃಪಾಳನುಂ ಕುವರಲಕ್ಷ್ಮಚಮೂಪನುಮೇಂ ಸಪುಣ್ಯರೋ ||1230||
ಶ್ರೀಯಂ ಶ್ರೀಧರನಾಯುವಂ ವನಜಜಂ ಗೌರೀವರಂ ಕೀರ್ತಿಯಂ |
ಕಾಯಕ್ಕೊಪ್ಪುವ ಕಾಂತಿಯಂ ವಿಧು ದಿನೇಶಂ ತೇಜಮಂ ಭೋಗಿನೀ ||
ಜಾಯಂ ಭೋಗಮನೆಣ್ಬರುಂ ದಿಗಧಿಪರ್ ತಂತಮ್ಮೊಳುಳ್ಳೊಳ್ಪನೊ |
ಲ್ದೀಯುತ್ತಿರ್ಕೆ ಕುಮಾರಲಕ್ಷ್ಮರಥಿನೀನಾಥಂಗತಿಪ್ರೀತಿಯಿಂ ||1231||
ಧನಮುಂ ಪ್ರಾಣಮುಮೆಂಬಿವಂ ಕುವರಲಕ್ಷ್ಮಂ ವೀರಬಲ್ಲಾಳದೇ |
ವನ ದಾನೋನ್ನತಿಗಂ ಜಯೋನ್ನತಿಗಮೀಯಲ್ ಪೂಣ್ದು ಮುಂದಿಟ್ಟು ರಾ ||
ಮನ ಬೀಡಿಂಗಣುವಂ ಯಮಾತ್ಮಜನ ಬೀಡಿಂಗರ್ಜುನಂ ಚಂದ್ರಜಾ |
ಟನ ಬೀಡಿಂಗೆ ಕುಮಾರನಿರ್ಪ ತೆಱದಿಂದಿರ್ದಪ್ಪನೇಂ ಧೀರನೋ ||1232||
ಸಾಧಿಸಿ ಕೊಟ್ಟನಾಳ್ದ ಯದುವಂಶನಮೇರುಗೆ ಕೂಡೆ ದಕ್ಷಿಣಾಂ |
ಭೋಧಿವರಂ ಧರಾವಳಯಮಂ ಬುಧಕೋಟಿಗೆ ಕೊಟ್ಟನರ್ಥಮಂ ||
ಸಾಧನೆವೋಯ್ತು ಸರ್ವನಿಧಿಯೆಂಬಿನೆಗಂ ದೊರೆಯಾರ್ ಕುಮಾರಲ |
ಕ್ಷ್ಮೀಧರದೇವನೊಳ್ ಪತಿಹಿತಕ್ರಮದೊಳ್ ಪದೆದೀವ ದಾನದೊಳ್ ||1233||
ವಿನಯದ ಪೆರ್ಮೆ ಲಕ್ಷ್ಮಿಗೆ ವಿವೇಕದ ಮೆಯ್ಸಿರಿ ವಾಣಿಗಾಶ್ರಿತ |
ರ್ಗನುನಯದಿಂದಮೀವ ಬಗೆ ದಾನಗುಣಕ್ಕೆ ಕಡಂಗಿ ಸಂಗರಾ |
ವನಿಯೊಳರಾತಿಯಂ ತವಿಪ ತಕ್ಕು ಜಯಾಂಗನೆಗೀಗಳಲ್ತೆ ನೆ |
ಟ್ಟನೆ ದೊರೆವೆತ್ತುದೀಕುವರಲಕ್ಷ್ಮಚಮೂಪನೊಳಾದ ಸಂಗದಿಂ ||1234||
ಎಕ್ಕವದಂ ದಲೀಕುವರಲಕ್ಕೆಯನಾಡಿದ ಮಾತು ಕಲ್ಲೊಳ್ |
ಟ್ಟಕ್ಕರದಂತೆ ಸತ್ಯಪರಿಪಾಳನಶೀಳಮನುಳ್ಳುವಾವ ಕಾ ||
ರ್ಯಕ್ಕಮನರ್ಥಕಂ ಪೆಱರ ಮಾತು ವಿಚಾರಿಸಿ ನೋಡೆ ನೀರೊಳ್ |
ಟ್ಟಕ್ಕರದಂತೆ ಸತ್ಯಪರಿಪಾಳನ ಶೀಳಮನುಳ್ಳುವೆಲ್ಲಿಯುಂ ||1235||
ಅಱುವತ್ತುನಾಲ್ಕು ಕಳೆಗಳೊ| ಳಱಿಯದ ಕಳೆಯಿಲ್ಲ ಕುವರಲಕ್ಷ್ಮಚಮೂಪಂ|
ಗಱಿಯದುವೆರಡೊಳವಿಲ್ಲಿನ | ಲಱಿಯಂ ಸೋಲ್ತಱಿಯನರ್ಥಿಗಂ ಪಗೆ
ವಂಗಂ ||1236||

ಆತಂ ಪತಿಭಕ್ತಿಸಮ | ನ್ವಿತಂ ಬಲ್ಲಾಳಭೂಮಿಪಾಳಂಗೆ ಜಗ |
ತ್ಖ್ಯಾತಚರಿತ್ರಂ ಕೊಟ್ಟಂ | ವೀತಭಯಂ ಭಾಷೆಯಂ ಪ್ರತಾಪವಿನೂತಂ ||1237||

ತೊಡರಂ ದೇಸೆಗೆ ಕಾಲೊಳಿಕ್ಕಿ ಪಡೆದರ್ಥಂ ಬೀಸರಂಬೋಗದಂ |
ತೊಡಲಂ ರಕ್ಷಿಸಿ ನಂಬಿವಾಳ್ದನೆಪಡೊಳ್ ಮತ್ತೊಂದು ಸಂತಾನಮಂ ||
ಪಿಡಿವುದ್ಯೋಗದಿನಿರ್ಪ ಮಾತ್ಯರೆಣೆಯೇ ಬಲ್ಲಾಳದೇವಂಗೆ ಸಂ |
ಗಡಮೆಂತಪ್ಪೆಡೆಯಲ್ಲಿಯುಂ ಕುವರಲಕ್ಷ್ಮಂ ತಾನೆ ತಾತ್ಪರ್ಯದಿಂ ||1238||
ತೊಡರೆಡಗಾಲೊಳೊಪ್ಪುವುದು ಬಲ್ಲಿಗೆಯಂ ಮದದಂತಿಗಿಕ್ಕಿ ಬ |
ಲ್ಪೊಡರಿಸುವೊಂದು ಭಂಗಿಯೊಳೆ ಪೊಂದೊಡರೊಳ್ ತೊಡರ್ದಿರ್ದ ಪಾಪೆಗಳ್ ||
ತೊಡರ ತೊಡರ್ಪಿನೊಳ್ ತೊಡರಲಣ್ಮದ ಭಾಷೆಯಮಾತ್ಯರಂಜಿ ಕಾ |
ಲ್ವಿಡಿದವೊಲಿರ್ಪುವೇಂ ಕುವರಲಕ್ಷ್ಮಚಮೂಪತಿಗಿಂತಿದೊಪ್ಪದೇ ||1239||
ಮುತ್ತಿನ ಪೆಂಡೆಯಂ ಮುರಹರಂ ಕನಕಾದ್ರಿಯೊಳಂದು ಶೇಷನಂ |
ಸುತ್ತಿದ ಭಂಗಿಯಿಂದಮೆಸೆದಿರ್ಪುದು ಪೊನ್ನ ತೊಡರ್ ತದದ್ರಿಯಂ ||
ಸುತ್ತಿದ ಕರ್ಣಿಕಾರವನಮಾಲೆವೊಲಿರ್ಪುದು ಕೊಟ್ಟ ಭಾಷೆಗ |
ಜ್ಜೊತ್ತಿದ ಮಾಱಿಕ್ಕೆಯಿಂ ಕುವರಲಕ್ಷ್ಮಚಮೂಪನ ಪಾದಪದ್ಮದೊಳ್ ||1240||
ತೊಡರುಂ ಪಾಪೆಗಳುಂ ಝಣಜ್ಝಣರವಂ ಕೆಯ್ಗಣ್ಮೆ ವಾಮಾಂಘ್ರಿಯೊಳ್ |
ನುಡಿಯುತ್ತಿರ್ಪುವು ಕೊಟ್ಟ ಭಾಷೆಗಿವನೊಳ್ ಮತ್ತಾರುಮೇನಾಪರೇ ||
ನುಡಿದಂತಣ್ಮಲದೆಂದುಮೆಂಬ ನುಡಿಯುಂ ಬಲ್ಲಾಳದೇವಂಗೆ ಕೈ |
ಪಿಡಿಯುಂ ಕಟ್ಟಿದ ಗೇಣುಮೀತನೆ ವಲಂ ದಂಡೇಶಲಕ್ಷ್ಮೀಧರಂ ||1241||
ತಾರಗೆಯಂತೆ ತಳ್ತೆಸೆವ ಮುತ್ತಿನ ಮೊತ್ತದಿನಾದ ಗಂಡಪೆಂ |
ಡಾರಮುಮಿಕ್ಕೆ ಚಂಪಕನವೋದ್ಗಮದಾಮದ ಚೆಲ್ವನಾಳ್ದು ವಾ ||
ಮಾರುಣಪಾದದೊಳ್ ಪೊಳೆವ ಪೊಂದೊಡರುಂ ಪತಿಭಕ್ತಿಯುಕ್ತಿವಿ |
ಸ್ತಾರಕುಮಾರಲಕ್ಷ್ಮರಥಿನೀಪತಿಗೊಪ್ಪುಗುಮೊಪ್ಪವನ್ಯರೊಳ್ ||1242||
ತಳತಳತೊಳಗುತ್ತುಂ ಪ | ಜ್ಜಳಿಸುವ ಮೌಕ್ತಿಕದ ಪೆಂಡೆಯಂ ವಿಷ್ಣುಪದ |
ಕ್ಕಳವಟ್ಟುದೊಂದು ಧ್ರುವಮಂ | ಡಳದಂದದೆ ಕುವರಲಕ್ಷ್ಮನಂಘ್ರಿಯೊ
ಳೆಸೆಗುಂ ||1243||

ನಿಱಿಸಿದ ವೀರಶಾಸನದ ಕಲ್ ದೊರೆವೆತ್ತ ಯಶೋವಿಳಾಸಮಂ |
ನಿಱಿಸಿದುದಷ್ಟದಿಗ್ವಳಯದೊಳ್ ದೊರೆಯಾವನೊ ಪೊಣ್ದ ಪೊಕ್ಕೆಯಂ ||
ನೆಱಿವುವ ಬಲ್ಪಿನೊಳ್ ಕುವರಲಕ್ಷ್ಮಚಮೂಪತಿಯನ್ನನೆಂದು ತ |
ನ್ನೆಱಕದೆ ಒಣ್ಣಿಕುಂ ಧರಣಿ ಹೊಯ್ಸಳರಾಯನ ಗಂಧಹಸ್ತಿಯುಂ ||1244||

ಒಡನೊಱೆದಾಳ್ದನುಳ್ಳೊಡಮೆಯುಂ ಕವರ್ದಾದೆಡರಲ್ಲಿ ತಮ್ಮ ಸಾ |
ಣಡಿಗಿಡೆ ಕೊಟ್ಟ ಭಾಷೆಗೊದವಲ್ಕಣಮಾಱದೆ ಪಿಂತೆ ಬಾೞ್ವ ಸಿ ||
ಗ್ಗಡಿ ಸಚಿವರ್ಕಳಂ ನಗುವವೋಲೆಸೆದಿರ್ಪುದು ವೀರಶಾಸನಂ |
ಪೊಡವಿಯೊಳೆಂದೊಡಾರ್ ದೊರೆ ಯದುಕ್ಷಿತಿಪಾಲನ ಮಂತ್ರಿ ಲಕ್ಷ್ಮಣನೊಳ್ ||1245||

ಇಲ್ಲದ ಸಲ್ಲದ ಭಾಷೆಗೆ | ಕಲ್ಲಂ ನಿಱಿಸುವರನುಱದೆ ನಗುವವೊಲಿರ್ಕುಂ |
ಪಲ್ಲವಿಸಿ ಕುವರಲಕ್ಷ್ಮನ | ಕಲ್ಲ ಕವಲ್ತೆಸೆವ ಕಾಂತಿ ದಿಗ್ಭಿತ್ತಿಗಳೊಳ್ ||1246||

ದೊರೆ ಪತಿಭಕ್ತಿಗೆ ತನ್ನೊಳ್ | ಗರುಡಂ ಗರುಡಂಗೆ ತಾನೆ ದೊರೆ ಪೆಱರಾರುಂ |
ದೊರೆಯಲ್ಲರೆಂಬ ತೆಱದಿಂ | ದೊರೆಯಾದುವು ತನ್ನ ಗರುಡನೆಸೆವಾಕೃತಿಗಳ್ ||1247||

ವೀರದ ಶಾಸನಮುಂ ಮು | ನ್ನಾರುಂ ನಿಱಿಸಿದವರಿಲ್ಲ ಬಲ್ಲಾಳಧರಿ |
ತ್ರೀರಮಣನ ಮಂತ್ರಿವರಂ | ವೀರಭಟಂ ಕುವರಲಕ್ಷ್ಮದಂಡೇಶನವೋಲ್ ||1248||

ತನ್ನೊಡನೆ ತೊಱೆದ ಸುಭಟರ| ತನ್ನ ಮನಃಪ್ರಿಯೆಯ ತನ್ನ ಪರಮಾಯುಷ್ಯಂ |
ತನ್ನಾಳ್ದಂಗಾಯ್ತೆನಿಸಿದ | ನೇನ್ನೆಟ್ಟನೆ ಕಲಿಯೊ ಕುವರಲಕ್ಷ್ಮಚಮೂಪಂ ||1249||

ಆರ ಮನಕ್ಕೆ ವೀರರಸಮುಜ್ವರಿಯಾಗಿರಲುಣ್ಮಿ ಪೊಣ್ಮದೊ |
ಲ್ವಾರ ಮನಕ್ಕೆ ಹರ್ಷಪುಳಕಂ ತನುವಿಂ ಪೊಱಪೊಣ್ಮದೀಕ್ಷಿಪಂ ||
ದಾರ ಮನಕ್ಕೆ ಭೀತಿಯೊದವಾಗದು ನಿನ್ನಯೆ ಪೊಣ್ಕೆ ರಾಯಸಾ |
ಧಾರ ಕುಮಾರಲಕ್ಷ್ಮರಥಿನೀಶ್ವರ ಭಾವಿಸುವಂದು ನಾಡೆಯುಂ ||1250||

ಬಾಸೆಗೆ ತಪ್ಪುವಂಕದ ನೆಗೞ್ತೆಯ ಲೆಂಕರ ಗಂಡನೆಂಬುದಂ |
ಬೀಸರವಾಗದುದ್ಧರಿಪೊಡೇತೊದಳುದ್ಧರಿಪಂ ವಿರೋಧಿಸಂ ||
ತ್ರಾಸಿತವಿಕ್ರಮಂ ಕುವರಲಕ್ಷ್ಮಚಮೂವರನೊಲ್ದು ಮಾೞ್ಕೆಯಿಂ |
ಬಾಸೆಯನಿತ್ತು ಪುಚ್ಚಱಿವರಲ್ಲದೆ ಬಾಸೆಯನುದ್ಧರಿಪ್ಪರೇ ||1251||

ಇದು ಬಲ್ಲಾಳನೃಪಾಳಕಂಗೆ ಪಿರಿದುಂ ನಿಶ್ಯತ್ರವಮಂ ಮಾೞ್ಪುದ |
ಭ್ಯುದಯಕ್ಕಾಗರಮೆಂದು ಒಣ್ಣಿಸೆ ಜಗಂ ಭಾಸ್ವಚ್ಛಿಲಾಸ್ತಮ್ಭಮಂ ||
ಸದಳಂಕಾರದ ವೀರಶಾಸನಮನೀದಂಡೇಶಲಕ್ಷ್ಮೀವರಂ |
ಸುದತೀಸಂಯುತನೇಱಿದಂ ಪತಿಹಿತವ್ಯಾಪಾರಮಂ ತೋಱಿದಂ ||1252||

## ಇವನ ಹೆಂಡತಿ ಸುಗ್ಗಲದೇವಿ

ಆತನ ಕಾಂತೆ ಕಂತುವಿನ ಕಾಂತೆಗೆ ರಾಮನ ಭಾಮೆಗಬ್ಜಸಂ |
ಜಾತನ ಚಿತ್ತವಲ್ಲಭೆಗೆ ರುದ್ರನ ಮೆಯ್ಯೊಡವಾದ ಭೂಧರೋ ||

ದ್ಭೂತೆಗೆ ಚಂದ್ರನಂಗನೆಗೆ ನಾಗನ ನಾಗಿಣಿಗೇಕೆ ಪೋಲ್ವೆಯಿಾ |
ಭೂತಳದೊಳ್ ಪೆಱರ್ ದೊರೆಯೆ ಸುಗ್ಗಲದೇವಿಗೆ ರಾಯರಾಣಿಯರ್ ||1253||

ವಾರಿಜದರ್ಪಣೇಂದುಮುಖಿ ವಾರಣಹಂಸಮಯೂರಯಾನೆ ಕ |
ಲ್ಹಾರಕುರಂಗಮತ್ಸ್ಯನಿಭಲೋಚನೆ ಕೋಕಿಲಚಾರುಕೀರವೀ ||
ಣಾರವೆ ಕೋಕತಾಳಫಳಹೇಮಘಟಸ್ತನಿಯೆಂದೊಡಾರುಮಿಾ |
ಧಾರಿಣಿಯೊಳ್ ವಧೂತ್ತಮೆಗೆ ಸುಗ್ಗಲದೇವಿಗೆ ಪೋಲ್ವೆಯಪ್ಪರೇ ||1254||

ಈಧರೆಯೊಳ್ ನೆಗೞ್ತೆವಡೆದಿರ್ದ ಪತಿವ್ರತದುನ್ನತಿಕ್ಕೆ ತಾಂ |
ಸಾಧನೆವೋಯ್ತು ಮುಂ ನೆಗೞ್ದರುಂಧತಿಯೊಳ್ ಪದೆದೀಗಳೀಕ್ಷಿಸಲಾ ||
ಸಾಧನೆವೋಯ್ತು ಪೆಂಪುವಡೆದಿರ್ದ ಪತಿವ್ರತದುನ್ನತಿಕ್ಕೆ ಲ |
ಕ್ಷ್ಮೀಧರದಂಡನಾಥನ ಮನಃಪ್ರಿಯೆ ಸುಗ್ಗಲದೇವಿರಾಣಿಯೊಳ್ ||1255||

ಜಯಸಿಂಹಕ್ಷಿತಿಪಾಳಕಂಗೆ ಜಗಮೆಲ್ಲಂ ಬಣ್ಣಿಸಲ್ ಪೂಣ್ದು ಭಾ |
ಷೆಯನಾಸುಗ್ಗಲದೇವಿ ಕೊಟ್ಟ ತೆಱದಿಂ ಬಲ್ಲಾಳಭೂಪೋತ್ತಮ ||
ಪ್ರಿಯಪುತ್ರಂಗೆ ಕುಮಾರಲಕ್ಷ್ಮರಥಿನೀನಾಥಂಗೆ ಕೊಟ್ಟಳ್ ಮನಃ |
ಪ್ರಿಯೆಯಿಾಸುಗ್ಗಲದೇವಿ ಭಾಷೆಯನಿಳಾಚಕ್ರಂ ಪೊಗೞ್ವನ್ನೆಗಂ ||1256||

ಎಡಗಾಲೊಳ್ ತೊಡರಂ ತೊಡರ್ಚಿ ಪತಿಯಂ ಬೇಳ್ಕೊಂಡಿ ನಿಸ್ಸೊಂದು ಪಿಂ |
ಬಡಿನೊಳ್ ನಿಲ್ಪವಳಲ್ಲೆನೆಂದು ಸುಖದಿಂದುಂಡುಟ್ಟು ಕಾಲಂ ಕಳು ||
ತ್ತ್ರಡಸಲ್ ಪುಚ್ಚಱಿವನ್ಯಕಾಮಿನಿಯರಂ ಱೋಡಾಡುವಂತಿಕ್ಕಿದಳ್ |
ತೊಡರಂ ಸುಗ್ಗಲದೇವಿ ತನ್ನೆಡದ ಪಾದಾಂಭೋಜದೊಳ್ ಲೀಲೆಯಿಂ ||1257||

## ಕುವರ ಲಕ್ಷ್ಮನ ಭಟರು

ಧರೆಗೆ ನೆಗೞ್ತೆವೆತ್ತ್ರೆಸೆವ ಶಕ್ತಿಗೆ ಶೂದ್ರಕಭೂಭುಜಂಗೆ ಭಾ |
ಸುರಮೆನೆ ಭಾಷಿತಂ ನೆಱಪುವಗ್ಗದ ವೀರರದಯ್ನೂರಯ್ವದಿಂ ||
ಬರೆ ಸುಭಟೋತ್ತಮರ್ ಕುವರಲಕ್ಷ್ಮಚಮೂಪತಿಗಿತ್ತು ಭಾಷೆಯಂ |
ಧರೆ ಪೊಗೞ್ವನ್ನೆಗಂ ನೆಱಪುವಗ್ಗದ ವೀರರದೊಂದು ಸಾಸಿರಂ ||1258||

ತೊಱೆವಾಳ್ದನೊಡನೆ ಸಾಯದೆ| ಪೆಱಗುೞಿದಂ ತೊಱೆದು ಸತ್ತವನ ವೇಳೆ ದಲಾ|
ವೞೆವೆವದನೆಂಬ ಗಂಡರೆ| ತೊಱೆವರ್ ಕಲಿಕುವರಲಕ್ಷ್ಮನೊಡನತಿಸುಭಟರ್||1259||

---

## 242 ಚೆನ್ನಗಿರಿ 72. · 1220

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ಬಲ್ಲಾಳನ ಆಳಿಕೆಯಲ್ಲಿ ಆಸಂದಿಯ ಪ್ರಭು ವೈಜರಸನ ಸೇವಕ ನಾಳ್ಪ್ರಭು ಕನ್ನಗೌಡನು ಶಿವಾಲಯವನ್ನು ಕಟ್ಟಿಸಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ವಿನಯಾದಿತ್ಯ

ಜಗತೀಕಂಟಕಕೌಶಿಕವ್ರಜಮಡಂಗಲ್ ವಿಷ್ಣುಜೇತಸ್ತ್ರಮಂ |
ಮಿಗೆ ಪಿಂಗಲ್ ಪರರಾಜಮಂಡಲಮುದಾದಂ ಕುಂದಲುಗ್ರಾರಿದೈ ||
ತ್ಯಗಣಂ ಬೆಳ್ಕುಱಲಿಂತು ಹೊಯ್ಸಳಕುಭೃದ್ವಂಶೋದಯಾದ್ರೀಂದ್ರದಿಂ |
ದೊಗೆದಂ ತೇಜಮನಪ್ಪುಕೆಯ್ದು ವಿನಯಾದಿತ್ಯಂ ಜಗಲ್ಲೋಚನಂ ||1260||

### ಎರೆಯಂಗ

ಅಂಗವಿಲಾಸದೆ ರತಿಯೆಱೆ | ಯಂಗಂ ವಿಭವಾತಿಶಯದೆ ಶಚಿಯೆಱೆಯಂಗಂ |
ತುಂಗಭುಜಬಲದೆ ಸಿರಿಯೆಱೆ | ಯಂಗಂ ಮಿಗಿಲೆನಿಸಿ ಸೊಗಯಿಸುವನೆಱೆ
ಯಂಗಂ ||1261||

### ವಿಷ್ಣುವರ್ಧನ

ಪುರಹರನ ಮೂಱು ಕಣ್ಗಳೊ|ಳುರಿಗಣ್ಣ ಪ್ರತಿಮಮಾದವೋಲ್ ಮೂವರ್ ಸೋ|
ದರರೊಳ್ ವಿಕ್ರಮದೊದವಿಂ|ದರಸಾದಂ ವಿಷ್ಣುಮೂರ್ತಿ ವಿಷ್ಣುನರೇಂದ್ರಂ ||1262||

### ನಾರಸಿಂಹ I

ಅಳುರ್ವುದು ತನ್ನ ತೇಜಮರಿಮಂಡಳದಿಂ ರಿಪುಸೈನ್ಯಮಾಂಸದಿಂ |
ತಳಿರ್ವುದು ತನ್ನ ಖಡ್ಗಲತೆ ವೈರಿಯ ಪೆಂಡಿರ ಸುಯ್ಯ ಗಾಳಿಯಿಂ ||
ಮಿಳಿರ್ವುದು ತನ್ನ ಕೇತನಪಟಂ ಧರೆ ತನ್ನ ಸಿತಾತಪತ್ರದಿಂ |
ಕುಳಿರ್ವುದಿದೇನಮಾನುಷಮೊ ರಾಜಗುಣಂ ನರಸಿಂಹದೇವನಾ ||1263||

ಮಗರೆಗನಾಜಿಯೊಳ್ ಸುಗಿದು ಕೊಟ್ಟಿಭಮಿಂತಿವು ಚೋಳನಟ್ಟಿದಾ |
ನೆಗಳಿವು ಪಾಂಡ್ಯನಂ ಸೆಳೆದು ಕಾಡವರಾಯನುಮಿತ್ತ ಮತ್ತಹ ||
ಸ್ತಿಗಳಿವು ನೋಡಿಮೆಂದು ನರಸಿಂಹನ ಬಲ್ಮೆಗೆ ಮೆಚ್ಚಿ ನೋಡುವರ್ |
ಬಗೆಯೊಳಗಳ್ಕಿ ಸಿಂಹಳನ ಲಾಳನ ಗೌಳನ ರಾಯಭಾರಿಗಳ್ ||1264||

ಆನೆಯ ನಾಯಕಂಗೆ ನೆಗೞ್ದಾನೆಯ ನಾಯಕನಲ್ಲದಾನನೆಂ |
ಬೀನುಡಿಯೇವುದೆಂದು ನರಸಿಂಹಮಹೀಪತಿ ನೂಱುಗಾವುದಂ ||

ತಾನಿರದೆತ್ತಿ ಮೂಡಣ ದಿಶಾವರದುದ್ಧತರಂ ಪೊರಳ್ಚಿ ನೂ ।
ಱಾನೆಯನೊಡ್ಡಿದಾಮಗರನಾನೆಗಳಂ ಪಿಡಿತಂದನಶ್ವದಿಂ ॥1265॥

### ಬಲ್ಲಾಳ II

ಅನವದ್ಯೇಕ್ಷಣಮತ್ಸ್ಯನಂಘ್ರಿಕಮಠಂ ಗ್ರೀವಾವರಾಹಂ ಸುಮ ।
ಧ್ಯನೃಸಿಂಹಂ ಕ್ಷಿತಿಮಂಡಳಾಕ್ರಮಣಕೇಳೀವಾಮನಂ ಶತ್ರುಶಾ ॥
ಸನರಾಮತ್ರಿತಯಂ ಸ್ವಯೋಗಬಲಬುದ್ಧಂ ದುಷ್ಟ್ರಜೋನ್ಮಾಥಕ ।
ಲ್ಕಿ ನಿಜಾಧೀಶದಶಾವತಾರನೊಗೆದಂ ಬಲ್ಲಾಳಭೂಪಾಳಕಂ ॥1266॥

### ಅಸಂದಿಯ ಬಮ್ಮಭೂಪ

ಅರಿವರ್ಗಂ ರೌದ್ರಮಾರ್ಗಂಬೆರಸು ದಶಶಿರಾಕಾರದಿಂದಾಜಿಗಣ್ಮಲ್ ।
ಶಿರಮಂ ಬಲ್ವೇಗದಿಂದಂ ದಶರಥತನಯಂ ಪಾಱಲೆಚ್ಚಂತೆ ಮಾಱಾಂ ॥
ತರಿಯಂ ಕಣ್ಣಂಪಿನಾತಂ ರಿಪುಶಿರಮುರುಳಲ್ ಗಂಗವೀರಾರ್ಜುನಂ ಸಂ ।
ಗರಧೀರಂ ಥಿಪ್ಪೆನೆಚ್ಚಂ ಜಯವಧು ನಲವಿಂ ನರ್ತಿಸಲ್ ಬಮ್ಮಭೂಪಂ ॥1267॥

ಪ್ರತಿಪಕ್ಷಕ್ಷಿತಿದಕ್ಷದಕ್ಷಿಣಭುಜಾದಂಡಾರಿದಂಡಾವಿದಾ ।
ರಿತಶತ್ರುಕ್ಷಿತಿಸಂಕುಳಂಗಳೆನಸುಂತೀಬಂದನೀಬಂದನೆಂ ॥
ದತಿವಿಭ್ರಾಂತಿಯಿನುಗ್ರಮಂಡಳಿಕರಂತಲ್ಲಲ್ಲಿಗಂತಂತೆ ಬೆ ।
ರ್ಚುತುಮಿರ್ಪರ್ ಭುಜಶಾಳಿಬರ್ಮನೃಪನೊಳ್ ಮಾಱಾಂಪರೇ ಭೂಭುಜರ್ ॥1268॥

---

## 243 ಹಾಸನ 106. 1221

**ಈ ವೀರಗಲ್ಲಿನಲ್ಲಿ ಹೊಯ್ಸಳರಾಜನಾದ 2ನೆಯ ನಾರಸಿಂಹನ ಆಳಿಕೆಯಲ್ಲಿ ಮಾಧವ ದಣ್ಣಾಯಕನು ವಜ್ರದೇವನ ಮೇಲೆ ದಂಡೆತ್ತಿ ಹೋದಾಗ ಬಮ್ಮನು ಕನರಿ ಕಾಳಗದಲ್ಲಿ ಕಾದಿ ಸತ್ತು ವೀರಸ್ವರ್ಗವನ್ನು ಪಡೆದನೆಂದು ಹೇಳಿದೆ.**

ತೊಲತೊಲಗೆಂದು ಮಾರ್ಮಲೆವ ವಜ್ರನ ಸೇನೆಯನೊಕ್ಕಲಿಕ್ಕಿ ತಾಂ ।
ತೊಲಗದೆ ನಿಂದು ವೈರಿಭಟರಂ ತವೆ ಕೊಂದು ರಣಾಜಿರಂಗದೊಳ್ ॥
ಮಲೆದಿದಿರಾಂತರಂ ತಱಿದು ಕಣ್ಬಸವೊತ್ತುವಿನೊಂದು ತಳ್ಗಿನಿಂ ? ।
ಕಲಿತನಮಂ ನೃಸಿಂಹನರನಾಥನ ನಾಯಕ ಬಮ್ಮನುರ್ವಿಯೊಳ್ ॥1269॥

ಬಱಸಿಡಿಲೆಱಗುವ ತೆಱದಿಂ । ದುಱದಾಂತರಸಿಕ್ಕಿ ಪೊಕ್ಕು ಸಂಗರಧರೆಯೊಳ್ ।
ಕುಱಿದಱಿದಱಿದಂ ಪಲಬರ।ನುಱೆ ಕಲಿ ಸಿಟ್ಟೂರ ಮಾಚಗೌಂಡನ ಬಮ್ಮಂ॥1270॥

## 244 ಚೆನ್ನರಾಯಪಟ್ಟಣ 197. 1223

**ಇದರಲ್ಲಿ ಹೊಯ್ಸಳರಾಜನಾದ 2ನೆಯ ನಾರಸಿಂಹನ ಮಹಾಪ್ರಧಾನ ಅಮಿತ ದಂಡನಾಯಕನು ಸಿವರವೆಂಬ ಗ್ರಾಮವನ್ನು ಅಗ್ರಹಾರಮಾಡಿ ಬ್ರಾಹ್ಮಣರಿಗೆ ಬಿಟ್ಟಂತೆ ಹೇಳಿದೆ.**

### ನಾರಸಿಂಹ II

ಕಡಿತಕ್ಕೇಱಿತ್ತು ನಾಲ್ಕುಂ ಕಡಲ ಕಡೆವರಂ ಧಾತ್ರಿ ಕೀರ್ತಿಸ್ರಜಂ ಸೋ ।
ರ್ಮುಡಿಗಳ್ಗೇಱಿತ್ತು ದಿಕ್ಕಾಂತೆಯರ್ಗೆ ಸಕಳದಿಕ್ಪಾಳರುತ್ತಂಸಮಂ ಪಾ ॥
ಯ್ದುಡರ್ದೇಱಿತ್ತಾಜ್ಞೆ ಸಿಂಹಾಸನಮನೊಸೆದು ತಾನೇಱಿ ಕುಳ್ಳಿರ್ದುದುಂ ನೂ ।
ರ್ಮಡಿವೀರಂ ನಾರಸಿಂಹಂ ಯದುಕುಳತಿಳಕಂ ಸೋಮವಂಶಪ್ರದೀಪಂ ॥1271॥

### ಅಮಿತದಂಡನಾಯಕ

ಸವಖಿಂಡಂ ಬಿಱ್ದ ಶಂತಮ್ಮಿನಿಯರನಮಿತಂ ಗೆಲ್ದು ಸಂಗ್ರಾಮದೊಳ್ ವೈ ।
ರಿವಧೂಸಂತಾನಮೋರಂತಱಿಸುವುದು ಪತತ್ಕುಂಡಳಾಂದೋಳಿತೈಕ ॥
ಶ್ರವಣಂ ಹಸ್ತಾಪ್ಟಟಾಪ್ರಸ್ಫುರಿತಕುಚತಟಂ ನಿರ್ಯದತ್ಯುಷ್ಣಬಾಷ್ಪ ।
ಪ್ಲವಮಸ್ತವ್ಯಸ್ತಕೇಶಂ ಚಳದಳಕಚಯಂ ಗದ್ಗದೋತ್ಕಂಠಕಂಠಂ ॥1272॥
ಕೃತಕೃತ್ಯಾಗಣ್ಯಪುಣ್ಯಾಮಿತವಿತರಣವಿಖ್ಯಾತಿಯಂ ತಾಳ್ದಲೆಂದು ।
ಗ್ರತಪಂಗೆಯ್ಯುತ್ತುಮಿರ್ಕುಂ ಸುರತರು ಸಜಟಾವಲ್ಕಲಂ ಪುಷ್ಪಧೂಳೀ ॥
ಸಿತಭಸ್ಮಾಲೇಪಮಾಲಂಬಿತಫಲವಿಲಸತ್ಕುಂಡಲಂ ಭೃಂಗಮಾಲಾ ।
ವಿಲಸತ್ಕೃಷ್ಣಾಜಿನಂ ಸೇವಿತವನಮುದಕಾಹಾರಮಾಬದ್ಧಮೌನಂ ॥1273॥
ಇಱಿಯಲ್ ಕಲ್ತು ಬಱಿಕ್ಕಮಿಲ್ಲ ಸರಿ ಭಂಗಂ ಶೌರ್ಯದೊಳ್ ಚಾಗಮಂ ।
ಮೆಱಿಯಲ್ ಕಲ್ತು ಒಱಿಕ್ಕಮಿಲ್ಲ ಕಲೆ ಕಂಡೌದಾರ್ಯದೊಳ್ ಪೆರ್ಮೆಯಿಂ ॥
ಪೆಱಿರಾರ್ ಪೊಯ್ಸಳರಾಜ್ಯದೊಳ್ ಪೆಸರ್ಗೊಳಲ್ ದಂಡಾಧಿಪರ್ ಮೀಸಲೇ ।
ಱಱಿವಂ ? ಗೋಸಗೆ ಚಾಗಮೀವನಮಿತಂ ಶೌರ್ಯಾಂಜನಾನಂದನಂ ॥1274॥

### ಅಮಿತ ದಂಡನಾಯಕನ ಮಗ ಬಲ್ಲಾಳ ದಂಡನಾಯಕ

ನರಸಿಂಹಂ ಚಕ್ರಿ ಚಕ್ರಂ ಬಗೆದೆಡೆಗಮಿತಂ ಧಾರೆ ಬಲ್ಲಾಳುದೇವಂ ।
ನರಸಿಂಹಂ ವಜ್ರಿ ವಜ್ರಂ ಸಮರದೊಳಮಿತಂ ಬಲ್ಲು ಬಲ್ಲಾಳುದೇವಂ ॥
ನರಸಿಂಹಂ ಶೂಲಿ ಶೂಲಂ ಪಗೆಯೆರ್ದೆಗಮಿತಂ ಕೂರ್ಪು ಬಲ್ಲಾಳುದೇವಂ ।
ಸೆರಗುಂಟೇ ತಂದೆಮಕ್ಕಳ್ ಪತಿಹಿತವಿಜಯಾರಂಭದೊಳ್ ತಾವೆ ಮುಕ್ಕೆರ್ ॥1275॥

ತೊಡೆ ಮಡ ರೂಪು ರೇಖೆ ದನಿಯೊಟ್ಟಜೆ ಕೂರ್ಪಳವಟ್ಟು ತೋರ್ಪಿನಂ ।
ತೊಡರ್ದ ವಿರೋಧಿರಾಯರಥಿನೀಶರ ನೆತ್ತಿಯ ತುಪ್ಪಸಾಣೆಯೊಳ್ ॥
ಕಿಡಿಗಿಡಿಗುಟ್ಟೆ ಘಾರುಘಣಿಲೆಂಬಿನೆಗಂ ಮಸೆವಂ ಕೃಪಾಣಮಂ ।
ಕಡುಗಲಿ ದಂಡನಾಥನಮಿತಾತ್ಮಜ ಪೇಷಣಹಣ್ಮ ಬಲ್ಲಿಗಂ ॥1276॥

ಇದು ತಾಂ ಸಂದುದು ವಂದಿ ಬಂದು ಮನೆಯೊಳ್ ಕೈವಾರಮಂ ಮಾಡಿ ಜೀ ।
ಡದ ಮುನ್ನೀವುದು ವೀರವೈರಿ ಮೊನೆಯೊಳ್ ಕಟ್ಟೇಱಿಗ್ಗಿಯಿಂ ಥಟ್ಟುವಾ ॥
ಡದ ಮುಂ ಗೆಲ್ವುದು ಭೀತನಳ್ಕಿದಡೆಯೊಳ್ ಕಾಯೆಂದು ಬಾಯ್ವಿಟ್ಟು ನೋ ।
ಡದ ಮುಂ ಕಾವುದು ವೀರಮಾರುತಿಗೆ ಬಲ್ಲಾಳಂಗೆ ಜಾತಿವ್ರತಂ ॥1277॥

---

## 245 ಚೆನ್ನರಾಯಪಟ್ಟಣ 203. 1223

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ಶ್ರೀಕರಣಾಗ್ರಣಿ ವಿಶ್ವನಾಥನು ಕೆಂಬಾಳನ್ನು ಅಗ್ರಹಾರಮಾಡಿ ಬ್ರಾಹ್ಮಣರಿಗೆ ಕೊಟ್ಟಂತೆ ಹೇಳಿದೆ.**

**ನಾರಸಿಂಹ II**

ದೆಸೆಯಂ ತಳ್ಪೊಯ್ದು ಕೀರ್ತಿಪ್ರಸರದೊಡನೆ ಕಾಲ್ಗೂಡಿ ತೀವ್ರಪ್ರತಾಪಂ ।
ರಸೆಯಂ ತಱಿಕೈಸೆ ಬಾಹಾಬಳದೊಡನೆ ತಳಂಗೊಂಡು ರಾಜಾಜ್ಞೆ ಧರ್ಮಾ ॥
ವಸಥಂ ತಾನಾಗೆ ದಾನೋನ್ನತಿಯೊಡನೆ ತಡಂಬೊಕ್ಕು ಸತ್ಯವ್ರತಂ ಕೂ ।
ರಿಸಿದಂ ಶ್ರೀಕಾಂತೆಯಂ ಚೋಳಕುಳಕಮಳಕಂಜಪ್ರಿಯಂ ನಾರಸಿಂಹಂ ॥1278॥

ಅದಿಯಮುಚೇರಪಾಂಡ್ಯಮಕರೋದ್ಧತಕಾಡವರಂ ಕವರ್ತೆಗೊಂ ।
ಡುದನದನೇಕೆ ಬಣ್ಣಿಸುವೆ ಬಣ್ಣಿಸು ಚೋಳನನೆತ್ತಿರಕ್ಕೆ ತಂ ॥
ದುದನೆಳೆ ಸೇತು ಮುಟ್ಟೆ ಜೆಸಕೆಯ್ದುದನಾತ್ರಿಕಳಿಂಗಭೂಪರ ।
ಟ್ಟಿದ ಕಪಿ ಸಾಲೆವೊಕ್ಕಸಮಸಾಹಸಮಂ ನರಸಿಂಹರಾಯನಾ ॥1278॥

ರಸೆಯೊಳಾ ಕೂರ್ಮನಸಿಟ್ಟು ವಾಸುಕಿಯನೂಡಂ ಕೊಟ್ಟು ತೂಗಾಡಿ ನಾ ।
ಲ್ದೆಸೆಗಂ ಜಾಱುಗುಮೆಂದು ಕೀಲಿಱಿದು ಕುತ್ಕೀಲಂಗಳಂ ತಳ್ಗದಂ ॥
ತು ಸೆಱಂಗಿಂಗಜನಾನೆಯಂ ನಿಱಿಪಿನಿತ್ತಾಯಾಸಮೇಕೆಂದು ತೋ ।
ಳ್ವೆಸೆಪೊಳ್ ತಾಳ್ದಿದನುರ್ವರಾರಮಣಿಯಂ ಚೋಳಪ್ರತಿಷ್ಠಾಪಕಂ ॥1280॥

**ಸೋಮೇಶ್ವರ**

ಕರಮಂತಶ್ಶೂನ್ಯಮಾಶಾಕರಿಗೆ ಭುಜಗರಾಜಂ ದ್ವಿಜಿಹ್ವಂ ಕುಳೋರ್ವೀ ।
ಧರನೆಂಬುಂ ಕರ್ಕಶಂಗಳ್ ಕಮಠನಣಮೆ ಮೆಯ್ದೋಱಸೆಂದಿಟ್ಟು ದೋಷೋ ॥

ತ್ಕರಮಂ ಮುಂದಿಟ್ಟು ತನ್ನಂ ತರೆ ಜಯವಧು ಬಂದಿರ್ದಪಳ್ ಕೂರ್ತು ವಿಶ್ವಂ ।
ಭರೆಯೀಗಳ್ ವೀರಸೋಮೇಶ್ವರನರಪಭುಜಾದಂಡದೊಳ್ ಲೀಲೆಯಿಂದಂ ||1281||

ಪೊಸಮಸೆಯ ಧಾರೆಯೊಳ್ ತ । ಳ್ತೆಸೆದಿರೆ ಜಸದಗೆಗಳಂತೆ ಮುತ್ತುಗಳಿದಿರಾ ।
ದಸುಹೃತ್ಕರಿಶಿರಮಂ ಪೋ|ೞ್ದಸಿ ಮಿಸುಪುದು ಸೋಯಿದೇವಭೂವಲ್ಲಭನಾ||1292

## ವಿಶ್ವನಾಥ

ದುಸರಮದಾಗೆ ಭಾರತಿಗೆ ಹಾರಮನೋಯರಮಾಗೆ ಕೋದವೋ ।
ಲೆಸೆವಿನಮಕ್ಕರಂ ಕರಯುಗಂಗಳೊಳಂ ಬರೆವಂ ಬುಧರ್ ಪರೀ ||
ಕ್ಷಿಸಿ ತಲೆದೂಗೆ ಪೇೞ್ವನವಧಾನಶತಂಗಳನಾಗಳುಂ ಶ್ರುತ ।
ವ್ಯಸನತೆ ಲೀಲೆ ಬಾಲ್ಯದೊಳಮೀಕರಣಾಗ್ರಣಿವಿಶ್ವನಾಥನಾ ||1283||

---

## 246 ದಾವಣಗೆರೆ 25. 1224

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ದಂಡನಾಯಕ ಪೋಲಾಳ್ವನು ಹರಿಹರಕ್ಷೇತ್ರದಲ್ಲಿ ಹರಿಹರದೇವಸ್ಥಾನವನ್ನು ಕಟ್ಟಿಸಿ ಗ್ರಾಮವನ್ನು ಬಿಟ್ಟಂತೆ ಹೇಳಿದೆ.**

## ಹರಿಹರದೇವರು

ಶ್ರೀಮಹಿವಾಸ್ಪದಂ ಭುಜಗಚಕ್ರಧರಂ ದ್ವಿಜರಾಜಭೂಷಣಂ ।
ಕಾಮದನರ್ಜುನೋದ್ಧರುಚಿ ಗೋಪಮನೋಹರಮೂರ್ತಿ ಭಾಸ್ವದ ||
ಬ್ಜಾಮಳನೇತ್ರನಾದಿಪುರುಷಂ ಪರಮೇಶ್ವರನೊಲ್ದು ದೇವಚೂ ।
ಡಾಮಣಿ ಸಂತತಂ ಹರಿಹರಂ ಪರಿರಕ್ಷಿಸುತಿರ್ಕೆ ಧಾತ್ರಿಯಂ ||1284||

ಹರಿಯಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇೞ್ವರ್ ಕೆಲಂಬರ್ ।
ಹರನಿಂದಂ ಬಿಟ್ಟು ದೈವಂ ಧರಣಿತಳದೊಳಿಲ್ಲೆಂದು ಪೇೞ್ವರ್ ಕೆಲಂಬರ್ ||
ನರರಾಸಂದೇಹಮಂ ಪಿಂಗಿಸಲತಿಶಯದಿಂ ಕೂಡಲೂರಲ್ಲಿ ಶೋಭಾ ।
ಕರಮಪ್ಪಂತೊಂದೆ ರೂಪಂ ತಳೆದ ಹರಿಹರಂ ಕೂರ್ತು ರಕ್ಷಿಕ್ಕೆ ನಮ್ಮಂ ||1285||

ಸಂದ ಶಿವಂಗೆ ವಿಷ್ಣುವಿನ ರೂಪಮದಾದುದು ವಿಷ್ಣುವಿಂಗೆ ಪೆಂ ।
ಪೊಂದಿ ನೆಗೞ್ತೆವೆತ್ತ ಶಿವರೂಪಮದಾದುದು ವೇದವಾಕ್ಯದಿಂ ||
ದೆಂದದನೆಯ್ದೆ ಸಿಕ್ಷಯಿಸುವಂತಿರೆ ಕೂಡಲೊಳೇಕಮೂರ್ತಿಯಿಂ ।
ನಿಂದ ಜಗನ್ನುತಂ ಹರಿಹರಂ ಪರಿರಕ್ಷಿಸುತಿರ್ಕೆ ಧಾತ್ರಿಯಂ ||1286||

ನಿರವದ್ಯಂ ನಿರ್ವಿಕಲ್ಪಂ ನಿರತಿಶಯಸುಖಾನಂದಮಾದ್ಯಂತಶೂನ್ಯಂ |
ಪರಿಪೂರ್ಣಂ ಚಿನ್ಮಯಂ ವಾಕ್ಕರಣರಹಿತಮಾದಾನಿರಾಕಾರಮಿಂತೀ ||
ಧರೆಯೊಳ್ ಸಾಕಾರಮಾದಂತಿರೆ ನೆಗೞ್ದ ಗುಹಾರಣ್ಯದೊಳ್ ನಿಂದ ದೇವಂ |
ಪರಿರಕ್ಷಿಕ್ಕುರ್ವಿಯಂ ಶ್ರೀಹರಿಹರನಮರಾಧೀಶಸಂಸ್ತೋತ್ರಪಾತ್ರಂ ||1287||

### ವಿಷ್ಣು

ಶ್ರುತಿ ಸಿಂಹಾಸನಮಾಗೆ ಚಾಮರಚಯಂ ಲಕ್ಷ್ಮೀವಿಳಾಸೇಕ್ಷಣ |
ದ್ಯುತಿಯಾಗಾನತದೇವಕೋಟಿಮಣಿರೋಚಿರ್ಮಂಜರೀಪುಂಜಮಾ ||
ರತಿಯಾಗೋಲಗದೊಳ್ ಸ್ವಕೀಯಮಹಿಮಾವಷ್ಟಂಭಮಂ ನಾರದಂ |
ಸ್ತುತಿಗೆಯ್ಯುತ್ತಿರೆ ಪದ್ಮನಾಭನೆಸೆದಂ ಲೋಕೈಕಕಲ್ಪದ್ರುಮಂ ||1288||

### ಸಳ

ಕುಡಿವಾಲಂ ನೆಲನಂ ಪಳಂಚಲೆಯೆ ಕೋಪೋದ್ರೇಕದಿಂ ದಿಟ್ಟಿಗಳ್ |
ಕಿಡಿಯಂ ಸಾಲಿಡೆ ನೀಳ್ದ ಕೇಸುರಿಯವೋಲ್ ಜಿಹ್ವಾದಳಂ ಪೊಣ್ಮೆ ಬ ||
ಳ್ಳಿಡಿಲಂ ದಾಡೆಯ ಕೂರ್ಪದಿರ್ಪ ಹುಲಿಯೊಂದಾಕಸ್ಮಿಕಂ ವಿಸ್ಮಯಂ |
ಬಡುವನ್ನಂ ಘನಘೋರಘರ್ಘರನಿನಾದಂ ಪಾಯ್ದುದುಜ್ಜೃಂಭಿಳಂ ||1289||

ಮುನಿಯಾಹುಲಿಯಂ ಹೊಯ್ ಸಳ | ಎನೆ ಸಳೆಯಿಂ ಹೊಯ್ದು ಕೊಂದು ಹೊಯ್ಸಳನಾದಂ ||1290||

### ಎರೆಯಂಗ

ಮೆಱೆವನೆಱೆಯಂಗನಾತನ | ಕುಱುಪಿನ ಸುತನೆಱಗಿದವರ್ಗೆ ಮಱೆಯೆಱಗಿದವೋಲ್ |
ಕಱೆವಂ ಪೊಮ್ಮಱೆಗಳನುಱ | ದೆಱಗದವಗ್ಗಿಱಗುತಿರ್ಪ ಬಱಸಿಡಿಲೆನಿಪಂ ||1291||

### ವಿಷ್ಣುವರ್ಧನ

ದೆಸೆಯೊಳ್ ನಿಶ್ಚಳಮಿರ್ಪ ದೇವರದೆ ಭಕ್ತ್ಯಾಧ್ಯಾನದಿಂ ದಕ್ಕೆವಾ |
ಜಿಸೆ ಸೇನಾರಜದಿಂ ಕೆಸರ್ಮಸಗೆ ವಾರಾಶಿವ್ರಜಂ ಬಿಟ್ಟು ಘ ||
ಟ್ಟಿಸಿದಂತಾಗೆ ಧರಿತ್ರಿಯೊಳ್ ಜಯನಿಯೋಗೋದ್ಯೋಗದೊಳ್ ಹೋಗಿ ಸಾ |
ಱಿಸಿ ವೀರಾರಿನೃಪಾಳರಂ ಬರಿಸಿದಂ ಮೂವಿಟ್ಟಿಗಂ ಬಿಟ್ಟಿಗಂ ||1292||

## ನಾರಸಿಂಹ I

ಬಲವಂತಂ ಭೀಮನಿಂದಂ ಛಲಿ ಭೃಗುಸುತನಿಂದಂ ಮಹಾತ್ಯಾಗಶೀಲಂ |
ಬಲಿಯಿಂದಂ ಗಂಗೆಯಿಂದಂ ಶುಚಿ ಕುಲಗಿರಿಯಿಂದಂ ಸ್ಥಿರಂ ವಾರ್ಧಿಯಿಂದಂ ||
ಸಲೆ ಗಂಭೀರಂ ಪ್ರತಾಪೋನ್ನತನತುಳದಿನಾಧೀಶನಿಂದಂ ಸಿತಾಂಶಂ |
ಕಲಿಯೆಂತುಂ ಸಿಂಗದಿಂದಂ ಸಮರವಿಜಯವಿಕ್ರಾಂತರಂಹಂ ನೃಸಿಂಹಂ ||1293||

## ಬಲ್ಲಾಳ II

ನರಸಿಂಹಚಕ್ರವರ್ತಿಯ | ಕರಾಳಕರವಾಳತೀವ್ರಧಾರೆಗೆ ಕೂರ್ಪ |
ಜ್ಜರಿಯಾಗೆ ಪುಟ್ಟುವಂತಿರೆ | ಪರಾಕ್ರಮೋದ್ಭಾಸಿ ಪುಟ್ಟಿದಂ ಬಲ್ಲಾಳಂ ||1294||

ಸಂದುಗ್ರಾಹಿತರಕ್ತದಿಂದ ಮಳೆಱಾದತ್ತೀಮಹೀಚಕ್ರಮಿ |
ನ್ನೆಂದಿಂಗಾಱುವುದೊಟ್ಟಿದಟ್ಟೆಗಳ ಬೆಟ್ಟಲ್ಲಿಲ್ಲಿಯುಂ ಬಟ್ಟೆಯಿ ||
ನ್ನೆಂದಿಂಗಪ್ಪುದು ಮಾರಿಗಂ ಹಸಿವದೆಂದಿಂಗಪ್ಪುದೆಂಬನ್ನೆಗಂ |
ಕೊಂದಂ ಸೇವುಣಸೈನ್ಯಮಂ ಬವರದೊಳ್ ಬಲ್ಲಾಳಭೂಪಾಳಕಂ ||1295||

ಎರಡುಂ ಲಕ್ಕಂಬರಂ ಸುತ್ತಣೆಯುರಶನಿಸನ್ನಾಹದಿಂ ಪನ್ನೆರಱ್ಸಿ |
ಸಿರಮಶ್ವಶ್ರೇಣಿ ಮೇಲಂಕವಣಿಯ ಮಣಿಪರ್ಯಾಣದಿಂ ತೋರ್ಕೆವೆತ್ತ ||
ಯ್ತಿರೆ ತನ್ನೊಂದಾನೆಯಿಂ ಸೇವುಣನೃಪಬಳಮಂ ನೂಂಕಿ ಬೆನ್ನಟ್ಟಿ ಕೊಂದಂ |
ಸೊರಟೂರಿಂ ಕೃಷ್ಣವೇಣೀನದಿಯ ತಡಿವರಂ ವೀರಬಲ್ಲಾಳರಾಯಂ ||1296||

ಒಟ್ಟಜೆಮಿಕ್ಕು ಸೊರ್ಕಿ ಕಱೆಗಟ್ಟಿದ ವೈರಿನೃಪಾಳಕರ್ ಛಲಂ |
ಬಟ್ಟಿರೆ ಸಂದೆರಂಬರಗೆ ಮಾನಿ ವಿರಾಟನ ಕೋಟೆ ಗುತ್ತಿ ಬೆ ||
ಳ್ವಟ್ಟಗೆ ಱಟ್ಟಪಳ್ಳಿ ಸೊರಟೂರ್ ಕುಱುಗೋಡೊಳಗಾದ ದುರ್ಗಮಂ |
ತೊಟ್ಟನೆ ಮುತ್ತಿಕೊಂಡಳವನೇವೊಗಱ್ವೆಂ ಗಿರಿದುರ್ಗಮಲ್ಲನಾ ||1297||

## ನಾರಸಿಂಹ II

ಸಿರಿವಕ್ಷೋರಂಗದೊಳ್ ನರ್ತಿಸೆ ವಿಜಯಭುಜಾದಂಡದೊಳ್ ವಿಕ್ರಮಶ್ರೀ |
ಯಿರೆ ವಕ್ತ್ರಾಂಭೋಜದೊಳ್ ವಾಗ್ವನಿತೆ ನೆಲಸೆ ತನ್ನಾಜ್ಞೆ ವಿದ್ವಿಷ್ಟಭೂಪಾ ||
ಳರ ಕೋಟೀರಂಗಳೊಳ್ ವರ್ತಿಸೆ ವಿಶದಯಶಂ ಪರ್ಜೆ ವಾರಾಶಿತೀರಂ |
ಬರಮಾಳ್ವಂ ವಿಶ್ವಧಾತ್ರೀತಳಮನತಿಬಳಂ ರಾಯರೊಳ್ ನಾರಸಿಂಹಂ ||1298||

ಕದನದ ಗೆಲ್ಲವೊಂದೆರಡು ಮೂಱಿನೆ ಲೆಕ್ಕಿಸಲುಂಟೆ ಸೇವುಣರ್ !
ಕುಧಿವಿದಿರಾಂತು ಸತ್ತುದನೆ ಬಣ್ಣಿಪೆನಿಂ ಗದೆಯಿಂದೆ ಭೀಮನೂ ||

ಱಿದ ಕುರುಭೂಮಿಯಿಲ್ಲ ಕಲಿರಾಯನೃಸಿಂಹನ ಪಟ್ಟದಾನೆ ಮೆ |
ಟ್ಟದ ರಣರಂಗಮಿಲ್ಲಮಮ ಬಾಪ್ಪು ಜಯಂ ತನಗೆಕ್ಕಲಾಪಣಂ ||1293||

ಜವರಾತೂ ಜಗದೇಕವೀರು ಮಝು ದೇವಾರೋಹಕೂ ಬಾಪು ಜಾ |
ದವನಾರಾಯಣು ನಾರಸಿಂಗು ಭಲ ಎಂದಗ್ಗಿಂಗೆ ತಾಂ ಮೆಚ್ಚಿ ತೂ ||
ಗುವವ್ರೋಲ್ ವಿಕ್ರಮಪಾಳಪಾವುಸಶಿರಃಕಂಜಂಗಳಲ್ಲಾಡುತಿ |
ರ್ದುವು ತನ್ನಾನೆಯ ಹೊನ್ನ ಡೆಂಬೆಯದ ಜಂಚಕ್ಕೇತುದಂಡಂಗಳೊಳ್ ||1294||

ಕಡೆದಮರಾದ್ರಿಯಿಂ ಕಡಲನಂದು ಸುರಾಸುರರೊಂದೆ ದಂತಿಯಂ |
ಪಡೆದರದಿರ್ಕೆ ಪಾಂಡ್ಯಮಕರೋದ್ಧತಕಾಡವಸೈನ್ಯಮೆಂಬ ಪೆ ||
ರ್ಗ್ಗಡಲನಳುರ್ಕೆಯಿಂದೆ ಭುಜಮಂದರದಿಂ ಕಡೆದುಸ್ಮದೇಭಮಂ |
ಪಡೆದನನೇಕಮಂ ಯದುಕುಳಾಭರಣಂ ನರಸಿಂಹವಲ್ಲಭಂ ||1295||

ಮೊದಲೊಳ್ ವಿಕ್ರಮಪಾಳಪಾವುಸರನಿತ್ತಲ್ ಕೊಂದನತ್ತಲ್ ಪೊರ |
ಳ್ಚಿದನಾಕಾಡವರಾಯನಂ ಮಗರನಂ ಪಾಂಡ್ಯೇಶನಂ ಕೊಂಡನು ||
ನ್ಮದಗಂಧೇಭಮನೊಲ್ದು ಪಟ್ಟಮನದಂ ಜೋಳಂಗೆ ಮುಂದಿಟ್ಟು ಕ |
ಟ್ಟಿದನಾಸೇತುವಿನೊಳ್ ನೃಸಿಂಹನದಟಿಂ ನಟ್ಟಂ ಜಯಸ್ತಂಭಮಂ ||1296||

## ನಾರಣಪುರ

ವಾರವಧೂಕನತ್ಕನಕಕಂಕಣಝುಂಕೃತಿಯಿಂ ಮದೇಭಘಂ |
ಟಾರವದಿಂ ರಸಂ ಮಸಗೆ ಪಾಡುವ ಗಾಯಕಬೃಂದದೊಂದು ಗೀ ||
ತಾರವದಿಂ ಜಗಜ್ಜನಕೆ ರಾಗಮನಿತ್ತು ಸುಖಕ್ಕೆ ಸಂತತಂ |
ಕಾರಣಮಾಗಿ ನಾರಣಪುರಂ ಪರಿರಂಜಿಪುದಂಧ್ರದೇಶದೊಳ್ ||1297||

## ಪೋಲಾಳ್ವ

ಸಮರಕ್ಕಾಯುಧಮೀವ ಕೆಯ್ ವಿಶರಣಕ್ಕಾಲೋಜನಕ್ಕಾಪ್ತಮಂ |
ತ್ರಿ ಮಿಗಿಲ್ಗಣ್ ಪರದುರ್ಗವರ್ಗವಿಜಯಕ್ಕಾಸ್ಥಾನರಂಗಕ್ಕೆ ರ ||
ತ್ನಮಯಾಕಲ್ಪಮೆನಿಪ್ಪನಂ ನೆಗೞ್ದ ಬಲ್ಲಾಳಂಗಮಾನಾರಸಿಂ |
ಹಮಹೀಶಂಗಮುಮಾನ್ಯನಾದನಧಿಕಂ ಪೋಲಾಳ್ವದಂಡಾಧಿಪಂ ||1298||

ರಣದೊಳ್ ತೆಂಕಣರಾಯನಂಕದ ಚತುಸ್ಸೈನ್ಯೋತ್ಕರಂ ದಂಡೆಯು |
ಡ್ಡಣಮೀತಂ ಸಭೆಯೊಳ್ ಸಮಸ್ತಸಚಿವರ್ ಲೆಪ್ಪಂಗಳೆಂತೆಂಬ ಮಂ ||

ತಣದೊಳ್ ನಾಲಗೆಯೀತನಿಂ ಸಚಿವರಂ ದಂಡೇಶರಂ ಬಲ್ಲೊಡಿ |
ನ್ನೆಣಿಸಾ ಕಾರ್ಯದ ಖಡ್ಗದಗ್ಗಳಿಕೆಯೊಳ್ ಪೋಲಾಳ್ವನಂ ಪೋಲ್ವರಂ ||1299||

ಧರಣೀಪಾಳರ್ಕಳುಂ ಮಂತ್ರಿಗಳುಮಿತರರಿಲ್ಲೆಂದು ಜೊಟ್ಟೆತ್ತಿದೆಂ ರಾ |
ಯರೊಳಂತಾನಾರಸಿಂಹಂ ಸಚಿವರೊಳೆಸಕಂಬೆತ್ತ ಪೋಲಾಳ್ವನೀಯಿ |
ರ್ವರೆ ಶೌರ್ಯಂ ಕಾರ್ಯಮೊಂಕಿರ್ದೆಡೆಯೊಳದಟಿನಿಂ ಗೆಲ್ದರಾರತ್ತ ಬಾಣೋ |
ದರನಂ ನಿನ್ನಂತಿರಾರ್ ಹೊಯ್ಸಳನ ಸಕಳಸಾಮ್ರಾಜ್ಯಮಂ ಕಾದರಿತ್ತಲ್ ||1300||

ಇದು ವಿದ್ಯಾಲಕ್ಷ್ಮಿ ನಿರ್ಮತ್ಸರತೆಯಸದಳಂ ಜವ್ವನಂಬೆತ್ತ ರೂಪಿಂ |
ತಿದು ಗಂಗಾಪೂರಪೂತಂ ನಡೆವಳಿಯಿದು ವಿಕ್ರಾಂತಮುತ್ಸೇಕಮೆಂದುಂ ||
ಪದನಂ ಪೋಲಾಳ್ವದಂಡಾಧಿಪ ಪಡೆಯದು ನಿನ್ನಲ್ಲಿ ಮುನ್ನಾವುದೋ ನೋಂ |
ತುದು ಸಯ್ಪಿಂದಾರನಾರಾಧಿಸಿ ಪಡೆದನೊ ನಿನ್ನನ್ನನಂ ಪದ್ಮಗರ್ಭಂ ||1301||

ಜಗಮಂ ಝುಂಪಿಸುತಿರ್ಪ ಕೀರ್ತಿ ಮುಗಿಲಂ ಮುಟ್ಟಿರ್ಪ ಪೆಂಪಂಬುರಾ |
ಶಿಗೆ ಮಾಱಿಂಡಲಮಾದ ಗುಣ್ಪು ಪತಿರಾಜ್ಯಶ್ರೀಗಡಪ್ಪಾದ ಮಂ ||
ತ್ರಗುಣಂ ರಾಗಮನುರ್ವಿಗೀವ ಸಿರಿ ಸಾಯುಜ್ಯಾದಿಸಂಪತ್ತಿಯುಂ |
ನಗುತಿರ್ಪಚ್ಯುತಭಕ್ತಿ ತನ್ನೊಳೆನಿಪಂ ಪೋಲಾಳ್ವದಂಡಾಧಿಪಂ ||1302||

## ಹರಿಹರದೇವಸ್ಥಾನ

ದೆಸೆವೆಣ್ಗಳ್ ನೆಲೆಗೊಂಡ ಪುತ್ತಳಿಗಳಂ ಗೋತ್ರಾದ್ರಿಗಳ್ ತುಂಗಕೂ |
ಟಸಹಸ್ರಂಗಳನಿಂದುಸೂರ್ಯವಳಯಂಗಳ್ ಪೋಲ್ವಿನಂ ಕಾಂತಿ ಶೋ ||
ಭಿಸೆ ಜೆಂಬೊಂಗಳಸಂಗಳಂ ಹರಿಹರಶ್ರೀಗೇಹಮಂ ಕೂಡೆ ಮಾ |
ಡಿಸಿದಂ ಧಾರ್ಮಿಕಧರ್ಮರಾಜತನಯಂ ಪೋಲಾಳ್ವದಂಡಾಧಿಪಂ ||1303||

ಗಿರಿಯೋ ಕೂಟಮೊ ಸೂರ್ಯನೋ ಕಲಶಮೋ ದಿಗ್ಭಿತ್ತಿಯೋ ಭಿತ್ತಿಯೋ |
ದೊರೆವೆತ್ತಾದೆಸೆವೆಣ್ಗಳೋ ಪರಿಲಸತ್ಪಾಂಚಾಳಿಕಾಜಾಳಮೋ ||
ಪಿರಿದುಂ ನಿಟ್ಟಿಸಬಾರದೆಂದೆನೆ ಜನಂ ಪೋಲಾಳ್ವದಂಡೇಶನ |
ಚ್ಚರಿಯಪ್ಪಂತಿರೆ ಮಾಡಿದಂ ಹರಿಹರಶ್ರೀದೇವತಾವಾಸಮಂ ||1304||

ಇದು ಪದ್ಮಾವಸಥಂ ದಿವಾಕರನವೋಲ್ ಕೀರ್ತ್ಯುನ್ನತಂ ಪಾತ್ರದಾ |
ನದವೋಲ್ ಸತ್ಕುಮುದಂ ಸರೋವರದವೋಲ್ ಘಂಟಾನ್ವಿತಂ ದಿಗ್ಗಜೇಂ ||
ದ್ರದವೋಲ್ ತಾನೆನಿಪನ್ನೆಗಂ ಹರಿಹರಶ್ರೀಗೇಹಮಂ ಮಾಡಿದಂ |
ಯದುಭೂಪಾಳನ ದಂಡನಾಥತಿಳಕಂ ಪೋಲಾಳ್ವದಂಡಾಧಿಪಂ ||1305||

ನಗವಾಯಿಂ ಕುಮುದಂಗಳಿಂ ನೆಗೆದ ಜಂಘಾಕಾಂಡದಿಂ ರನ್ನವ |
ಟ್ಟಿಗೆಯಿಂ ದಂಡಲತಾವಿಚಿತ್ರಮಯಪತ್ರವ್ರಾತದಿಂ ಘಂಟೆಯಿಂ ||
ಬಗೆಯಂ ಬಲ್ಸೆಱಿಗೆಯ್ವ ಪುತ್ತಳಿಗಳಿಂ ರಂಗಸ್ಥಳೀಸ್ತಂಭಮಾ |
ವಗಮೊಪ್ಪುತ್ತಿರೆ ರಂಜಿಕುಂ ಹರಿಹರಶ್ರೀದೇವತಾಮಂದಿರಂ ||1306||

---

## 247 ಗುಬ್ಬಿ 11. 1226

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ಮಹಾಪ್ರಧಾನನೂ ಪದ್ಮಲದೇವಿಯ ಶ್ರೀಕರಣದ ಹೆಗ್ಗಡೆಯೂ ಆದ ನಾಗಣ್ಣನ ಮಗ ನರಸಿಂಗದಣ್ಣಾಯಕನು ಕಲಿದೇವರಿಗೆ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ನಾಗಣ್ಣ

ಸ್ವಸ್ತಿ ಶ್ರೀಮದಗಣ್ಯಪುಣ್ಯಭವನಂ ಬಲ್ಲಾಳಭೂಪಾಳಮಂ |
ತ್ರಿಸ್ತೋಮಾಂಬರಭಾನು ಪದ್ಮಲಮಹಾದೇವೀನಭಾಂಭೋಜಿನೀ ||
ಪ್ರಸ್ತುತ್ಯೋಜ್ವಲಹಂಸನನ್ವಿತನಿಯೋಗೋದ್ಯೋಗಲಕ್ಷ್ಮೀವಧೂ |
ವಿಸ್ತಾರಂ ಭುಜನಿರ್ಜಿತಾನ್ಯಮಹಿಭೃತ್ಸೇನಾಗಣಂ ನಾಗಣಂ ||1307||

ಕುಲದೊಳ್ ಸತ್ಯದೊಳನ್ವಿತಾಚರಣದೊಳ್ ಗಾಂಭೀರ್ಯದೊಳ್ ಧೈರ್ಯದೊಳ್ |
ಚಲದೊಳ್ ಚಾಗದೊಳಿಷ್ಟಶಿಷ್ಟಜನತಾಸಂತುಷ್ಟಿಯೊಳ್ ನೋೞ್ಪೊಡೀ ||
ಕಲಿಕಾಲಂ ತಲೆವಾಗಿಲಂ ಪುಗದದೇನಂ ಬಣ್ಣಿಪೈ ಸಂದ ಪ |
ದ್ಮಲಮಾದೇವಿಯ ರಾಜ್ಯರಂಜಿತಲತಾಪುನ್ನಾಗನಂ ನಾಗನಂ ||1308||

### ನರಸಿಂಗದಣ್ಣಾಯಕ

ತೊಳಪೆಳವೆಱೆ ಕೆಂಜಡೆಯೊಳ್ | ಪಳಚ್ಚನಿರಲಲ್ಲಿ ಬಳಸೆ ಗಂಗಾನದಿ ಕ |
ಣ್ಗೊಳಿಪ ಕಲಿದೇವನತ್ಯು | ಜ್ವಳಕೀರ್ತಿಗೆ ನಾರಸಿಂಹ ನಿನಗೀಗೊಳ್ವಂ ||1309||

---

## 248 ಬೇಲೂರು 151. 1227

**ಇದರಲ್ಲಿ ಹೊಯ್ಸಳರಾಜನಾದ 2 ನೆಯ ನಾರಸಿಂಹನ ಆಳಿಕೆಯಲ್ಲಿ ಸೋಮಯ್ಯ ನಾಗಯ್ಯಗಳು ಸೋಮನಾಥದೇವರ ಪ್ರತಿಷ್ಠೆಯನ್ನು ಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.**

### ನಾರಸಿಂಹ II

ಧುರದೊಳ್ ಬಂದುಱದೊಡ್ಡಿ ನಿಂದರಿಬಳವ್ರಾತಕ್ಕೆ ಕೆಯ್ಯಾಂತು ನಿಂ |
ದೆರೆದರ್ಥಿಪ್ರಕರಕ್ಕೆ ವಾರವನಿತಾನೀಕಕ್ಕೆ ಗಂಭೀರಸಾ ||
ಗರನೀವೀರನೃಸಿಂಹನಾಂತಿಱಯಲೀಯಲ್ ಸೋಲಿಸಲ್ ಸೋಱಿದ್ಪಾಡಾ |
ಹರಿಪುತ್ರಂ ಹರಿಪುತ್ರನಾಹರಿಸುತಂ ತಾನೆಂದೊಡೇವಣ್ಣಿಪೆಂ ||1310||

ಪಾಳಿಸಿ ಜೋಳನಂ ಮಗರನಾನೆಯನರ್ಥಮನೆಯ್ದೆ ಕೊಂಡು ನಿ |
ರ್ಮೂಳಿಸಿ ಪಾಂಡ್ಯಪಲ್ಲವಮಹೀಶರನಾಳ್ವೆಸಗೆಯ್ಸಿ ಕೂಡೆ ಬಾ ||
ಯ್ಕೇಳಿಸಿ ಪೂರ್ವದಿಗ್ಪಳಯಮುಂ ಕಡಲಾಂಕೆಯದಾಗೆ ಶೌರ್ಯದಿಂ |
ದೇಳಿಸಿದಂ ನೃಸಿಂಹನೃಪನಾಜಿಯೊಳಾದಿನೃಪಾಳಜಾಳಮಂ ||1311||

---

### 249 ನಾಗಮಂಗಲ 98. 1230

ಇದರಲ್ಲಿ ಹೊಯ್ಸಳರಾಜನಾದ ಸೋಮೇಶ್ವರನ ಆಳಿಕೆಯಲ್ಲಿ ಕೆಲವರು ಗೌಡರು ಕೊಮ್ಮೇಶ್ವರದೇವರನ್ನು ಪ್ರತಿಷ್ಠೆಮಾಡಿ ಭೂಮಿಯನ್ನು ಬಿಟ್ಟಂತೆ ಹೇಳಿದೆ.

### ಎರೆಯಂಗ

ವಿನಯಾದಿತ್ಯನ ನಂದನಂ ನಿಜಭುಜಾವಷ್ಟಂಭದಿಂ ವಿಶ್ವಮೇ |
ದಿನಿಯಂ ತಾಳ್ದಿದನಾಜಿವೀರನೆಱೆಯಂಗಂ ಹರ್ಷಮಂ ತಾಳ್ದೆ ಮಿ ||
ತ್ರನಿಕಾಯಂ ನಿಜಶತ್ರುಗಳ್ ಭಯಮನೆತ್ತಂ ತಾಳ್ದೆ ಭೀತಾನತರ್ |
ಘನಸಂಪತ್ತಿಯನೆಯ್ದೆ ತಾಳ್ದೆ ದಿಗಧೀಶರ್ ತಾಳ್ದೆ ತನ್ನಾಜ್ಞೆಯಂ ||1312||

### ವಿಷ್ಣುವರ್ಧನ

ಪೆಸರ್ಗೊಂಡಾವಾವ ದೇಶಂಗಳನೆಣಿಸುವುದಾವಾವ ದುರ್ಗಂಗಳಂ ಬ |
ಣ್ಣಿಸಿ ಪೇಱುತ್ತಿರ್ಪುದಾವಾವವನಿಪತಿಗಳಂ ಲೆಕ್ಕಿಸುತ್ತಿರ್ಪುದೆಂಬೊಂ ||
ದೆಸಕಂ ಕೆಯ್ಗಣ್ಮೆ ನಾಲ್ಕುಂ ಕಡಲ ಕಡೆವರಂ ದಿಗ್ಜಯೋತ್ಸಾಹದಿಂ ಸಾ |
ಧಿಸಿದಂ ವಿಕ್ರಾಂತದಿಂ ಸಂದಱಗನೃಪತಿಯಾತ್ಮೋದ್ಭವಂ ಬಿಟ್ಟಿದೇವಂ ||1313||

### ಬಲ್ಲಾಳ II

ಉರದೊಳ್ ಸಪ್ತಾಂಗಲಕ್ಷ್ಮೀವಧು ವಿಜಯಭುಜಾದಂಡದೊಳ್ ವಿಕ್ರಮಶ್ರೀ |
ಧರೆಯೊಳ್ ತನ್ನಾಜ್ಞೆ ತನ್ನೊಳ್ ನೃಗನಳನಹುಷಕ್ಷತ್ರಧರ್ಮಂ ಪದಾಬ್ಜೋ ||

ದರದೊಳ್ ಛೀತ್ತಾನತೌಘಂ ಸುಖಮಿರೆ ಪರಮೋತ್ಸಾಹದಿಂ ವಿಶ್ವವಿಶ್ವಂ |
ಭರೆಯಂ ದೋರ್ದಂಡದೊಳ್ ತಾಳ್ದಿದನತುಳಬಳಂ ವೀರಬಲ್ಲಾಳದೇವಂ ||1314||

## ನಾರಸಿಂಹ II

ನಡೆವನ್ನಂ ನಾರಸಿಂಹಕ್ಷಿತಿಪತಿಯವನೀಪಾಳರೆಲ್ಲಿರ್ದಪರ್ ಬಾ |
ಳ್ವಿಡಿವನ್ನಂ ಕ್ಷತ್ರಿಯರ್ ಸಂಗರಸಮಯದೊಳಾರ್ ನಿಂದಪರ್ ದುರ್ಗಮಂ ಪೊ ||
ಕ್ಕೊಡಮುರ್ವೀಪಾಳರಂ ಪೆಣ್ಣುಡೆಯನುಡಿಸುಗುಂ ತನ್ನ ದೋರ್ದಂಡಶೌರ್ಯಂ |
ಪೊಡೆಕಿಚ್ಚಂ ಕಾಸುತಿರ್ಕುಂ ಕಡೆಯರಸುಗಳಂ ತನ್ನ ತೇಜಃಪ್ರತಾಪಂ ||1315||

## ಸೋಮೇಶ್ವರ

ನೆಲನಂ ಪೊತ್ತಿತ್ತ್ತಿ ನಾಳ್ವರ್ತನದ ಮಹಿಮೆಯಿಂ ಪೊಂಗುವಂ ಕೂರ್ಮರಾಜಂ |
ತಲೆಯೆತ್ತಿರ್ಪಂ ಫಣೀಶಂ ಮದಮನೆಸಗುವಂ ದಿಗ್ಗಜೇಂದ್ರಂ ನಿತಾಂತಂ ||
ಬಲಿದಿರ್ಪಂ ಗೋತ್ರಭೂಭೃದ್ವರನಿದು ನಗೆಯೆಂದುರ್ವಿಯಂ ನಿರ್ವಿಕಾರಂ |
ಬಲದೋಳೊಳ್ ತಾಳ್ದಿ ಪೆಂಪಂ ತಳೆದತುಳಬಳಂ ರಾಯರೊಳ್ ಸೋವಿ
ದೇವಂ ||1316||

ಸಿರಿ ವಕ್ಷೋರಂಗದೊಳ್ ನರ್ತಿಸೆ ವಿಜಯಭುಜಾದಂಡದೊಳ್ ವಿಕ್ರಮಶ್ರೀ |
ಯಿರೆ ವಕ್ತ್ರಾಂಭೋಜದೊಳ್ ವಾಗ್ವನಿತೆ ನೆಲಸೆ ತನ್ನಾಜ್ಞೆ ವಿದ್ವಿಷ್ಟಭೂಪಾ ||
ಳರ ಕೋಟೀರಂಗಳೊಳ್ ನರ್ತಿಸೆ ವಿಶದಯಶಂ ಪರ್ವೆ ವಾರಾಶಿತೀರಂ |
ಬರಮಾಳ್ದಂ ವಿಶ್ವಧಾತ್ರೀತಳಮನತಿಬಳಂ ರಾಯರೊಳ್ ಸೋವಿದೇವಂ ||1317||

ಮುನ್ನಂ ರೂಢಿಯ ಕೃಷ್ಣಕಂಧರನುಮಂ ಮಾರ್ಕೊಂಡು ಚೋಳೋರ್ವಿಯಂ |
ಸಿನ್ನಂತಾರೊಳಪೊಕ್ಕು ಸಾಧಿಸಿದರಾರ್ ಪಾಂಡ್ಯೇಶನಂ ಶೌರ್ಯದಿಂ ||
ಚೆನ್ನಂ ಪತ್ತಿಸಿ ಸೋವಿದೇವ ಘಟೆಯಂ ಕೆಯ್ಕೊಂಡರಾರ್ ಚೋಳನಂ |
ತನ್ನಾಮ್ನಾಯದ ರಾಜ್ಯದೊಳ್ ನಿಱಿಸಿದರ್ ಸೋಮಾನ್ವಯೋರ್ವೀಶ್ವರರ್ ||1318||

ಗಡಿ ಮೂಡಲ್ ಸಲೆ ಕಂಚಿಯಿತ್ತ ಪಡುವಲ್ ತಳ್ತಿರ್ದ ವೇಳಾಪುರಂ |
ಬಡಗಲ್ ಪೆರ್ದೊಱೆ ತೆಂಕಲಂಕದ ಬಯಲ್ಪಾಂಸಾಂಕೆಯಾದೀನೆಲಂ ||
ಕಡಿತಕ್ಕೇಱಿತು ಸೋವಿದೇವನೃಪಸಿಂದೇವಣ್ಣಿಪಂ ರಾಯರೊಳ್ |
ಪಡಿಯಾರ್ ದಕ್ಷಿಣಚಕ್ರವರ್ತಿತಿಳಕಂಗೀವಿಶ್ವಭೂಪಾಳಕರ್ ||1319||

---

## 275 ಚಾಮರಾಜನಗರ 152. ಸು. 1339

**ಇದರಲ್ಲಿ ಚಂದ್ರಕೀರ್ತಿ, ಕೂಚಿರಾಜ ಇವರುಗಳ ಸ್ತುತಿ ಇದೆ.**

**ಕೂಚಿರಾಜ**

ಸಾರತರವಿಭವದೊಳ್ ಸುಕು|ಮಾರತೆಯೊಳ್ ಸುಜನವೃತ್ತಿಯೊಳ್ ಬ್ರಹ್ಮಸುತಂ|
ಗೋರಾಜಂ ಗೋರಾಜಂ | ಗೋರಾಜಂ ಕೂಚಿರಾಜ ಸಿತಗರ ಗಂಡಂ ||1432||

---

## 276 ನಂಜನಗೂಡು 43. 1371

ಇದರಲ್ಲಿ ಮೇಘಚಂದ್ರನೆಂಬ ಜೈನಗುರು ಮುಕ್ತಿಗೆ ಸಂದ ಸಂಗತಿ ಹೇಳಿದೆ.

ಜೈನಮತಾಂಬುರಾಶಿಪರಿವರ್ಧನಚಂದ್ರನನಸ್ತತಂದ್ರನಂ |
ಮಾನಿತಸಾರಸರ್ವಗುಣರುಂದ್ರನನುನ್ನತಕೀರ್ತಿಸಾಂದ್ರನಂ ||
ಪೀನವಿಮೋಹಮಾರಣಮೃಗೇಂದ್ರನನುದ್ಧಕೃಪಾನದೀಂದ್ರನಂ |
ಭೂನುತಮೇಘಚಂದ್ರನನಶೇಷಜನಂ ನಲವಿಂದೆ ಬಣ್ಣಿಕುಂ ||1433||

---

## 277 ಚಾಮರಾಜನಗರ 64. 1380

ವಿಜಯನಗರದ ರಾಜನಾದ 2 ನೆಯ ಹರಿಹರನ ಆಳಿಕೆಯಲ್ಲಿ ಹೊಮ್ಮದ ಮಹಾಜನಗಳು
ಆವೂರ ಮೂಲಸ್ಥಾನದ ದೇವರಿಗೆ ಭೂಮಿಯನ್ನು ಬಿಟ್ಟುದಾಗಿ
ಈಶಾಸನದಲ್ಲಿ ಹೇಳಿದೆ.

**ಹೊಮ್ಮ**

ತುಂಗತರಂಗಕಾಂಚನನದೀತಟಸಂಭವನಾಳಿಕೇರನಾ |
ರಂಗಸುಪೂಗಚೂತವರಚಂಪಕಬಂಧುರನಂದನಾಳಿಯಿಂ ||
ಪಿಂಗದ ನೀಲನೀರರುಹಪಂಕಜಸೌರಭಸಾರಲೋಲಸ !
ದ್ಭೃಂಗದಿನೊಪ್ಪುಗುಂ ಭರದೆ ಹೊಮ್ಮಮೆನಿಪ್ಪ ಪುರಂ ನಿರಂತರಂ ||1434||

ಅದಱೊಳ್ ಬಂದೋದಿ ವಾಚಸ್ಪತಿ ಸುರಪತಿಯಾಸ್ಥಾನದೊಳ್ ಸಂದನಾರ್ಪಿಂ|
ದದಱೊಳ್ ಬಂದಿರ್ದು ವಾಣೀಸತಿ ಸರಸಕಲಾಪ್ರೌಢೆಯಾದಳ್ ಶಶಾಂಕಂ ||
ಅದಱುದ್ಯದ್ಧರ್ಮ್ಮರುಕ್ಸಂಗದಿನೆಸೆವ ಕಳಾಭೂಷನಾದಂ ಮಹೀಭಾ |
ಗದೊಳೆಂದಂದಾರ್ದು ತದ್ಗ್ರಾಮದ ಮಹಿಮೆಯನಿಂ ಬಣ್ಣಿಸಲ್ ಬಲ್ಲನಾವಂ||1435||

ಧರ್ಮಪಾಲನ

ಇದನಾದಂ ನೋಡಿ ಸಂತೋಷದೆ ನಡಸಿದ ಭೂಪಾಲವಕ್ಷಸ್ಥಳಾವಾ ।
ಸದೊಳಿರ್ಪ೦ ನಾಂ ಸಮಂತಲ್ಲದೆಯಿದಕುೞಿ ಕಾಯ್ದಿರ್ದ ನಾವಾಸದೊಳ್ ಮಾ ॥
ಣದೆ ನಿಲ್ವಳ್ ತಾನದೆನ್ನಗ್ರಜೆಯೆನುತೆ ರಮಾದೇವಿ ಕೀರ್ತ್ಯಂಗನಾಹ ।
ಸ್ತದೆ ದಿಕ್ಪಾಲಪ್ರಜಾಧ್ಯಕ್ಷದೊಳನವರತಂ ಡಂಗುರಂಬೊಯ್ಸುತಿರ್ಪಳ್ ॥1436॥

---

## 278 ಸೊರಬ 146. 1388

ಈ ನಿಷಿದಿಗಲ್ಲಿನಲ್ಲಿ ವಿಜಯನಗರದ ರಾಜನಾದ 2 ನೆಯ ಹರಿಹರನ ಆಳಿಕೆಯಲ್ಲಿ ಮುನಿ ಭದ್ರದೇವನು ಸನ್ಯಸನವಿಧಿಯಿಂದ ಮುಡಿಪಿದಂತೆ ಹೇಳಿದೆ.

ಕ್ಷೇಮಮಮರ್ಪ್ಪನಂ ವಿಮಳಕೀರ್ತಿ ದಿಗಂತಮನೆಯ್ದೆಪರ್ಪ್ಪನಂ ।
ಕಾಮನ ಚಾಪಚಾಪಲತೆ ಸೋರ್ವಿನಮೊಪ್ಪಿದರಂ ಪೊಗೞ್ದಪೆಂ ॥
ಶ್ರೀಮುನಿಭದ್ರದೇವರನಿಳಾವಿನುತೋರುಶುಭಸ್ವಭಾವರಂ ।
ಪ್ರೇಮದೊಳರ್ಥಿಗರ್ಥಮುಮನೀವರನುಗ್ರತಪಃಪ್ರಭಾವರಂ ॥1437॥

ಮುನಿಸಂ ಮನ್ಮಥಯುದ್ಧದೊಳ್ ನಿರುತಮಂ ತತ್ವಾರ್ಥದೊಳ್ ಭಕ್ತಿಯಂ ।
ಜಿನಪಾದಾಂಬುಜದೊಳ್ ದ್ರವಾಧಿಕತೆಯಂ ಸಚ್ಚಿತ್ತದೊಳ್ ದೇಸೆಯಂ ॥
ವಿನುತಾಚಾರಜಯಂಗಳೊಳ್ ವಚನಮಂ ವಕ್ತೃತ್ವದೊಳ್ ರುಕ್ಮರಂ ।
ಜನೆಯಂ ದೇಹದ ಕಾಂತಿಯೊಳ್ ನಿಱಿಸಿದರಾ ವಾಕ್ಯಾದಿವರ್ಣಾಹ್ವಯರ್ ॥1438॥

---

## 279 ಬೇಲೂರು 3. 1397

ಇದರಲ್ಲಿ ವಿಜಯನಗರದ ರಾಜನಾದ 2 ನೆಯ ಹರಿಹರನ ಮಂತ್ರಿ ಗುಂಡದಂಡಾಧಿಪನು ಬೇಲೂರು ಚೆನ್ನಕೇಶವದೇವಸ್ಥಾನದಲ್ಲಿ ಉತ್ಸವಗಳೂ ಸರ್ವವಿನಿಯೋಗಗಳೂ ಕ್ರಮವಾಗಿ ನಡೆವಂತೆ ಏರ್ಪಾಡುಮಾಡಿ ಕಲ್ಲುಬರಗೆಯ ತುರುಕ ಗಂಗಸಲಾರನು ಮುರಿದು ಸುಡಿಸಿದಂಥ ಆ ದೇವಸ್ಥಾನದ ಬಾಗಿಲುವಾಡದ ಗೋಪುರವನ್ನು ಏಳುನೆಲೆಯಾಗಿ ಮಾಡಿಸಿದಂತೆ ಹೇಳಿದೆ.

### ಗುಂಡದಂಡಾಧಿಪ

ಧುರಧೀರಂ ಗುಂಡದಂಡಾಧಿಪನ ನಿಜಯಶಃಕಾಂತೆ ಭೂಭಾಗದೊಳ್ ಮ |
ತ್ಸರದಿಂದಂ ಶ್ರೀವಧೂಸಂಗಮನುಱಿದೊಲವಿಂದಂ ದಿಶಾಚಕ್ರದೊಳ್ ಡಾ ||
ವರಿಸಲ್ಕಾಕಾಂತೆಯುಂ ಭಾರತಿ ಜಗದ ಕವಿವ್ರಾತಜಿಹ್ವಾಳಿಯೊಳ್ ತ |
ತ್ಸಿರು ನೀನೆಂದೊಲ್ದು ಸಂತೈಸಲು ನಟವಿಧದಿಂ ನೃತ್ಯವಾಡುತ್ತುಮಿರ್ಪಳ್ ||1439||

ಭರದಿಂದಂ ರೌದ್ರಸಂಗ್ರಾಮದೊಳಹಿತರ ಬೆಂಬತ್ತಿ ಪೊಯ್ಯಲ್ಕೆ ಬಿಟ್ಟರ್ |
ತುರಗಂ ರೌತರ್ ಗಜಂ ಜೋದರು ಬಹಳಪದಾತಿಪ್ರತಾನಂ ಧರಾಧೀ ||
ಶ್ವರರೊಂದೇತಾಣದೊಳ್ ಮಾರಿಗೆ ಮನದೊಲವಿಂದಿಟ್ಟಗಲ್ ತಾನದೆಂಬಂ |
ತರರೇ ಶ್ರೀಗುಂಡದಂಡಾಧಿಪನ ಬಹಳಬಾಹಾಬಳಕ್ಕಾಂಪನಾಪಂ ||1440||

ಧುರದೊಳ್ ಗುಂಡಾಮಾತ್ಯಂ | ನರಮೇಧವ ಮಾಡದುಱಿಯನೆಂದೆನಲಾಧೀ |
ತರು ಮರನನೇಱಿ ಹೂವಿನ | ತಱುವಾಯ್ ತಱುವಾಯೆನುತ್ತುಮಿರ್ದರ
ದೇನೋ ||1441||

---

## 280 ಸೊರಬ 261. 1408

**ಇದರಲ್ಲಿ ವಿಜಯನಗರದ ರಾಜನಾದ 1 ನೆಯ ದೇವರಾಯನ ಆಳಿಕೆಯಲ್ಲಿ ಕುಪ್ಪಟೂರ ಪ್ರಭು ಗೋಪಗೌಡನು ಸನ್ಯಾಸನವಿಧಿಯಿಂದ ಸತ್ತನೆಂದು ಹೇಳಿದೆ.**

### ಸಮುದ್ರ

ತನ್ನೊಳಗಿರ್ದ ಮೌಕ್ತಿಕಮಿಳಾಧರಮದ್ರಿಧರಾಂಗರೋಚಿಗಳ್
ತನ್ನೊಳಗೊಳ್ಪುವೆತ್ತು ಪೊಱಪೊಣ್ಮುವವೋಲ್ ಜಳಶೀಕರಂಗಳಿಂ ||
ದುನ್ನತಮಾದ ಬಲ್ದೆರೆಗಳಿಂ ತೆರೆಮಾಲೆಯು ನೀಲರೋಚಿಯಿಂ |
ತನ್ನತಿಗುಣ್ಪು ಘೋಷದೊದವಿಂ ಲವಣಾಂಬುಧಿ ನಾಡೆ ರಂಜಿಕುಂ ||1442||

### ಕರ್ಣಾಟ ದೇಶ

ಜಿನಧರ್ಮಾವಾಸಮಾದತ್ತುಮಳಪಿನಯದಾಗಾರಮಾದತ್ತು ಸದ್ಧಾ |
ಸನನಿರ್ವಾಸಪ್ಪಮಾದತ್ತತಿವಿಶದಯಶೋಧಾಮಮಾಗತ್ತು ವಿದ್ಯಾ ||
ಧನಜನ್ಮಸ್ಥಾನಮಾದತ್ತಸಮತರಳಗಂಭೀರಸದ್ಗೇಹಮಾದ |
ತ್ತೆನಿಸಲ್ಕಿಂತುಳ್ಳ ನಾನಾಮಹಿಮೆಯೊಳೆಸೆಗುಂ ಚಾರುಕರ್ಣಾಟದೇಶಂ ||1443||

## ಕುಪ್ಪಟೂರು

ಪೂಲತೆ ಪೂಗಿಡು ಪೂಮರ | ಸಾಲಿಂದಲ್ಲಲ್ಲಿ ಕೇರಿಕೇರಿಗಳೊಳ್ ಚೈ |
ತ್ಯಾಲಯದ ಮುಂದೆ ತುಂಬಿಯು | ಜಾಲಂ ಮದಮೇಱಿ ಮೆಱೆವುವಾಪರಿಮಳ
ದೊಳ್ ||1444||

## ಗೋಪಣ್ಣ

ವಾರಿಜಸದ್ಮೆ ಸದ್ಮದೊಳಗಿರ್ದವೊಲಿಂ ನುತಿಸಿರ್ದ ಪಾರದಂ |
ಪಾರದೆ ಬಂದ ತೋರ್ಕೆ ಸುಮನೋಮಣಿ ಸನ್ಮಣಿಹಾರದಲ್ಲಿ ಬಂ ||
ದೋರಣಮಾಗಿ ನಿಂದ ಪರಿ ವಂದಿಜನಕ್ಕೆನಿಪೊಂದು ದಾನಗಂ |
ಭೀರತೆಯಾದುದೇವೊಗಱ್ವೆನಾಂ ಸಿರಿಯಣ್ಣತನೂಜಗೋಪನಂ ||1445||

ಸತ್ಯದ ಮೇಲಣೆಚ್ಚಱಿಕೆ ಧರ್ಮದ ಮೇಲಣ ಲೋಭಮಿಂತು ಸಾ |
ಹಿತ್ಯದ ಮೇಲಣಾಸೆ ಜಿನಪಾದದ ಮೇಲಣ ನಿಷ್ಠೆ ನಾಡೆ ಸ ||
ದ್ಭೃತ್ಯರ ಮೇಲಣಾದರಣೆ ಕೀರ್ತಿಯ ಮೇಲಣ ಕೂರ್ಮೆ ಲೋಕಸಂ |
ಸ್ತುತ್ಯದ ಗೋಪಣಪ್ರಭುವಿಗುಂಟುಱಿದಗ್ಗನಿತುಂಟೆ ಧಾತ್ರಿಯೊಳ್ ||1446||

ಕರುಣರಸಂ ಪೊನಲ್ಕವಿದು ಧರ್ಮಮಹಾಲತೆಗಾಲವಾಲಸು |
ಸ್ಥಿರಜಲಮಾಗೆ ತಲ್ಲತೆ ಜಿನಾಗಮಕಲ್ಪಮಹೀಜಮಂ ಮನೋ ||
ಹರತರದಿಂದೆ ಪರ್ವಿ ನಿಲೆ ಗೋಪನ ತುಂಗಕೃಪಾನುಭಾವಮಂ |
ನಿರುಪಮಧರ್ಮಮಂ ವರಜಿನಾಗಮದುನ್ನತಿಯಂ ಪೊಗಱ್ವರಾರ್ ||1447||

---

## 281 ಸೊರಬ 329. 1415

**ಈ ನಿಷಿದಿಗಲ್ಲಿನಲ್ಲಿ ಅಭಯಚಂದ್ರ ಸಿದ್ಧಾಂತದೇವನ ಶಿಷ್ಯನಾದ ಭಾರಂಗಿಯ ಗೋಪಣ್ಣನು ಸಮಾಧಿವಿಧಿಯಿಂದ ಮುಡಿಪಿದನೆಂದು ಹೇಳಿದೆ.**

## ನಾಗರಖಂಡ

ಫಲಭರವಾಂತ ಶಾಳಿ ತಳಿರೇಱಿದ ಚೂತಕುಜಾಳಿ ತೆಂಗು ಕ |
ಣ್ಗೊಳಿಸುವ ಕೌಂಗು ಪೂತ ಲತೆ ಪೂಗಿಡು ಪೂಮರದೋಳಿ ಪಲ್ಲವಂ ||
ಗಳ ಪೊಳಪೊಂದಿ ತಾಂ ನಿಮಿರ್ವಶೋಕಕುಜಂ ತಿಳಿನೀರ್ಗೊಳಂಗಳಿಂ |
ಸುಲಲಿತಮಾಗಿ ರಂಜಿಪುದು ನಾಗರಖಂಡಮಪೆತ್ತ ನೋಱ್ಪೊಡಂ ||1448||

### ಗೋಪಣ್ಣ

ಗೋಪತಿವಾಹನಪ್ರಭೆಯನೇಳಿಸಿ ಗೋಪತಿವಾಹನಾಂಶುವಂ |
ರೂಪುಗಿಡಲ್ಕೆ ತಾಂ ಜಲಿದು ಗೋಪತಿವಾಹನಕಾಂತಿಯಂ ಮಹಾ ||
ಟೋಪದೆ ತಾನೆ ನಿಂದಿಸಿ ಮನೋಹರದೇಳ್ಗೆಯೊಳೊಪ್ಪುತುಂ ಬಹು |
ದ್ವೀಪಮನೆಯ್ದೆ ಪರ್ವಿದುದು ಗೋಪಣನಗ್ಗದ ಕೀರ್ತಿ ಪಾಂಡುರಂ ||1449||

---

## 282 ಸೊರಬ 330. 1465

**ಈ ನಿಷಿದಿಗಲ್ಲಿನಲ್ಲಿ ದೇವಚಂದ್ರಮುನಿಯ ಶಿಷ್ಯನಾದ ಭಾರಂಗಿಯ ಬುಳ್ಳಪ್ಪನು ಸಮಾಧಿವಿಧಿಯಿಂದ ಮುಡಿಪಿದಂತೆ ಹೇಳಿದೆ.**

ಕಲಿಯಂ ಮಾಂಕರಿಸಿತ್ತು ತನ್ನ ಚರಿತಂ ಕಲ್ಪಾವನೀಜಾತದೊಳ್ |
ಚಲಮಂ ಮಾಡಿದುದತ್ಯುದಾರತೆ ಮಹಾಧೈರ್ಯ್ಯಂ ಸುರೋರ್ವೀಧ್ರದೊಳ್ ||
ಮಲೆದತ್ತೆಂದೊಡೆ ಬುಳ್ಳಪಪ್ರಭುಗೆ ಭವ್ಯಾಚಾರದಿಂ ಚಾಗದಿಂ |
ವಿಲಸದ್ಧೈರ್ಯ್ಯದಿನೀಧರಾತಳದೊಳನ್ನರ್ ಪೋಲಲೇನಾರ್ಪರೇ ||1450||

ಸಲಿಗಾಣಂ ಧರೆಯಲ್ಲಿ ಚಾಗಿಗಳೊಳೆನ್ನೊಳ್ ಪೋಲ್ಕೆ ವರ್ಪನ್ನರಂ |
ಸುರಭೂಜಂ ಸಮನಪ್ಪೊಡಪ್ಪುದದನಾಂ ನೋಳ್ಪಂ ಸಮಂತೆಂಬವೋಲ್ ||
ಧರೆಯೊಳ್ ಪೊಮ್ಮಳೆ ಸೋರ್ದ ಪಾಂಗಿನೊಳೆ ಚಾಗಂಗೆಯ್ದು ಸೋಪಾನಮಾ |
ಗಿರೆ ಧರ್ಮಂ ತ್ರಿದಿವಕ್ಕೆ ಬುಳ್ಳಪನಮರ್ತ್ಯಾವಾಸಮಂ ಪೊರ್ದಿದಂ ||1451||



# ಪರಿಶಿಷ್ಟ

## 283 ಪಟ್ಟದಕಲ್ ಶಾಸನ 1162

(Bombay Br. R. A. S. Journal, XI, 222)

**ಇದರಲ್ಲಿ ಸಿಂದರಾಜನಾದ 2 ನೆಯ ಚಾವುಂಡನ ಹೆಂಡತಿ ದೇಮಲದೇವಿಯೂ ಅವರ ಜ್ಯೇಷ್ಠಪುತ್ರ 2 ನೆಯ ಆಚಿದೇವನೂ ದತ್ತಿಯನ್ನು ಬಿಟ್ಟಂತೆ ಹೇಳಿದೆ.**

### ಚಾವುಂಡ

ಜನದ ಮನಕ್ಕೆ ರಾಗಮನೊಡರ್ಚಿಪ ವೈರಿಜನೇಶ್ವರಾಂಗನಾ ।
ಜನದ ಮೊಗಕ್ಕೆ ಕರ್ಪನೆ ಸಮರ್ಪಿಪ ಸದ್ಬುಧಸತ್ಕವೀಂದ್ರಸ ॥
ಜ್ಜನರ್ಗೆ ಸುವರ್ಣಮಂ ಪಡೆದು ಪೆರ್ಚಿಪ ವೀರಚವುಂಡಮಂಡಲೇ ।
ಶನ ಸಿತಕೀರ್ತಿ ನಿರ್ಮಳಿಯೆನಿಪ್ಪುದು ಧಾತ್ರಿಗೆ ಚಿತ್ರಮಲ್ಲವೇ ॥1452॥

ತೊಡರದೆ ನಿಜಾಂತ್ರಜಾಳದ । ತೊಡರೊಳ್ ಸುರಯುವತಿಜನದ ತೋಳ್ಗಳ ತೊಡರೊಳ್ ।
ತೊಡರದೆ ಪೋಪರೆ ಬಿರುದಿಂ । ತೊಡರ್ದೊಡೆ ಚಾವುಂಡಭೂಪನೊಳ್ ರಿಪುಭೂಪರ್ ॥1453॥

### ದೇಮಲದೇವಿ

ಜಳಮೆನೆ ದೇಹಕಾಂತಿ ನಳಿತೋಳ್ಗಳೆ ನೋಡೆ ತರಂಗಮಾಲೆ ಕ ।
ಣ್ಗಳೆ ವಿಕಚೋತ್ಪಳಂ ನಗೆಮೊಗಂ ಕಮಳಂ ಕುರುಳೋಳಿ ಷಟ್ಪದಾ ॥
ವಳಿಯೆನೆ ಚಕ್ರವಾಕಕುಚೆ ದೇಮಲದೇವಿ ಸರೋವಿಳಾಸದಿಂ ।
ತಳೆದಳನೂನರಾಗದೆ ಚವುಂಡನೃಪಾಳಮನೋಮರಾಳಮಂ ॥1454॥

### ಆಚಿದೇವ

ಎಱಗಿ ಶರಣ್ಯಮೆಂದೊಡದನಾನಱ'ಯೆಂ ಪಗೆ ಮುಟ್ಟಿದಲ್ಲಿ ಕ |
ಣ್ದೆಱೆದ ಜವಂ ಕನಲ್ದ ಕುಳಿಕೋರಗನೊಟ್ಟಿದ ಕಿಚ್ಚು ಮುಟ್ಟಿವಂ ||
ದೆಱಪ ಸಿಡಿಲ್ ಕೆರಳ್ದ ಮೃಗರಾಜನಿದಿರ್ಚಿದ ಮಿಚ್ಚುವಟ್ಟಿ ತಿ |
ಸ್ಟಱಗುಲಿಮಾರಿಯೆಂಬರರಿವೀರಕುಮಾರಕರಾಚಿದೇವನಂ ||1455||

### ಕಿಸುವೊಳಲ್

ಭವಭವನಂಗಳಿನಂಬುಜ | ಭವಭವನಂಗಳಿನನೂನವಸುದೇವತನೂ |
ಭವಭವನಂಗಳಿನೇನು | ದ್ಭವಭವನಮೊ ಸಿರಿಗೆ ಕಿಸುವೊಳಲ್ ವಸುಮತಿ
ಯೊಳ್ ||1456||



PRINTED AT THE GURUVILAS PRINTING WORKS, BANGALORE CITY.

# ಟಿಪ್ಪಣಿ

(ಸಂಖ್ಯೆಗಳು ಪದ್ಯಗಳಿಗೆ ಅನ್ವಯಿಸುತ್ತವೆ)

---

1-6. ಈ ಪದ್ಯಗಳಲ್ಲಿ ಈಗಿನ ವ್ಯಾಕರಣಗಳಿಂದ ಸಿದ್ಧಿಸದ ಕೆಲವು ಪ್ರಯೋಗಗಳು ಇವೆ. ಇವು ಪೂರ್ವದ ಹಳಗನ್ನಡಕ್ಕೆ ಸೇರಿದುವು. (1) ಪ್ರಥಮಪುರುಷದ ಆಖ್ಯಾತಪ್ರತ್ಯಯಗಳಿಗೆ ದೀರ್ಘಸ್ವರ: ಏಱಿದಾರ್, ಸಂದಾರ್; (2) ಸಪ್ತಮೀ ವಿಭಕ್ತಿಗೆ ಉಳ್ ಪ್ರತ್ಯಯ: ವೆಟ್ಟದುಳ್, ಧರಣಿಯುಳ್; (3) ನಿಷೇಧರೂಪದಲ್ಲಿ ದೀರ್ಘಸ್ವರ: ತಪ್ಪಾದೆ; (4) ನಪುಂಸಕಲಿಂಗದಲ್ಲಿ ಒದು ಪ್ರತ್ಯಯ: ಕೆಟ್ಟಿದ್ದಿದು; (5) ಬಿಂದುವಿಗೆ ನಕಾರ: ಇಂಬಿನಿರ್, ನೋನ್ಪಿ, ವಿಪರೀತನ್, ಸಿಂಘರ್ಮ್; (6) ಸ್ವರಪರವಾಗದಿದ್ದರೂ ದ್ವಿತೀಯಾವಿಭಕ್ತಿಗೆ ದೀರ್ಘ: ಪ್ರಾಸಾದಾಂತರಮಾ ವಿಚಿತ್ರ; ಇತ್ಯಾದಿ. 1. ಕಟ್ವಪ್ಪು, ಕಬ್ಬಪ್ಪು = ಶ್ರವಣಬೆಳ್ಗೊಳದಲ್ಲಿರುವ ಚಿಕ್ಕ ಬೆಟ್ಟ. ವೆಟ್ಟ = ಬೆಟ್ಟ. ಸಂಘಂಗಳ, ಪ್ರಥಮೆಗೆ ಷಷ್ಠಿ. ಉಯ್ಯೆ = ಕರೆದುಕೊಂಡು ಹೋಗಲು. 2. ನೋನ್ಪಿ, ನೋಂಪಿ = ವ್ರತ. ಕಟಿ = ದೋಷ. ಕಂತಿ = ಜೈನಸನ್ಯಾಸಿನಿ. ಮುಡಿಪು = ಪ್ರಾಣತ್ಯಾಗಮಾಡು. 3. ಸುರಚಾಪ = ಕಾಮನ ಬಿಲ್ಲು. ತೆಱ = ರೀತಿ. ಇರವಾ = ಇರುವಿಕೆಯನ್ನು. ಸನ್ಯಾಸನ, ಸಮಾಧಿ, ಸಲ್ಲೇಖನ = ಉಪವಾಸವ್ರತ. 4. ಸುಮಾರು 700 ರಲ್ಲಿಯೇ ಕನ್ನಡದಲ್ಲಿ ತ್ರಿಪದಿ ಇದ್ದಿತು.

7. ಪರೋಕ್ಷ = ಮರಣಾನಂತರ. ದತ್ತಿ = ದಾನ. ರಘುಕುಳ = ರಾಮ. ಅಱ್ಕಿ = ನಿಶ್ಶೇಷವಾಗು. ಪೆಂಪು = ಮಹಿಮೆ. ದೀವಬ್ಬೆ ಕಟ್ಟಿಸಿದ ಕೆರೆ ಸಮುದ್ರವನ್ನು ಹೀಯಾಳಿಸುವಂತಿದ್ದಿತು. 8. ಈ ಕೆರೆ ಗಂಗೆಯೇ ದಕ್ಷಿಣಕ್ಕೆ ಬಂದಂತೆ ಇದ್ದಿತು. ಅಮರನದಿ = ಗಂಗೆ. ಸಯ್ಪು = ಪುಣ್ಯ. 9. ಅಳುಂಬ = ಅಧಿಕ. ಒಳ್ಪು = ಒಳ್ಳೆಯ ಗುಣ. ಶಿಖಿ = ಬೆಂಕಿ. 10. ನೆಗಟ್ಟ = ಪ್ರಸಿದ್ಧಿಹೊಂದಿದ. ಪೇಳೆವಡಿಚರ್ = ಕೊಟ್ಟ ಭಾಷೆಯನ್ನು ನಡಸಿದವರು. ನಿನ್ನನ್ನರೆ = ನಿನಗೆ ಸಮಾನರೇ? ದೊರೆಯ್ಯ್ = ಸಮಾನ.

11. ಉಱದೆ = ಹೆದರದೆ. ಇಱಿವ = ಸಂಹರಿಸುವ. ಅಂಪೆವು = ಯುದ್ಧಮಾಡುವೆವು. ಪೊಚ್ಚಱಿಸು = ಗೋಚರಿಸು. ಸಕ್ಕಿ = ಸಾಕ್ಷಿ. 12. ಸೆರಗುವಾರ್ = ಅಪಾಯವನ್ನು ನಿರೀಕ್ಷಿಸು. ನೆರವು = ಸಹಾಯ. ಸಿಂಧುರ = ಆನೆ. 13. ಆಮ್ನಾಯ = ವಂಶ. ಕಲಿ = ಶೂರ. ನೆಗಟ್ತಿ = ಕೀರ್ತಿ. 14. ಆದಗುಂತಿ = ರಾಶಿ. ಅವನಿಜೆ = ಸೀತೆ. 15. ಶ್ರಾವಕ = ಜೈನಗೃಹಸ್ಥ. ಸಜ್ಜನಿಕೆ = ಪತಿಭಕ್ತಿ. 16. ಪೇನಿ = ? ಹೀನ. ಕಣಿ = ಗಣಿ. ವಸುಮತಿ = ಭೂಮಿ. ಊನ = ಕೊರತೆ. ವೋನಿ = ಮೌನಿ.

17. ಕಾಯ್ವೊಂಗೆ=ಕೋಪಿಸುವನಿಗೆ. ಅರ್ಪು=ಶಕ್ತಿ, ಸಾಹಸ. ಗೆಡೆಗೊಂಡು= ಸೇರಿ. ಕೊಂಡುಕೊನೆ=ಹೊಗಳು.

18. ಕಾಳ=ಯಮ. ಆಳಾಳ=ಆಳಿನ ಆಳ. ಹೇಳಾ=ಲೀಲೆ. 19. ಎರ್ದೆಗಿಡದಿರು=ಧೈರ್ಯಗುಂದಬೇಡ. ಜವ=ಯಮ. ರಕ್ಕೆ=ರಕ್ಷೆ. 20. ಅಗುರ್ವಿಸೆ= ಭಯ ಹುಟ್ಟಲು. ಕಾಡುವಟ್ಟಿ = ಪಲ್ಲವರಾಜ. ಅಸುಂಗೊಳೆ = ಆಶ್ಚರ್ಯಪಡಲು. 21. ಓಳಿಯೆ=ವರಿಸೆಯಾಗಿ; ತೃತೀಯೆಗೆ ಎ ಪ್ರತ್ಯಯ. ಪಂದಲೆ=ಕತ್ತರಿಸಿದ ತಲೆ. ಆಳೋಳಿ=ಆಳುಗಳ ಸಮೂಹ. ಒಟ್ಟಜಿ=ಪ್ರಭಾವ, ಪರಾಕ್ರಮ. 22. ಒಗೆದ= ಹುಟ್ಟಿದ. ಎಱೆಯೊಂ, ಎಱೆಯಂ=ಸ್ವಾಮಿ. ಇನಿಯಂ=ಪ್ರಿಯ. 24. ನಿಶಾತ= ತೀಕ್ಷ್ಣ. ಅಸಿ=ಕತ್ತಿ. ದ್ವಿಷತ್=ಶತ್ರು. ಹವಿರ್ಭುಜ=ಅಗ್ನಿ. 25. ಅಣ್ಮುವರ್= ಸಮರ್ಥರಾಗುವರು. ಅರೆಬರ್=ಕೆಲವರು. ಪೂಣ್ದು=ಮಾತುಕೊಟ್ಟು. ಆರಾನುಂ= ಆರಾದರೂ. ಅಣ್ಮು = ಸಾಮರ್ಥ್ಯ. ಚಾಗ=ತ್ಯಾಗ. 26. ಕಿಡದ=ಕೆಡದ. ಚಲ=ದೃಢಸಂಕಲ್ಪ. ಅರ್ಥಿ = ಯಾಚಕ. ತೊದಳ್ = ಸುಳ್ಳು. ಓತು=ಪ್ರೀತಿಸಿ. 27. ಪೆಱದು=ಪೆರತು. ಇಂ=ಇನ್ನು. ಭೂಮಿರುಹ=ವೃಕ್ಷ. ಅಗ್ಗಳಂ= ಹೆಚ್ಚು. ಸುರಾಚಳ=ಮೇರು. ಖರಕರ=ಸೂರ್ಯ. ನನ್ನಿ = ಸತ್ಯ. ಈದೊರೆತು=ಇಂಥದು. ಅಳವು = ಪರಾಕ್ರಮ, ಪ್ರಭಾವ. 28. ದುಸ್ಥಿತ = ದರಿದ್ರ. ಕುಂಭಿ = ಆನೆ. ಕೇಸರಿ=ಸಿಂಹ. ಸರೋರುಹ=ಕಮಲ. 29. ತಕ್ಕು = ಯೋಗ್ಯತೆ. ಅಳಿಪಿ= ದುರಾಶೆಯಿಂದ. ಮಂತಣಂ = ಆಲೋಚನೆ. ಆಟಿಸುವುದು = ಆಶೆಪಡುವುದು. ಬಿನ್ನಣ=ವಿಜ್ಞಾನ. ಕೂರ್ತು=ಪ್ರೀತಿಸಿ. ಬಂಚಿಸು=ವಂಚಿಸು. ಕಲ್ಪಿ=ವಿದ್ಯೆ. 30. ಶಿಳೀಮುಖ = ಭ್ರಮರ. 31. ಮಾಣಂ= ಬಿಡನು. ಅಳಱು = ಭಯ. 32. ಅಮೃತಕಿರಣ=ಚಂದ್ರ. ರುಚಿ = ಕಾಂತಿ. ಕರಂ=ಹೆಚ್ಚಾಗಿ. 33. ಸೆಡೆವರ್= ಹೆದರುವರು. ಮುಯ್ವಾಂಪರ್=ಬೀಗುವರು. ಸೋಚಿಗಳೆಂ = ಶುಚಿಯಾದವರು. ಗಡಣಂ= ಸಂಗ. ಕಲಿಗಳೊಳ್ಗಂಡ=ವೀರರೊಳಗೆ ವೀರ.

34. ಅಬ್ಜಾರಿ = ಚಂದ್ರ. ಕಾಯ್ಪು = ಕೋಪ. ಮೂರಿ = ? ಬಾಯಿ. ಅಱಿಗೆ = ತಿಳಿಯಿರಿ. ಮುಮ್ಮುಡಿಚೋೞ = ಚೇರಚೋಳಪಾಂಡ್ಯರಾಜರ ಕಿರೀಟ ಧಾರಿಯಾದ ರಾಜರಾಜ. ಗಂಧವಾರಣ=ಮತ್ತಗಜ. 35. ಅಭ್ಯಧಿಕೇಕ್ಷಣಂ= ಹೆಚ್ಚು ಕಣ್ಣುಗಳುಳ್ಳವನು. ವಚಶ್ರೀಪತಿ=ಸರಸ್ವತೀಪತಿ, ಬ್ರಹ್ಮ. 36. ಗೊಂದಳಿಸಿ=ಗುಂಪಾಗಿ. ತೆರಳ್ಚಿ = ಓಡಿಸಿ. ಒಸೆದು=ಒಲಿದು. ಇನ=ಸೂರ್ಯ. ದೆಸೆಗಿಡೆ ತೂಳ್ದಿ=ದಿಕ್ಪಾಲಾಗುವಂತೆ ಓಡಿಸಿ. ಕೃತ= ಕೃತಯುಗದ. ತೆಳ್ಪು = ಸೊಬಗು. ವಿಷ್ಟರ=ಆಸನ. 37. ಮಾದೇವಿ = ಮಹಾದೇವಿ, ಪಾರ್ವತಿ. ಎಂಬ=ಎನ್ನುವೆಯಾ? 38. ಬೆಡಂಗಿ=ವಿಲಾಸಿನಿ. ಸೂನೃತ=ಸತ್ಯ. 39. ಸಿಂಹಾಗ್ರಜೆ=

ಜಯಸಿಂಹನ ಅಕ್ಕ. ಯಾನೆ=ನಡೆಯುಳ್ಳವಳು. 40. ಪೊಂಗು=ಔದ್ಧತ್ಯ. ಮನ್ನೆಯರು=ಸಾಮಂತರು. ಉಕ್ಕು=ಗರ್ವ. ಕಱಿಲ್ದುದು = ಹೋಯಿತು. ಓಗಡಿಸಿತು=ಅಡಗಿತು. ಬಿಗುರ್ತ = ಬೆಗಡುಗೊಂಡ. ಬಾಳ್ದಲೆ=ಸಜೀವವಾದ ತಲೆ. ಬೆಸಗೆಯ್ದಪರ್ = ಸೇವೆಮಾಡುವರು. ಈದೊರೆತು=ಇಂಥ. ಪೊಡರ್ಪು = ತೇಜಸ್ಸು. 42. ಸರಸತಿ=ಸರಸ್ವತಿ. ಪಾಸಟಿ=ಸಮಾನ.

43. ಶಶಾಂಕಧರ= ಶಿವ. ಅಘ=ಪಾಪ. 44. ಪತಿಹಿತಿಕ್ಕೆ=ಪತಿಭಕ್ತಿ; ಈ ಪದವು ಗಮನಿಸತಕ್ಕದು. ಪುದಿದು = ತುಂಬಿ. 'ಸುಪುತ್ರಃ ಕುಳದೀಪಕಃ' ವಾಕ್ಯವೇಷ್ಟನ. 45. ನೆಗೞಿೞೆ=ನಡೆಯಲು. 46. ಅರಾತಿ = ಶತ್ರು. ವಾಜಿ=ಕುದುರೆ. ಪೆಱಪಿಂಗು = ಹಿಮ್ಮೆಟ್ಟು. ಅಳಿರ್ವಳ್ಕೆ? ಸಾಧನ = ಸೈನ್ಯ. ತವೆ = ಹೆಚ್ಚಾಗಿ. ಆಜಿ=ಯುದ್ಧ. ಭುಂಭುಕ? 113 ರನ್ನು ನೋಡಿ. 47. ಕೇವಳ= ಸಾಧಾರಣ. ಅಱಿೞ್ತ = ಜ್ಞಾನ. ನಯ = ನೀತಿ. 48. ನಿಟಿಲ = ಹಣೆ. ಕರವಾಳ್ = ಕತ್ತಿ. 49. ಆಟಂದಪಂ = ಬೆನ್ನಟ್ಟುವನು; ಧಾತು ಆಟರ್. ಎೞ್ಬಟ್ಟು = ಓಡಿಸು. ನೇರ್ದಪಂ=ಕತ್ತರಿಸುವನು. ಕೋವರ=ಕುಂಬಾರರ. 50. ಅಟ್ಟೆ = ಮುಂಡ. ಅರುಣಾಂಬು=ರಕ್ತ. ರಾಮೆ = ?ಶಾಕಿನಿ. ಪೆಂತೆಱೆೞ್ಯರ್? ರಕ್ಕಸ = ರಾಕ್ಷಸ, ಮರುಳ್=ಪಿಶಾಚ. ಅಸುರ=ಭಯಂಕರ. 51. ಪೋರ್ದಪಂ=ಯುದ್ಧಮಾಡುವನು. ಅಪ್ಪಂ=ಆಗುವ. ಎಂಬಂ = ಎನ್ನುವ. ಅಕ್ಕುಂ= ಆಗುವುದು. 52. ಪಡಲಿಡು = ಬೀಳು. ಬಲ್ಕಣಿ = ?ಶೂರ. ನೆತ್ತರ್ = ರಕ್ತ. ನೆಣ=ಮೇದಸ್ಸು. 53. ಧುರ=ಯುದ್ಧ. ನಿಶಿತ=ತೀಕ್ಷ್ಣ. ಬಿಸುಸುಯ್ಯೆ= ಉಷ್ಣವಾದ ಉಸಿರನ್ನು ಬಿಡಲು. ಇಂದು=ಚಂದ್ರ. ಸಿತ್ತರಿಸಲ್=ಸಹಿಸಲು. ಅಣಂ=ಸ್ವಲ್ಪವೂ. ಸೀವರ = ಹನಿ. ಉಂತು=ಸುಮ್ಮನೆ. ಏಸಮ್ಮದಂ=ಏನು ಸಂಬಂಧ? 54. ತೊಡರ್ವ=ಇದಿರಿಸುವ. ಎಂಟೆದೆಯೆ = ಎಂಟು ಎದೆಯೋ, ಧೈರ್ಯವೇ. ಅಣ್ಣಲ್=ದೊರೆ (ತಮಿಳು). ಬಮ್ಮ = ಬ್ರಹ್ಮ. ಬರಂಬಿಡಿದನೆ=ವರವನ್ನು ಹೊಂದಿದನೇ? ಕಡಿಕೆಯ್ದು=ಸಾಹಸಮಾಡಿ. ಒಡರಿಸು=ಪ್ರಯತ್ನಿಸು. ಭುಜಗಮರ್ದನ=ಕೃಷ್ಣ. 55. ಆಶಾ=ದಿಕ್ಕು. ಅೞ್ತಿ=ಪ್ರೀತಿ. ಪ್ರಧ್ವಾನ=ಶಬ್ದ.

56. ಇನಜ=ಕರ್ಣ. ಹಿರಣ್ಯ=ಸ್ವರ್ಣ. ಏಗುವುದು=ಏನು ಪ್ರಯೋಜನ? 57. ವನೀಪಕ=ಯಾಚಕ. ರಾಯನ, ಪ್ರಥಮೆಗೆ ಷಷ್ಠಿ. ಪೊದೞ್ದ= ಪ್ರಸಿದ್ಧವಾದ. ಇಭ = ಆನೆ. ಮನಮಿಕ್ಕಿ = ಚಿಂತಿಸಿ. ಗಱಿಲ್ಲನೆ = ತಟ್ಟನೆ. ಮಾಯ್ದ = ನಾಶವಾದ. ಪವಣ್ಗೊಳಲ್ = ಪ್ರಮಾಣವನ್ನು ಹೇಳಲು. ಇರ್ಕೆ = ಇರಲಿ. ಅಜ=ಬ್ರಹ್ಮ. 58. ಅರಿಯಂಗೆ=?ಶತ್ರುವಿಗೆ. ಉಕ್ಕುಡಿ=ಗರ್ವಭಂಜಕ. ಅಗುರ್ವಪ್ಪ=ಭಯಂಕರವಾದ. ದಳ್ಳುರಿ= ಜ್ವಲಿಸುವ ಅಗ್ನಿ. ಮಾಕೊರ್ಳ್ವ=ಪ್ರತಿಭಟಿಸುವ. ಎಱಿಲ್ದ = ಬಾಗಿದ; ಲಕಾರಕ್ಕೆ ಶಿಥಿಲತ್ವ. 59. ಎಳೆ = ಭೂಮಿ.

ದಾಂಗುಡಿವರಲ್ದು=ಹಬ್ಬಿ ವ್ಯಾಪಿಸಿ. 61. ಕುಳಭವನಂ=ತವರುಮನೆ. ನಿಧಾನಂ=ನಿಧಿ. ಮಾಂತನ=ದೊಡ್ಡಸ್ತಿಕೆ. ಆಗರ=ಮನೆ. ವಿಧು=ಚಂದ್ರ. 62. ಚಾಂದ್ರ ಮುಂತಾದುವು ವ್ಯಾಕರಣಗಳು; ಶಬ್ದಾನುಶಾಸನ ಶಾಕಟಾಯನಕೃತ. ಏಕಾಕ್ಷರಂ=ಅತಿಸುಲಭ. ಮೊಗ್ಗೇ = ಸಾಧ್ಯವೇ? 63. ವಡ್ಡವ್ಯವಹಾರಿ = ದೊಡ್ಡವರ್ತಕ. ಉಕ್ಷ=ವೃಷಭ. ರಾಜೀವ=ಕಮಲ. ಮಧುಪ=ದುಂಬಿ. ಯಥಾಸಂಖ್ಯಾಲಂಕಾರ. 64. ಶ್ಲೇಷಾಲಂಕಾರ. ವಿಬುಧ=ದೇವತೆಗಳು, ವಿದ್ವಾಂಸರು. ಉಮಾ=ಪಾರ್ವತಿ, ಯಶಸ್ಸು. ಆಶಾವದನಿ=ದಿಗ್ಗಜ. ದಾನ=ತ್ಯಾಗ, ಮದದ ನೀರು. 65. ಆರ್ಪು=ಔದಾರ್ಯ. ಆಹವ=ಯುದ್ಧ. 66. ಎಱಗದ=ನಮಸ್ಕರಿಸದ. ಅದಟರ್=ಪರಾಕ್ರಮಶಾಲಿಗಳು. ತಿಱಿದ=ಕೊಡದ. ಅಂಕಚೇಯರ್=? ಯುದ್ಧವೀರರು. ಬೆಳ್ಕಿಱದ = ನಡುಗದ. 67. ಬೆಸಕೆಯ್ವುತ್ತು = ಸೇವೆಮಾಡಿತು. ಚೋೞಿಕ=ಚೋೞರಾಜ. 68. ಪೀನ=ದಪ್ಪವಾದ. ಉದ್ಘ=ಶ್ರೇಷ್ಠವಾದ. 69. ಮೇರೆ=ಎಲ್ಲೆ. ಎಱೆವಟ್ಟು=ಸ್ಥಾನ, ನೆಲೆ.

70. ಅಘಾಟ=ಎಲ್ಲೆ. ಬಳ್ವಳನೆ=ಹೆಚ್ಚಾಗಿ. ಪ್ರಜ್ವಳಿಸಿದ=ಬೆಳಗಿದನು; ಬಿಂದುವಿಲ್ಲದ ಪ್ರಯೋಗ: ಕೃದಂತವೆಂದು ಭಾವಿಸಿದರೆ ಕ್ರಿಯೆಯನ್ನು ಅಧ್ಯಾಹಾರ ಮಾಡಬೇಕು. 71. ತಱಿಸಲವು=ನಿರ್ಣಯ, ದೃಢಸಂಕಲ್ಪ. ದೇಗುಲ=ದೇವಕುಲ, ದೇವಸ್ಥಾನ. ಇಂ=ಇನ್ನು. ಸಲೆ=ಚೆನ್ನಾಗಿ. 72. ನೆಗೞ್ದ, ಇಲ್ಲಿಯೂ ಬಿಂದುವಿಲ್ಲದ ಪ್ರಯೋಗ; 70 ನ್ನು ನೋಡಿ. 73. ಜಳರಾಶಿ=ಸಮುದ್ರ. ಅಗ್ಗಳಂ=ಹೆಚ್ಚು. 74. ನಾಡಾಡಿ = ಸಾಮಾನ್ಯ. ಧವಳಾರ = ಧವಳಾಗಾರ, ಅರಮನೆ. ನೀಡ=ಗೂಡು, ಮನೆ. 76. ಎಕ್ಕಲಾವಣಂ= ಏಕಾಯತ್ತ. ಏಗಣಜು=ಎಂಥ ಕಣಜ? ಪೊಗೞುಗುಂ, ಪೊಗೞ್ಗುಂ ಎಂಬುದಕ್ಕೆ. ಸಮೀರಣ = ಗಾಳಿ. 77. ಮೈಮೆ=ಮಹಿಮೆ. ಓಜೆ=ಕಾಂತಿ. 78. ಸಲುಗೆ, ಗೆಲುವ; ಹೊಸಗನ್ನಡ. ಎಕ್ಕೆ=ಉನ್ನತಿ. ಅಕ್ಕೆ=ಆಗಲಿ. ಎಮ, ಅಂಗೀಕಾರಾರ್ಥ. 79. ಕೃತಕ = ಮೋಸ. 80. ಮಾಣ್=ಬಿಡು. ತೋಡು, ಪಾಟಿ=ಸಮಾನ. ಕುಜಾತೆ=ಸೀತೆ.

81. ಘಟೆ=ಸಮೂಹ. ಒಡ್ಡು=ಸೈನ್ಯ. ಚಕ್ರಿ=ಚಕ್ರವರ್ತಿ. 82. ಎರೆದವರ್ಗೆ=ಯಾಚಕರಿಗೆ. 83. ಅಸದಳಂ=ಶ್ರಮದಿಂದ. ವರ್ಗತ್ರಯ=ಧರ್ಮಾರ್ಥಕಾಮಗಳು. ಒಡರಿಸಿ=ಹೊಂದಿಸಿ. 84. ಬೆಳ್ಕುತ್ತುದು=ಹೆದರಿತು. ವೆಸ (ಬೆಸ)=ಕೆಲಸ. ಪೂಣ್ದತ್ತು=ಕೈಕೊಂಡಿತು. ಆಗಿದು=ಹೆದರಿ. ಮೆಲ್ಪು=ಮಾರ್ದವ. ಆವರ್ಜಿಸಿದ=ಒಳಕೊಂಡ. ಎಳಸು=ಅಪೇಕ್ಷಿಸು. ಎಸಕಂ=ತೇಜಸ್ಸು. ಕೆಯ್ಗಗ್ಗೆ=ಹೆಚ್ಚಲು. 85. ಮಾನಸ = ಮನುಷ್ಯ. ಪಸಯಿತ, ಪಸಾಯಿತ=? ಉಡುಪನ್ನು ಕೊಡುವವನು. 86. ಅಣುಗು = ಪ್ರೀತಿಪಾತ್ರನಾದ. ತುಱಿಲಾಳ್ = ಯುದ್ಧ

ವೀರ. ಮೇಳದಾಳ್ = ನರ್ಮಸಚಿವ. 87. ಬಲಿವ = ಔದ್ಧತ್ಯವನ್ನು ತೋರಿಸುವ. ಮಲೆವ = ಪ್ರತಿಭಟಿಸುವ. ಕೆಲೆವ = ಗರ್ಜಿಸುವ. ಅದಟಲೆವ = ಆಕ್ರಮಿಸುವ. ಪಳಂಚಲೆವ = ಹೊಡೆವ. ಎಲ್ವು = ಎಲುಬು. ಇಸುವೆಸ = ಸೇವಾವೃತ್ತಿ. ಬೆಸಸು = ಆಜ್ಞಾಪಿಸು. 88. ಏರ್ವಲ = ? ಆಯುಧಗಳ ಬಲ. ಬೇಳ್ವೊಲ = ಯಜ್ಞಭೂಮಿ. 89. ಕವಿ ಇತ್ಯಾದಿ, ಯುದ್ಧಭೇದ. ಎನ್ನಂ = ಎಂಥವನು? ಇಂದ್ರಾರಿಯನ್ನಂ= ಇಂದ್ರಜಿತುವಿನಂಥವನು. 90. ತೀರಿಕೆ, ಬಿಂಡಿವಾಳ, ಕರ್ಕಡೆ; ಆಯುಧಗಳು. ಕರವಾಳ = ಕತ್ತಿ. ಆಟಿಡುವ? ಒದಱು = ಗರ್ಜಿಸು. ತಱುಂಬು = ತಡೆ. 91. ಸೋಯಲ್ = ಓಡಿಸಲು. ಲೌಲ್ಯಭಾವ = ಪ್ರೇಮ. 92. ಟಿಪ್ಪರ = ? ಮೋಸ. ಮರುಳ್ದೊಡಂ = ಮೋಹಪಟ್ಟರೂ. ಮರಲ್ದೊಡಂ = ಹಿಮ್ಮೆಟ್ಟಿದರೂ. 93. ಶ್ಲೇಷಾಲಂಕಾರ. ಗಾತ್ರತ್ರ = ಕವಚ. 94. ವದಾನ್ಯತೆ = ಔದಾರ್ಯ.

95. ಮಸಗಿ = ರೇಗಿ. ತುತ್ತು = ಕಬಳಿಸು. 96. ಎಱಿಲ್ವ = ಜೋಲುವ. ತವುವ = ಕ್ಷೀಣವಾಗುವ. ಏಱು = ಗಾಯ. 97. ಅದ್ವಯ = ಅಸಮಾನವಾದ. ಅಕ್ಷರ = ವ್ಯತ್ಯಾಸವನ್ನು ಹೊಂದದವನು. 98. ಅಚಳ = ಈಶ್ವರ. 100-101. ತ್ರಿಪದಿಗಳು. 102. ಆಳಿಪಂ = ದುರಾಶೆಯನ್ನು. 103. ಅಱಿಕ್ಕಾಡಿದರ್ = ನಿಶ್ಶೇಷರಾದರು. 104. ಕಱುತ್ತು = ಕೋಪಿಸಿ. ಅರ್ಪು = ಔದಾರ್ಯ. 105. ಅಳುಕಿ, ಬಳುಕಿ; ಹೊಸಗನ್ನಡ. ಕಡಂಗಲ್ = ಉತ್ಸಾಹವನ್ನು ಹೊಂದಲು. ಎಡಱಿಲ್ = ವಿರೋಧಿಸಲು. ಒಟ್ಟೈಯ್ಸಲ್ = ಜಯಿಸಲು. ಪಳಂಚಲ್ = ಹೊಡೆಯಲು. ಪೊಳೆಪು = ತೇಜಸ್ಸು, ಪ್ರತಾಪ. ನೆಱೆವರೆ = ಸಮರ್ಥರಾಗುವರೆ? 106. ಅಳ್ಕಿಸಲ್, ಹೊಸಗನ್ನಡ. ಚಾಳಿಸು = ಅಲ್ಲಾಡಿಸು, ಅಡಗಿಸು. ಅಳಱಿಸು = ಹೆದರಿಸು. 107. ಕಡುಪು = ದರ್ಪ. ತಾತ್ಪರ್ಯ—ನಿನ್ನನ್ನು ಇದಿರಿಸಲು ಶಿವನಿಗೊಬ್ಬನಿಗೇ ಸಾಧ್ಯ. 108. ಜಿದಿ = ಬ್ರಹ್ಮ. 109. ಪೋಲ್ಕೆ = ಸಮನಾಗಲಿ. ಬೆಸೆಯದಿರ್ = ಗರ್ವಿಸಬೇಡ. ಎಂಬ = ಎನ್ನುತ್ತೀಯೋ. ಸಿಂಧೂದ್ಭವಂ = ಭೀಷ್ಮ. ನಿಂದಾಸ್ತುತಿ. 112. ಉರ್ಚಿದೊಡೆ = ಎಳೆದರೆ. 115. ಅಲಗು = ಆಯುಧ. ಅಣಿಯರಂ = ಹೆಚ್ಚಾಗಿ. 116. ಆರ್ತು = ? ಸಂಪೂರ್ಣವಾಗಿ. ಅರ್ತಿ, ಅರ್ಥಿ, ಅಱ್ತಿ = ಆಶೆ. ನೆಟ್ಟೆರೆದ? ನೆಟ್ಟನೆ ಯಾಚಿಸಿದ. 117. ಪುದು = ಭಾಗಿಯಾಗುವುದು. ಪದುಳಂ = ಸುರಕ್ಷಿತವಾಗಿ. 118. ನೆಱಿವು = ಪೂರ್ತಿ. 119. ಬೆಳಪ = ಬೆಳಗುವ. 120. ಅಂಕದ = ಪ್ರಸಿದ್ಧವಾದ. ರಸಾ = ಭೂಮಿ. ಎಲ್ಲಿತ್ತು = ಎಲ್ಲಿಯದು. 121. ಮಡಗು = ಬಚ್ಚಿಡು. ಪಡಲ್ವಡಿಪ = ನಾಶಮಾಡುವ. ಕೆಯ್ದು = ಆಯುಧ. ದಾಂಗುಡಿವಿಡೆ = ಹಬ್ಬಲು. ಕ್ಷಣ = ಸಂತೋಷ. 123. ಉರ್ವರೆ = ಭೂಮಿ. ಪ್ರತಿಪನ್ನಘುಂದರ = ಮಂದರಧೀರ. 125. ಒಱಲು = ಪ್ರೀತಿಸಿ. ಎಡರ್ = ಬಡತನ.

127. ಉಪಧಾ = ಗುಣಪರೀಕ್ಷೆ. 128. ಕೂಡಬಟ್ಟೆಗೆ? ತಿಟ್ಟಮಿಡು= ಚಿತ್ರಿಸು. ಅಡರ್ಪು = ಅವಲಂಬನ. ಏವಣ್ಣಿಪಂ = ಏನುವರ್ಣಿಸುವನು? 129. ಕೞನಿ=ಗದ್ದೆ. ಎರಡು = ಎರಡು. 131. ದಹಳೆ = ಚೇದಿರಾಜ್ಯ. ತಿವುಳಂ= ತಿಗುಳ. ಗುಂದುಗೊಳ್ = ? ಮರೆಯಾಗು. 132. ಕ್ರಮಾಲಂಕಾರ. ಅಸದಳ= ಅಸಾಧ್ಯ. ಅಣ್ಮುಕೆಟ್ಟಿಂದುದು=? ಕಷ್ಟವಾಯ್ತು. ಅದರುಂಬೀಡಿಗೆ? ಇಂದ್ರೇಜ್ಯ= ಬೃಹಸ್ಪತಿ. 133. ಉಂತು=ಸುಮ್ಮನೆ. 134. ಒರೆ=ಸಮಾನ. 135. ಕಱಂಗು= ಕಪ್ಪಾಗು. ಅಮೃತಧಾಮ = ಚಂದ್ರ. ಕರ=ಕಿರಣ. ಪೀಯೂಷ = ಅಮೃತ. 136. ವಲ್ಲರಿ = ಲತೆ. ಬಂಬಣಬಾಡು = ಹೆಚ್ಚಾಗಿ ಬಾಡು. ಪಾಡು = ಸ್ಥಿತಿ. ಬಿತ್ತರ = ವಿಸ್ತಾರ. 137. ಸರದೀನಿ = ? ಸರಸ್ಸಿನಲ್ಲಿ ಆಹಾರವನ್ನು ಪಡೆವುದು— ಪುಷ್ಪ, ಮೀನು ಇತ್ಯಾದಿ. 138. ಮಹಿ = ಜನರು. 139. ಎಳೆ = ಭೂಮಿ. ಬಿಣ್ಪು = ಸ್ಥಿರತೆ. ಗುಣ್ಪು = ಆಳ, ಗಾಂಭೀರ್ಯ. ತಿಣ್ಪು = ಭಾರ. ಪಾರಾವಾರ= ಸಮುದ್ರ. ಅಸುರ = ಹಿರಣ್ಯಾಕ್ಷ. ಅನಿಮಿಷನಗ = ಮೇರು, ಮಂದರ. 140. ವಾಕ್ಯವೇಷ್ಟನ. 141. ಇನಸೂನು=ಕರ್ಣ. 142. ಯಮಸುತ=ಧರ್ಮರಾಯ. 144. ಕೇಣ=ಮತ್ಸರ. ಎಗ್ಗು=ನಾಚಿಕೆ. 145. ಇರ್ಕೆ = ಇರಲಿ. ದೂಱಿಪಳ್= ನಿಂದಿಸುವಳು. 146. ಅಱ್ತಿಗ = ಪ್ರೀತಿಯುಳ್ಳವನು. ಪಸುಗೆಗೋಜ = ? ದಾನಕ್ಕೆ ಆಚಾರ್ಯ. 147. ತಾರ=ತೊಳಗುವ. 148. ಆದಿರದೆ = ಹೆದರದೆ. ಚಪ್ಪರಿಪ= ಶಬ್ದಮಾಡುವ. ಕಪ್ಪರಿಪ? ಮರಲ್ = ಹಿಂದಿರುಗು. ಏಱು=ಗಾಯ. ಗೇಣ್= ಕತ್ತಿ. 151. ಕುಳಿಶಾಗಾರ = ವಜ್ರಪಂಜರ. 152. ಮಱುವಕ್ಕ = ಮಾರ್ಬಲ. 153. ನಿಧಾನ = ನಿಧಿ. 154. ಹರಿ = ವೇಗ. 156. ಮುಟ್ಟಮಿರು = ಮೌನ ವಾಗಿರು. ಚಾರ್ವಕ = ಚಾರ್ವಾಕ, ? ವಕ್ರಗತಿಯುಳ್ಳವನು. 157. ತಗೆ ಯಲ್ = ಸ್ತಂಭೀಭೂತನಾಗಲು: ಸತ್ಯರ್ಥದಲ್ಲಿ ಅಲ್ ಬಂದಿದೆ. ತಿಪ್ಪಿಕೊಂಡು ? ಸುಗತಂ=ಬೌದ್ಧ. ಲೋಕಾಯುತ=ಚಾರ್ವಾಕ. ತೂಳ್ದು=ಓಡಿಸು. 158. ಗುಣ ವ್ರತ 3—(1) ದಿಗ್ವ್ರತಪರಿಮಾಣ, (2) ಉಪಭೋಗಪರಿಭೋಗಪರಿಮಾಣ, (3) ಅನರ್ಥದಂಡ. 160. ಹರಿಪುತ್ರ=ಅರ್ಜುನ, ಕರ್ಣ, ಮನ್ಮಥ. 161. ತಾರಕಾದ್ರಿ= ಕೈಲಾಸ. ದುಗುಧ=ದುಗ್ಧ, ಹೊಸರೂಪ. 162. ಪ್ರತತಿ=ಸಮೂಹ. 163. ಬನ್ನ= ಭಂಗ. ಸರಿಸ=ಸಮಾನ. 164. ಪೆಡಱು, ಪೆಳಱು = ಹೆದರು. 165. ಬಯ್ಕೆ= ನ್ಯಾಸ. ಎಂದಪೆ, ಹೊಸರೂಪ. 166. ಊಡಿಟ್ಟಂ=ಊರೆಕೊಟ್ಟನು.

169. ಅರುಣಜಳ = ರಕ್ತ. ಪಡೆವಳ = ಸೇನಾಪತಿ. 170. ಘನಾಘನ= ಮೇಘ. 172. ಚುನ್ನಂ=ನಿಂದೆ. ಮನ್ನೆಯರ=ಪ್ರಭುಗಳ. ಆಳ್ಪೊತ್ತುವ=? ಎತ್ತುವ. 173. ತುಹಿನದೀಧಿತಿ=ಚಂದ್ರ. 174. ಜತ್ತಕ=ದತ್ತಕ, ವೈಶಿಕಸೂತ್ರಕಾರ. 175. ಅಣಲೆ=54 ನ್ನು ನೋಡಿ. ಮೂವಣ್ಣಂಬರಿಸಿ=ನಾಚಿಕೆಗೆಡಿಸಿ. 176. ಕುತ್ಸೀಳ=

ಪರ್ವತ. ಕೀಱ್ = ಕಡಿವಾಳ. 181. ಅಸುಂಗೊಳೆ = ಬೆರಗಾಗಲು. 182. ಬಳಂಬೆ = ರಾಶಿ. ಕೋಱ್ಮಿದುಳ್ = ಕೋಡುವ + ಮಿದುಳ್. ? ಅಗುಂತಿ = ರಾಶಿ. ಕರೋಟಿ = ಕಪಾಲ. 184. ತೊಂಡು = ? ಪರಾಕ್ರಮ. 191. ಅದಟು = ಪರಾಕ್ರಮ. ಅದಟಲೆದು = ಅಡಗಿಸಿ. 194. ಜಗದಳಂ = ? ನಾಶಕ. 197. **ಪುರುಷ**ಕಾರ = ಶೌರ್ಯ. 198. ತೊಡರ್ಬದರ್ = ರಾತಿ ? 199. ರಾಜನ್ವತಿ = ಒಳ್ಳೆಯ ರಾಜನನ್ನುಳ್ಳದು. 200 ಆಣೆ = ಆಜ್ಞೆ. ಗೋಸಣೆ = ಘೋಷಣೆ, ಸ್ತುತಿ. ಮುನ್ನೀರ್ = ಸಮುದ್ರ: ನದಿಯ ನೀರು, ಮಳೆಯ ನೀರು, ಒರತೆಯ ನೀರು ಈ ಮೂರನ್ನೂ ಉಳ್ಳದು. 201. ಲಪನ = ಮುಖ. 204. ತಿಱವೇೞ್ಕುಂ = ತೆರಬೇಕು. 205. ಶಫರ = ಮೀನು. 206. ಶ್ಲೇಷಾಲಂಕಾರ. ವಂಶ = ಪೀಳಿಗೆ, ಬಿದಿರು. 207. ವಂಶ, ಭೂಭೃತ್, ಕಂಟಕ—ಶ್ಲೇಷೆ. ಕಂಟಕ = ಮುಳ್ಳು, ದುಷ್ಟರು. 209. ಅಸುರ = ಹಿರಣ್ಯಾಕ್ಷ. ಅಱಿಯಾದ = ರೂಪುಗೆಟ್ಟ. ಸೇದೆ = ಶ್ರಮ. 210. ಭುಜಂಗ = ವಿಟ. 211. ಉದಗ್ರರು = ವೀರರು. ತೊೞ್ತುವೆಸ = ದಾಸ್ಯ. ಅಗುರ್ವಿನ = ಭಯಂಕರನಾದ. 212. ವಿಜೃಂಭಣ = ಹೆಚ್ಚಿಕೆ. 213. ರಕ್ಕೆ = ರಕ್ಷೆ. ಸಿಟ್ಟಯ್ದೆತನಂ = ದೀರ್ಘಸುಮಂಗಲೀತ್ವ. 214. ಆಲವಾಲ = ಪಾತಿ. 215. ಶ್ಲೇಷೆ. ವಿಬುಧ = ದೇವತೆಗಳು, ವಿದ್ವಾಂಸರು. ಭೋಗಿ = ಸರ್ಪ, ಭೋಗವುಳ್ಳವರು. 216. ಸೋಗೆ = ನವಿಲು. ಅಱ್ಕಿಸು = ಜೀರ್ಣಿಸು. ನಲ್ಲವರ್ = ನಲ್ಲರು, ಪ್ರಿಯರು. 214. ಜನ್ನವಿರ್ಪ = ಯಜ್ಞಮಾಡುವ. 219. ತ್ರಯೀ = ವೇದತ್ರಯ, ಋಗ್ಯಜುಸ್ಸಾಮಗಳು. ತ್ರಿಪಥಗಾ = ಗಂಗೆ. 220. ಶ್ಲೇಷೆ. ಗೋತ್ರ = ಪರ್ವತ, ವಂಶ. ಚಕ್ರ = ಚಕ್ರಾಯುಧ, ಗುಂಪು. ಸತ್ಯಭಾಮಾ = ಸತ್ಯಭಾಮೆ, ಸತ್ಯ ಕಾಂತಿ ಲಕ್ಷ್ಮಿ. 221. ಎಕ್ಕಲಾವಣ, 76. ನ್ನು ನೋಡಿ.

222. ನಿಲಿಂಪ = ಸುರ. 223. ಪುತ್ರಿಕೆ = ಪ್ರತಿಮೆ. ದೇಗುಲ, ದೇವಕುಲ = ದೇವಸ್ಥಾನ. 229. ಭುಂಭುಕ. 46, 113 ನ್ನು ನೋಡಿ. 231. ನಿಸಿದಿಗೆ = ಜೈನರಲ್ಲಿ ಸತ್ತವರ ಜ್ಞಾಪಕಾರ್ಥವಾಗಿ ನಡುವ ಕಲ್ಲು. ಹಿಮರೋಚಿ = ಚಂದ್ರ. ಸವ್ಯಸಾಚಿ = ಅರ್ಜುನ. 236. ಕ್ವಥಿತ = ಕುದಿವ. ಜಾಂಗಳ = ಮಾಂಸ. ಮಾಳ = ದಿಣ್ಣೆ, ಕಾಡು. ಕುಧರ = ಬೆಟ್ಟ. ಬಱ್ದನೇ = ಬಾಳಿದನೇ. 237. ತರವಾರಿ = ಕತ್ತಿ. ಒಱಲ್ದು = ಪ್ರೀತಿಸಿ. 238. ಪಾರ್ದು = ನಿರೀಕ್ಷಿಸಿ. ಕಿವಿವರ್ಚುವ = ಕಿವಿಯಲ್ಲಿ ಮೆಲ್ಲಗೆ ಹೇಳುವ. 240. ವ್ಯತಿಕರ = ತಡೆ, ಸೇರುವೆ. ಸಾಪತ್ನಿಕ = ಶತ್ರು. ಕೆಮ್ಮನೆ = ಸುಮ್ಮನೆ. 2±1. ಸ್ಥಾಸಕ = ಅನುಲೇಪನ. 243. ಝಳಪ್ಪ = ? ಶ್ರೇಷ್ಠ. ಕೌಕ್ಷೇಯಕ = ಕತ್ತಿ. ನಾಯಕದೊಳ್ = ನಾಯಕರತ್ನದೊಡನೆ. 244. ಮುತ್ತು, ಶ್ಲೇಷೆ. ಕಾಯ್ದು = ಕೋಪಿಸಿ. ಎತ್ತಲೊಡಂ = ಯುದ್ಧಕ್ಕೆ ಹೊರಟರೆ. 245. ಧರ್ಮ = ಧರ್ಮ, ಧನುಸ್ಸು. ಗುಣ = ಗುಣ, ಬಿಲ್ಲಿನ ಹಗ್ಗ. ದರ್ಪಕ = ಮನ್ಮಥ. ದಶಧರ್ಮ = ಕ್ಷಮೆ,

ಮಾರ್ದವ, ಆರ್ಜವ, ಶೌಚ, ಸತ್ಯ, ಸಂಯಮ, ತಪಸ್ಸು, ತ್ಯಾಗ, ಆಕಿಂಚನ್ಯ, ಬ್ರಹ್ಮ ಚರ್ಯ. ಷಟ್ತ್ರಿಂಶದ್ಗುಣ=ದ್ವಾದಶತಪಸ್ಸು, ದಶಧರ್ಮ, ಷಡಾವಶ್ಯಕ, ಪಂಚಾಚಾರ, ಗುಪ್ತಿತ್ರಯ. 248. ಈಂಟಲ್ = ಕುಡಿಯಲು. 249. ಇರಲಿ, ಹೊಸರೂಪ. ಕೊಪಣ = ಜೈನರಲ್ಲಿ ಪ್ರಸಿದ್ಧವಾದ ಕೊಪ್ಪಳ ಎಂಬ ಊರು. 251. ಕ್ರಮಾ ಲಂಕಾರ. 252. ನನ್ನಿ = ಸತ್ಯ. ಏಸು = ಬಾಣಪ್ರಯೋಗ. 255. ಇರುಮುಟ್ಟಿಂ= ಮೌನವಾಗಿರು. 256. ಅಪಘನ= ಮೇಘವಿಲ್ಲದುದು. ರೋದಸ್ಸು=ಆಕಾಶ. ಕುಱು ಪಿನ = ಪ್ರಸಿದ್ಧವಾದ. 259. ಪುದುವೆ, 117 ನ್ನು ನೋಡಿ. 263. ಪೇವೈಸು = ಅಸಹ್ಯಪಡು. 265. ಎಂಗೆ = ಎನ್ನಲಿ. 268. ಬೆಚ್ಚನಿಪ=ಬೆಚ್ಚಗೆಮಾಡುವ.

270. ಶ್ಲೇಷೆ. ಕುವಳಯ=ಭೂಮಂಡಲ, ನೆಯ್ದಿಲು. ಚಕ್ರ=ಗುಂಪು, ಚಕ್ರ ವಾಕ. ಸತ್ಪಥ=ಸನ್ಮಾರ್ಗ, ನಕ್ಷತ್ರಗಳ ಮಾರ್ಗ ಎಂದರೆ ಆಕಾಶ. ಪದ್ಮ=ಕಮಲ; ಪದ್ಮಾ=ಲಕ್ಷ್ಮಿ. 271. ಎಯ್ದನೇ=ಸಾಲನೇ. ದಾಮ=ಚೋಳರಾಜನ ಕಡೆಯ ಅಧಿಕಾರಿ. 272. ಕಂಕಣ=ನೀರಿನ ಕಣ. ಮುಱುಗಿಸುಗು, ಹೊಸರೂಪ. ಪರಿ ಯಿಡು=ದಾಳಿಯಿಡು. 273. ತಡವು=ಸವರಿಕೊಳ್ಳು. 274. ಆರ್ತ = ಪೂರ್ಣ ನಾದನು. 277. ಪಾಠೀನ = ಮೀನು. ಪ್ರವಾಳ = ಹವಳ. 279. ಕೋಡಿಡು= ಮೀರಿಸು. 280. ಬಾಡ=ಗ್ರಾಮ. ಏಡಿಪುದು=ತಿರಸ್ಕರಿಸುವುದು. 281. ದಾಂಗುಡಿ. ದಾಂಟು + ಕುಡಿ. ಶ. ಮ. ದ. ಸೂತ್ರ. 210. ಮಡಲಾಗಿ = ಉದ್ದವಾಗಿ ಬೆಳೆದು. 282. ಅಂತ್ಯದಲ್ಲಿ ಕೀರ್ತಿ ಎಂದು ಹ್ರಸ್ವದಲ್ಲಿ ನಿಲ್ಲುತ್ತದೆ. 285. ಪುಡವಿ = ಪೊಡವಿ, ಭೂಮಿ. ಕೋಡು = ದಾನ. 286. ಕಂದಖನಿತ್ರಂ = ಗೆಡ್ಡೆಗೆ ಗುದ್ದಲಿ. 288. ವಾರುವ=ಕುದುರೆ. ಹಾರುವ, ಹೊಸರೂಪ. ಬವರ=ಯುದ್ಧ. ಸವಂಗಂ? ಕಟ ಕಿಗ = ನೀಚ. ಅಳಿಱು = ಕೆಸರು. 289. ಅಕ್ಕರ. ತಿಗುಳರ್ = ಚೋಳರು. ರಾಯ = ಚಾಮುಂಡರಾಯ. 291. ಸನ್ಯಸನವಿಧಿ = ಅನಶನವ್ರತ. ಅತ್ತಳಗಂ= ಅಧಿಕ. 292. ತನುತ್ರ=ಕವಚ. ಕಿಱು=ಮುಚ್ಚು. 296. ತೆಪ್ಪುತ್ತು=? ಅವಕಾಶ ವನ್ನು ಹೊಂದಿ. 297. ದಾನ = ದಾನ, ಮದದ ನೀರು. 299. ವಂಶ = ಕುಲ, ಬೆನ್ನಿನ ಮೂಳೆ. ಭದ್ರ=ಮಂಗಳ, ಆನೆಯಲ್ಲಿ ಭೇದ. ಧ್ವಜಿನಿ=ಸೇನೆ. 301. ಕೇವ ಳಮ=ಸಾಧಾರಣವ.

202. ವೆರಗು=? ಅವಲಂಬನ. ರಕ್ಕೆವಣಿ=ರಕ್ಷಾಮಣಿ. ತಾಳ್ದು=ಹೊಂದು. 303. ಈವ + ಇಱಿವ. 304. ಲೋಗರ=ಜನರ. ಇರಲಿ, ಹೊಸರೂಪ. 249 ನ್ನು ನೋಡಿ. ಕೋಳ್=ಕೊಳ್ಳಿ. ದಲ್=ನಿಶ್ಚಯ. 305. ಚಾಣಕ್ಯ=ಚಂದ್ರಗುಪ್ತನ ಮಂತ್ರಿ. ಮೊನೆ=ಯುದ್ಧ. ಸೌಪರ್ಣ = ಗರುಡ. ಕಾರ್ಯ=ಮಂತ್ರಿಕಾರ್ಯ. 306. ಶ್ಲೇಷೆ. ಪದ್ಮಾಕರ = ಸರಸ್ಸು, ಲಕ್ಷ್ಮಿಯ ಕೈ. 307. ವಿದಗ್ಧತೆ = ವೈದುಷ್ಯ.

308. ಅಡಂ=ಹೆಚ್ಚಾಗಿ. 310. ಕಲ್ಲುವೆಸ = ಕಲ್ಲು ಕೆಲಸ. ಕೌಂಗು = ಅಡಕೆ. ಮಿಡುಕು=ಚಲಿಸು. 31ತ. ದಶಾನನತೆ=ರಾವಣತ್ವ, ಹತ್ತು ಮುಖಗಳನ್ನು ಹೊಂದಿರುವಿಕೆ. 314. ಅಲಿಕಲ್ = ವರ್ಷೋಪಲ. ತವುವಿನೆಗಂ = ನಿಶ್ಶೇಷವಾಗಲು. ಪಿಟ್ಟು=ಹುಡಿ. 315. ರುಚಿ = ಆಶೆ, ಕಾಂತಿ. 317. ಆತಪವಾರಣ = ಕೊಡೆ. 318. ವಾರುಣಿ=ಪಶ್ಚಿಮದಿಕ್ಕು, ಸುರೆ. ಸತ್ಪದ=ಆಕಾಶ, ಒಳ್ಳೆಯ ಸ್ಥಾನ. ದೋಷಾಕರ=ಚಂದ್ರ, ದೋಷಿ. ವೃತ್ತ=ನಡತೆ, ಗುಂಡಗಿರುವುದು. 319. ಕರಂಡಕ=ಬರಣಿ. ಪಡಿ=ಸಮಾನ. 320. ಗತಿಗಂ=ಸದ್ಗತಿಗೂ. ಭಾಜನ=ಪಾತ್ರ. 321. ಕರ್ಚು= ತೊಳೆ. 322. ಕಾಶ್ಮೀರ = ಕುಂಕುಮದ ಹೂ. 323. ದೊರೆಗಳ್ = ಸಮಾನರು. ರಾಯರ್ = ಅರಸರು. 324. ಅಮರ್ದು = ಅಮೃತ. ವಿಳಂಬಂ = ಅವಲಂಬನ. ಅಳುಂಬಂ = ಅಧಿಕ. 325. ನೋೞ್ಕೆ = ನೋಡಲಿ. ಸೆಣಸು = ಪ್ರತಿಭಟಿಸು. ಜವ=ಯಮ. 326. ಪುರುಷವ್ರತ=ಪಾತಿವ್ರತ್ಯ. 328 ಬೆಸನ=ಆಸಕ್ತಿ, ಚಿಂತೆ. ನೋಂಪಿ=ವ್ರತ. 330. ಅಳ್ಕುಱದೆ=ಭಯವನ್ನು ಹೊಂದದೆ. 331. ಬಿದಿರ್ದು= ಹರಡಿ. ಬಾೞ್ಪಲೆಗೊಂಡು=ಜೀವದೊಂದಿಗೆ ಹಿಡಿದು. ತೊತ್ತುೞಿದುೞಿದು=ಪಿಂಡವಾಗುವಂತೆ ತುಳಿದು. 332. ಶಾಂತಲದೇವಿ. 282 ನ್ನು ನೋಡಿ. 333. ಓತು= ಪ್ರೀತಿಸಿ. ಉದ್ದಾನಿ=ಆಧಿಕ್ಯ.

334. ವಾಕ್=ಕರ್ತೃ : ಸಂಸ್ಕೃತಪ್ರಕೃತಿ. 335. ವೇದಂಡ=ಆನೆ. ದಂಡಧರ=ಯಮ. 336. ಲತಾಂತ=ಪುಷ್ಪ. ತೂಳ್ದು=ಬೆನ್ನಟ್ಟಿ. ದೂಸಱಿಂ=ಕಾರಣದಿಂದ. ಕತ್ತಳಂ=ಕವಚ (ತೆಲುಗು). 338. ಅಪ್ಪುಕೆಯ್=ಸ್ವೀಕರಿಸು. 339. ಮಿತ್ತು=ಮೃತ್ಯು. ಕೊಯ್ವಿನಿಂ = ? ಹತಿಯಿಂದ. ಕಡೆಗಣ್ಣು = ಹಿಂಜರಿ. 340. ತೆತ್ತಿಸು=ಕೆತ್ತಿಸು. 341. ಪಂಚಪಾದವೃತ್ತ. ಆಭೀಳ=ಭಯಂಕರವಾದ. ಗಂಡಪೆಂಡಾರ = ವೀರಶ್ರೇಷ್ಠ. 343. ಎಡಗಲಿಸಿ = ? ದಾಟಿ. 344. ಉದೀರ್ಣ= ಎದ್ದ. ಸಂವರ್ತಗರ್ತ=ಪ್ರಳಯಕಾಲದ ಹಳ್ಳ. 345. ರಾಜ=ದೊರೆ, ಚಂದ್ರ. 348. ಆದಿಯಮ, ನೃಸಿಂಹವರ್ಮ: ಇವರು ಚೋಳರಾಜನ ದಂಡನಾಯಕರು. ಱೋಡಿಸಿ= ಪರಿಹಾಸಮಾಡಿ. ಚೆಂಗಿರಿ, ಒಬ್ಬ ಅರಸು. 349. ಸ್ಯಾದ್ವಾದ=ಜೈನರಲ್ಲಿ ಸಪ್ತಭಂಗಿ ಎಂಬ ಸಿದ್ಧಾಂತ. 350. ಮಹೀಭೃತ್=ರಾಜ, ಪರ್ವತ. 351. ಶೈಲೂಷ=ನಟ. 355 ಅಡಪು=ಆಧಾರ. ಮುಯ್ಮೆ=ಮಹಿಮೆ. 356. ಕಡಿತಲೆ=ಕತ್ತಿ. ಪಲಗೆಯುಮ= ಗುರಾಣಿಯುನ್ನೂ; ದ್ವಿತೀಯೆಯ ಬಿಂದುವಿಲ್ಲ. 357. ಒಲ್ಕಣಿ = ? ವೀರ. ಆರ್= ಕೂಗು, ಗರ್ಜಿಸು. 358. ರಸೆ=ಭೂಮಿ, ಪಾತಾಳ. 359. ಮಾನಸಿಕೆ=ಮನುಷ್ಯತ್ವ , ದೊಡ್ಡಸ್ತಿಕೆ. ಪರಿವಾದ = ನಿಂದೆ. ವಿಶ್ವಂಭರೆ = ಭೂಮಿ. 360. ದೋರ್ವಾಸ=ತೋಳಿನಲ್ಲಿ ವಾಸ. 361. ಅಳವೞಿದ=ಬಲವಳಿದ. ಲಾಲಾ=

ಜೊಲ್ಲು. 362. ಬೆಸಕೆಯ್ದು=ಸೇವೆಮಾಡಿ. ಎಂದುದನೆಂದು=ಆಜ್ಞೆಯನ್ನು ವಹಿಸಿ. ದೇವರಾಜ್ಯಸಲ್ಲೀಲೆಯೊಳೆಯ್ದಿಪಂ = ಸ್ವರ್ಗಕ್ಕೆ ಕಳುಹುವನು, ಕೊಲ್ಲುವನು. 363. ಆರ್ತತೆ=ದುಃಖ. ರಾಗ = ಸಂತೋಷ. ಸನಾಥತಾ = ಪೋಷಕನನ್ನು ಪಡೆವಿಕೆ. 364. ಮಣಿಯದ=ಬಾಗದ. ಅಣಿಯರಂ=ಹೆಚ್ಚಾಗಿ. ಉಡೆವಣಿ=ಕಟಿಸೂತ್ರದ ಆಭರಣ.

367. ಸೋಮವಲ್ಲಭಂ=ಸೋಮರಾಜನೆಂಬ ಚಂದ್ರ. 368. ಅವ್ಯಪಗಮ= ಅನಿವಾರಣ. 369. ಲಾಸ್ಯ=ನರ್ತನ. 371. ದಳ್ಳುರಿ=ಚಂಡಜ್ವಾಲೆ. ಮುಱಿಗೆ= ಶಾಂತವಾಗು. ಶುದ್ಧಾಂತ = ಅಂತಃಪುರ. ಕುಂತಳ, ಕಾಂಚಿ, ಧಾರೆ: ರಾಜ್ಯಗಳು. 375. ಶ್ಲೇಷೆ. ವಿಬುಧ=ಪಂಡಿತ, ಸುರ. ಭೋಗಿ=ಸುಖಿ, ಸರ್ಪ. ಧನದ=ದಾತೃ, ಕುಬೇರ. 376. ಒಡಮೆ=ವಸ್ತು. 377. ಕ್ಷಮೆ=ಭೂಮಿ, ಸಹನ. ನಗರಂಗಳ್= ವರ್ತಕರು. 378. ಶರಭರಿಪು = ಗಂಡಭೇರುಂಡ. 380. ಕಳ = ಯುದ್ಧರಂಗ. ಎಕ್ಕತುಳ = ? ದ್ವಂದ್ವಯುದ್ಧ. ಎಳೆ = ಭೂಮಿ. ಅವ್ವಳಿಸು = ಆತುರಿಸು. 381 ಮಾದೇವ = ಮಹಾದೇವ. 382. ನಿಮ್ಮದದ = ? ದೋಷರಹಿತವಾದ. 383. ಉತ್ತತ=ವ್ಯಾಪ್ತವಾದ. 384. ಅಣೆ=ಹೊಡೆ. ಅದಿರ್ಪು=ನಡುಗಿಸು. ನೊಣೆ= ಕಬಳಿಸು. ಅಂಡಲೆ=ಪೀಡಿಸು. 385. ತಿಣ್ಪು = ಸ್ಥಿರತೆ 386. ಖಚರನಾಯಕ= ಜೀಮೂತವಾಹನ. ಅರ್ಪು = ? ರಕ್ಷಣೆ. ಗಂಡು = ಪರಾಕ್ರಮ. 388. ಅತೀವ= ಪೂರ್ಣವಾಗಿ ಕೊಡುವ. ಎಸಕಂ = ಕಾಂತಿ. 389. ಎನ್ನ = ಎನ್ನು. 390. ತಾತ್ಪರ್ಯ= ಆಸಕ್ತಿ. ಗೋತ್ರ = ವಂಶ. 391. ಕಲ್ಗೆಗೊಂಡ = ತೋಡಲ್ಪಟ್ಟ (ತಮಿಳು). ಪೆಟ್ಟು= ಬೆಟ್ಟ. ವಟ್ಟೆ, ಬಟ್ಟೆ = ಮಾರ್ಗ. 392. ಅಟಂದು = ಇರಿದು: ಧಾತು ಅಟರ್. ಎಂದೋಲೆಗೆ = ಮಾಡಿದ ಅಜ್ಞೆಗೆ. ಬೆಸ = ಸೇವೆ. 393. ಅತ್ತಳಗಂ = ಅಧಿಕ. 394. ವಾಕ್ಯವೇಷ್ಟನ. ಕಃಕೇನಾರ್ಥೀ= ಅರಿಗೇನು ಬೇಕು?

395. ಅದಟು=ಪರಾಕ್ರಮ. ಅರ್ಪು=ಶಕ್ತಿ. ಅಣ್ಮು = ಸಾಹಸ. ವಂದಿ= ಸ್ತುತಿಪಾಠಕ. ಚಾಗ=ತ್ಯಾಗ. ಕಃಕೇನಾರ್ಥೀ, 394 ನ್ನು ನೋಡಿ. 396. ಅಗುಂದಲೆ=ಅಧಿಕ. 397. ಸತ್=ನಕ್ಷತ್ರ ಕುಭೃತ್ = ರಾಜ. 398. ಜನತಾ=ಜನ ಸಮೂಹ. 399. ಎಲ್ವು = ಎಲುಬು. ಒಱೆದು=ಸ್ರವಿಸಿ. 400. ಕೂರ್ಪು= ತೀಕ್ಷ್ಣತೆ, ಪ್ರೀತಿ. ಅದಂ = ಹೆಚ್ಚಾಗಿ. 401. ಅಂತಂ = ಅಂತವನ್ನು, ಪ್ರಕೃತಿ ಅಂತು. 402. ಪೊಡರದೆ=ಚಲಿಸದ. ಬೆಸಕೆಯ್ದುದು = ವಶವಾಯ್ತು. ಕೃಪಾಣ = ಕತ್ತಿ. 403. ಅವಲೇಪ = ಗರ್ವ. ವಿಸ್ಫಾಳನಂ = ನಾಶಮಾಡುವವನು. 404. ಭೂಮಿಯೆಂಬ ಸ್ತ್ರೀಗೆ ಕೊಟ್ಟಿರುವ ವಿಶೇಷಣಗಳಲ್ಲಿ ಅಂಗ ಮೊದಲಾದ ದೇಶಗಳೂ ಸರಸ್ವತಿ ಮೊದಲಾದ ನದಿಗಳೂ ಉಕ್ತವಾಗಿವೆ. 405. ತೊದಳ್ = ಸುಳ್ಳು.

